ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮಾನವ ಸಂಘಜೀವಿ. ಸಮಾಜವು ವ್ಯಕ್ತಿಗಳಿಂದ ನಿರ್ಮಾಣಗೊಳ್ಳುತ್ತವೆ. ಒಂಟಿ ೀವನವು ಮಾನವ ಪ್ರಕೃತಿಗೆ ವಿರುದ್ಧವಾಗಿದೆ. ಇಸ್ಲಾಮ್ ಸಾಮೂಹಿಕತೆಗೆ ಒತ್ತು ಕೊಡುವ ರ್ಮವಾಗಿದೆ. ಅದರ ಎಲ್ಲಾ ಆರಾಧನಾ ಕರ್ಮಗಳು ಮನುಷ್ಯನನ್ನು ಸಾಮೂಹಿಕತೆ ಡೆಗೆ ಸಾಗಿಸುತ್ತದೆ. ಆದ್ದರಿಂದ ಸಾಮೂಹಿಕ ಬದುಕು ಮನುಷ್ಯನಿಗೆ ಅನಿವಾರ್ಯವಾಗಿದೆ. ಮಾಜದಲ್ಲಿ ಒಳಿತನ್ನು ಸಂಸ್ಥಾಪಿಸಲು ಮತ್ತು ಕೆಡುಕನ್ನು ನಿರ್ಮೂಲನೆ ಮಾಡಲು ಒಂಟಿ ್ರಯತ್ನದಿಂದ ಸಾಧ್ಯವಿಲ್ಲ. ಅದಕ್ಕೆ ಸಂಘಟನೆಯ ಅಗತ್ಯವಿದೆ.

ಮುಸ್ಲಿಮ್ ಸಮುದಾಯದ ಪ್ರಸಕ್ತ ಸ್ಥಿತಿಗೆ ಸಾಮೂಹಿಕ ಪ್ರಜ್ಞೆಯ ಕೊರತೆಯೇ ಾರಣವಾಗಿದೆ. ''ಅಲ್ಲಾಹನ ಪಾಶವನ್ನು ಬಿಗಿಯಾಗಿ ಹಿಡಿಯಿರಿ, ಭಿನ್ನ ಭಿನ್ನರಾಗದಿರಿ'' ಎಂಬ ಲ್ಲಾಹನ ಆದೇಶದಂತೆ ಬದುಕಬೇಕಾದ ಒಂದು ಸಮುದಾಯ ಭಿನ್ನ ಭಿನ್ನವಾಗಿದೆ. ಅನೇಕ ಕ್ಷ ಪಂಗಡಗಳಲ್ಲಿ ಅವರು ಹರಿಹಂಚಿ ಹೋಗಿದ್ದಾರೆ. ಇದರಿಂದಾಗಿ ಸಮುದಾಯದ ಶಕ್ತಿ ಥಿಲಗೊಂಡು ಅದರ ಲಾಭವನ್ನು ಮಿಥ್ಯ ಶಕ್ತಿಗಳು ಪಡೆಯುತ್ತಿದೆ.

'ಇಸ್ಲಾಮ್ ಮತ್ತು ಸಂಘಟನೆ' ಎಂಬ ಕೃತಿಯು ಖ್ಯಾತ ವಿದ್ವಾಂಸರಾಗಿದ್ದ ಮರ್ಹೂಮ್ ೌಲಾನ ಸದ್ರುದ್ದೀನ್ ಇಸ್ಲಾಹಿಯವರ 'ಇಸ್ಲಾಮ್ ಔರ್ ಇಜ್ತಿಮಾಹಿಯ್ಯತ್' ಎಂಬ ಉರ್ದು ್ರಂಥದ ಕನ್ನಡಾನುವಾದವಾಗಿದೆ. ಸನ್ಮಾರ್ಗ ವಾರಪತ್ರಿಕೆಯ ಸ್ಥಾಪಕ ಸಂಪಾದಕರಾಗಿದ್ದ ುರ್ಹೂಮ್ ಇಬ್ರಾಹೀಮ್ ಸಈದ್ ಅವರು ಇದನ್ನು ಅನುವಾದಿಸಿದ್ದು 'ಸನ್ಮಾರ್ಗ'ದಲ್ಲಿ ಾರವಾಹಿಯಾಗಿ ಪ್ರಕಟಗೊಂಡಿತ್ತು. ಸಮುದಾಯದ ಇಂದಿನ ಪರಿಸ್ಥಿತಿಗೆ ಈ ಕೃತಿಯ ್ರಕಟನೆಯು ಅಗತ್ಯವೆಂದು ತೋಚಿದ ಹಿನ್ನೆಲೆಯಲ್ಲಿ ಸಮುದಾಯದ ಹಿತದೃಷ್ಟಿಯಿಂದ ಿದನ್ನು ಪ್ರಟಿಕಸುತ್ತಿದ್ದೇವೆ.

ಧರ್ಮ ಸಂಸ್ಥಾಪನೆಯು ಮುಸ್ಲಿಮ್ ಸಮುದಾಯದ ಧ್ಯೇಯವಾಗಿದ್ದು ಅದಕ್ಕಾಗಿ ಪರಿಶ್ರಮಿಸಬೇಕಾದುದು ಸಮುದಾಯದ ಒಟ್ಟು ಬಾಧ್ಯತೆಯಾಗಿರುವಾಗ ಅದನ್ನು ಸಂಘಟಿತ ಪ್ರಯತ್ನದಿಂದಲೇ ಸಾಧಿಸಬಹುದು. ಅದು ಯಾವುದೇ ಗುಂಪು ಅಥವಾ ಸಂಘಟನೆಯ ಸ್ವತ್ತಿಗೆಯಲ್ಲ. ಈ ನಿಟ್ಟಿನಲ್ಲಿ ಈ ಗ್ರಂಥದ ಅಧ್ಯಯನವು ಸಮುದಾಯವನ್ನು ಹೊಣೆ ನಿರ್ವಹಣೆಗಾಗಿ ಪ್ರೇರೇಪಿಸಲಿ ಎಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಸಾಮೂಹಿಕ ಜೀವನ

## ಾನವ ಪ್ರಕೃತಿ ಮತ್ತು ಸಾಮೂಹಿಕತೆ

ಒಂದು ಮಗುವಿನ ಬಗ್ಗೆ ಆಲೋಚಿಸುವಾಗ ತಾಯಿಯ ಮಡಿಲಿನ ಬಗ್ಗೆಯೂ ಜವಾಗಿಯೇ ಆಲೋಚನೆ ಹರಿಯುತ್ತದೆ. ಹಾಗೆಯೇ ಮನುಷ್ಯ ಜೀವನದ ಬಗ್ಗೆ ಿಸುವಾಗ ಸಾಮೂಹಿಕತೆಯ ಬಗ್ಗೆ ಗಮನ ಹರಿಯುವುದೂ ಸ್ವಾಭಾವಿಕ. ಯಾವ ಾದಲ್ಲೂ ಮನುಷ್ಯನು ಸಾಮೂಹಿಕತೆಯಿಂದ ಸಂಪೂರ್ಣ ಮುಕ್ತನಾಗಿ ಬದುಕಿದ್ದಿಲ್ಲ. ಹಾಸದ ಅತ್ಯಂತ ಕರಾಳ ಮೂಲೆಗಳಲ್ಲೂ ನಮಗೆ ಸಾಮೂಹಿಕ ಬದುಕಿನ ಕುರುಹುಗಳು ುತ್ತವೆ. ಇನ್ನೂ 'ನಾಗರಿಕತೆ' ಬೇರು ಬಿಡದೆ ಇದ್ದಾಗ, ಮನುಷ್ಯನು ಇನ್ನೂ ಗುಹೆಗಳಿಂದ ರ ಬರದಿದ್ದಾಗ, ಧಾನ್ಯ ಬೆಳೆಯುವ ಅಥವಾ ಬಟ್ಟೆ ತಯಾರಿಸುವ ಬಗ್ಗೆ ಆಲೋಚನೆಯೇ ುಡದೆ ಇದ್ದಾಗ ಮತ್ತು ಅವನು ಬದುಕಿಗಾಗಿ ಮರ, ನೆರಳು, ಹಣ್ಣು, ತರಕಾರಿಗಳನ್ನೇ ಕೊಂಡಿದ್ದಾಗ ಕೂಡಾ ಅವನು ಏಕಾಂಗಿಯಾಗಿ ಬದುಕದೆ ಕುಟುಂಬಗಳ ರೂಪದಲ್ಲಿ ಡಿ ಬಾಳುತ್ತಿದ್ದ. ಈ ಸಾಮೂಹಿಕತೆಯೇ ಅವನಲ್ಲಿ ಬದುಕಿನ ತೊಟ್ಟಿಲಾಗಿತ್ತು. ಕ್ರಮೇಣ ನಲ್ಲಿ ನಾಗರಿಕತೆಯ ಒಲವು ಹೆಚ್ಚುತ್ತಾ ಹೋದಂತೆ ಸಾಮೂಹಿಕ ಬದುಕಿಗೆ ಬೇಕಾದ ಲ ಅವಕಾಶಗಳು ತೆರೆದುಕೊಳ್ಳುತ್ತಾ ಹೋದುವು. ಸಮೂಹ ಪ್ರಿಯತೆ ಹೆಚ್ಚುತ್ತಾ ಯಿತು. ಬರು ಬರುತ್ತಾ ಕುಟುಂಬ ಘಟಕಗಳು ಬುಡಕಟ್ಟುಗಳಾಗಿ, ಬುಡಕಟ್ಟುಗಳು ಂಗಗಳಾಗಿ, ಜನಾಂಗಗಳು ರಾಷ್ಟ್ರಗಳಾಗಿ ಬೆಳೆಯುತ್ತಾ ಹೋದುವು. ಇದೀಗ ರಾಷ್ಟ್ರಗಳ ಪದಲ್ಲಿರುವ ಸಮೂಹಗಳು ಜಾಗತಿಕ ಸಮೂಹವಾಗಿ ಮಾತ್ರವಲ್ಲ ಒಂದು ಜಾಗತಿಕ ನುಷ್ಯ ಕುಟುಂಬವಾಗಿ ಬೆಳೆಯುವ ಹಂತದಲ್ಲಿವೆ.

ಮನುಷ್ಯನ ಈ ಪ್ರವೃತ್ತಿ ಈ ರೀತಿ ನಿರಂತರ ವಿಕಾಸಶೀಲವಾಗಿ ಮುಂದುವರಿಯುತ್ತಿರು ೇಕೆ? ಮನುಷ್ಯನು ಆರಂಭದಿಂದಲೇ ಸಾಮೂಹಿಕತೆಯೆಡೆಗೆ ಒಲವು ತೋರಲಾರಂಭಿಸಿ ೆ? ಕಾಲ ಬದಲಾದಂತೆ ಅವನ ಈ ಒಲವು ಹೆಚ್ಚುತ್ತಾ ಪರಿಷ್ಕೃತವಾಗುತ್ತಾ ಹೋದುದೇಕೆ? ಈ ಗ್ನೆಗಳಿಗೆ ಉತ್ತರವಾಗಿ ನಾವು ಮನುಷ್ಯನನ್ನು ಅವನ ಇತರ ಸಹಜೀವಿಗಳ ಜೊತೆಗೆ ಬೆಸೆದಿಡುವ ಷ್ಟು ಇತರರೊಂದಿಗೆ ಕೂಡಿ ಬಾಳುವಂತೆ ಅವನನ್ನು ನಿರ್ಬಂಧಿಸುವ ಹಾಗೂ ಪ್ರತ್ಯೇಕ ವಾ ಏಕಾಂತ ಜೀವನ ಸಾಗಿಸದಂತೆ ಅವನನ್ನು ತಡೆಯುವ ಯಾವುದೋ ಕೆಲವು ಬಲವಾದ

ಕಾರಣಗಳು ಖಂಡಿತ ಇವೆ ಎಂಬುದನ್ನು ಒಪ್ಪಬೇಕಾಗುತ್ತದೆ. ನಾವು ಮಾನವ ಸ್ವಭಾವ ಅಭ್ಯಸಿಸಿದರೆ ಈ ಪ್ರವೃತ್ತಿಗೆ ಮೂಲತಃ ಎರಡು ಕಾರಣಗಳಿರುವುದನ್ನು ಗುರುತಿಸಬಹು 1. ಸಹಜೀವಿಯ ಆಕರ್ಷಣೆ 2. ಸಹಕಾರದ ಅಗತ್ಯ.

ಮೊದಲನೆಯದಾಗಿ ಮನುಷ್ಯನು ತನ್ನಂತಹ ಇತರ ಮನುಷ್ಯರ ಕ ಮಾನಸಿಕವಾಗಿಯೇ ಒಂದು ವಿಶೇಷ ಒಲವು ಹೊಂದಿರುತ್ತಾನೆ. ಸಹಜೀವಿಗಳ ಸಾಮಿ ಮತ್ತು ಒಡನಾಟವು ಅವನಿಗೆ ಸಂತಸವನ್ನೂ, ಆತ್ಮವಿಶ್ವಾಸವನ್ನೂ ಕೊಡುತ್ತದೆ. ಇತರರಿ ಸಂಪೂರ್ಣ ಬೇರ್ಪಟ್ಟು ನಡೆಯುವ ಜೀವನ ಅಥವಾ ದೀರ್ಘ ಕಾಲದ ಏಕಾಂತ ಜೀವ ಅವನಲ್ಲಿ ಬೇಸರ ಮತ್ತು ಭಯ ಹುಟ್ಟಿಸುತ್ತದೆ.

ಎರಡನೆಯದಾಗಿ ಮನುಷ್ಯನ ವೈಯಕ್ತಿಕ ಮತ್ತು ಸ್ವಂತ ಸಾಮರ್ಥ್ಯಗಳು ಬ ಸೀಮಿತವಾಗಿದ್ದು ಅವನ ಲೌಕಿಕ ಅವಶ್ಯಕತೆಗಳು ಬಹಳ ವಿಶಾಲವಾಗಿವೆ. ಅವನ ಸಾಮರ್ಥ್ಯ ಅವನ ಅಗತ್ಯಗಳನ್ನು ಪೂರೈಸಲು ಅಸಮರ್ಥ ಹಾಗೂ ಅಪರ್ಯಾಪ್ತವಾಗಿವೆ. ಅವನು ಕೇ ತನ್ನೊಬ್ಬನ ಸಾಮರ್ಥ್ಯದ ಆಧಾರದಲ್ಲಿ ತನ್ನೆಲ್ಲಾ ಅಗತ್ಯಗಳನ್ನು ಪೂರೈಸಿಕೊಳ್ಳುವುದು ಸಾಧ್ಯ ಜೀವನದ ಅತ್ಯಂತ ಮೂಲಭೂತ ಅಗತ್ಯಗಳನ್ನು ಕೂಡ ಅವನು ಇತರ ಅನೇಕ ಜನರ ಪ್ರ ಅಥವಾ ಪರೋಕ್ಷ ಸಹಕಾರವಿಲ್ಲದೆ ಪೂರೈಸಿಕೊಳ್ಳಲು ಸಾಧ್ಯವಿಲ್ಲ. ಹೀಗೆ ಸಾಮೂಹಿಕ ಜೀ ಮನುಷ್ಯನ ಸ್ವಾಭಾವಿಕ ಬೇಡಿಕೆಯಾಗಿರುವಂತೆಯೇ, ಅವನ ಸ್ವಾಭಾವಿಕ ಅಗತ್ಯವೂ ಹೌ ಮನುಷ್ಯನು ತನ್ನ ಹುಟ್ಟು ವೈಶಿಷ್ಟ್ಯದಿಂದಾಗಿ ತನ್ನ ಸಹಜೀವಿಗಳ ಕಡೆಗೆ ಸೆಳೆಯಲ್ಪಡುವ ಮಾತ್ರವಲ್ಲ ತನ್ನ ಲೌಕಿಕ ಅಗತ್ಯಗಳಿಗಾಗಿ ಇತರ ರನ್ನು ಅವಲಂಬಿಸಿಕೊಂಡೇ ಇರುತ್ತಾನೆ. ಅಂ ಮನುಷ್ಯನನ್ನು ಸಮೂಹ ಜೀವನದಲ್ಲಿ ಬಂಧಿಸಿಡುವ ಎರಡು ಬಲವಾದ ಪ್ರೇರಣೆಗಳು ಅ ಪ್ರಕೃತಿಯಲ್ಲೇ ಆಳವಾಗಿ ಬೇರೂರಿವೆ ಎಂದಂತಾಯಿತು. ಆದ್ದರಿಂದ ಮನುಷ್ಯನು ಎ ಕಾಲಗಳಲ್ಲೂ ಸಂಘಟಿತ ಜೀವನದ ಕಡೆಗೆ ನಿರಪೇಕ್ಷನಾಗಿರಲಿಲ್ಲ ಎಂಬುದು ಅತ್ಯಂತ ಸಹ ಮನುಷ್ಯನು ಮನುಷ್ಯನಾಗಿರುವ ತನಕ ಬಹುತೇಕ ಇದು ಅನಿವಾರ್ಯವೂ ಹೌದು.

ಪ್ರಾಚೀನ ಗ್ರೀಕ್ ವಿದ್ವಾಂಸ ಹಾಗೂ ದಾರ್ಶನಿಕ ಅರಿಸ್ಟಾಟಲ್ ಮನುಷ್ಯನ ವಣ ಮಾಡುತ್ತಾ,

'ಮನುಷ್ಯನು ಜನ್ಮತಃ ಒಬ್ಬ ರಾಜಕೀಯ ಪ್ರಾಣಿ' ಎಂದಿದ್ದಾನೆ.[1] ರಾಜಕೀಯವೆಂಬು ಸಾಮೂಹಿಕ ಬದುಕಿನ ಅಂತಿಮ ರೂಪ. ಆದ್ದರಿಂದ 'ರಾಜಕೀಯ ಪ್ರಾಣಿ' ಎಂಬುದರ ಅ ಅಂತಿಮ ಹಾಗೂ ಪರಿಪೂರ್ಣ ಸ್ವರೂಪದಲ್ಲಿ ಸಮೂಹಪ್ರಿಯನಾಗಿರುವ ಜೀವಿ ಎ ಆಗಿದೆ. ಹೀಗೆ ಅರಿಸ್ಟಾಟಲ್‌ನ ದೃಷ್ಟಿಯಲ್ಲಿ ಮನುಷ್ಯನ ಈ ಪರಿಪೂರ್ಣ ಸ್ವರೂಪದ ಸಮು ಪ್ರಿಯತೆಯೇ ಮನುಷ್ಯನನ್ನು ಇತರ ಪ್ರಾಣಿಗಳಿಂದ ಬೇರ್ಪಡಿಸುವ ಪ್ರಧಾನ ವೈಶಿಷ್ಟ್ಯವಾ ಮತ್ತು ಈ ವೈಶಿಷ್ಟ್ಯದ ಅನುಪಸ್ಥಿತಿಯಲ್ಲಿ ಮನುಷ್ಯನು ಇತರೆಲ್ಲಾ ಪ್ರಾಣಿಗಳಂತೆ ಕೇ ಒಂದು ಪ್ರಾಣಿಯಾಗಿರುತ್ತಿದ್ದ ಎನ್ನಬಹುದು.

1. ಅರಿಸ್ಟಾಟಲನ ರಾಜಕೀಯ

ಮಧ್ಯ ಯುಗದ ಓರ್ವ ಪ್ರಖ್ಯಾತ ವಿದ್ವಾಂಸ ಹಾಗೂ ಸಂಶೋಧಕ ಇಬ್ನು ಖಲ್ದೂನ್ ೀಗನ್ನುತ್ತಾರೆ:

'ಮನುಷ್ಯ ಸಮಾಜದ ಸದಸ್ಯರು ಒಂದುಗೂಡಿ ಬದುಕಬೇಕಾದುದು ಅನಿವಾರ್ಯ ಂಗಿದೆ. ಇದೇ ವಾಸ್ತವಿಕತೆಯನ್ನು ವರ್ಣಿಸುತ್ತಾ ಬಲ್ಲವರು 'ಮನುಷ್ಯನು ಜನ್ಮತಃ ನಾಗರಿಕ ಯ' ಎಂದಿದ್ದಾರೆ.[2]

ಆಧುನಿಕ ಕಾಲದ ವಿದ್ವಾಂಸರು ಮತ್ತು ತತ್ವಜ್ಞಾನಿಗಳ ಬಗ್ಗೆ ಹೇಳುವುದಿದ್ದರೆ ಅವರ ೃಷ್ಟಿಯಲ್ಲಿ ಮನುಷ್ಯ ಸಂಘಜೀವಿ ಎಂಬುದು ಯಾವುದೇ ತರ್ಕ, ಪುರಾವೆಗಳ ಅಗತ್ಯವೇ ಲ್ಲದಂತಹ ವಿವಾದಾತೀತ ವಾಸ್ತವಿಕತೆಯಾಗಿದೆ.

ಮನುಷ್ಯನ ಸಂಘ ಪ್ರವೃತ್ತಿಯ ಬಗ್ಗೆ ನೇರವಾಗಿ ಸವಿಸ್ತಾರವಾಗಿ ಹೇಳಲು ಪವಿತ್ರ ರ್‌ಆನ್ ಜೀವಶಾಸ್ತ್ರದ ಗ್ರಂಥವೋ, ಸಮೂಹ ಶಾಸ್ತ್ರದ ಪುಸ್ತಕವೋ ಅಲ್ಲ. ಆದರೂ ಅದು ನ್ನ ವಿಷಯ ವ್ಯಾಪ್ತಿಯೊಳಗೆ ಏನೆಲ್ಲಾ ಹೇಳಿದೆಯೋ ಅದರಲ್ಲಿ ಇತರ ಅನೇಕ ವೈಜ್ಞಾನಿಕ ಸತ್ಯ ಃ ಜೊತೆಗೆ ಮನುಷ್ಯನ ಮನೋವೈಜ್ಞಾನಿಕ ವೈಶಿಷ್ಟ್ಯಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ದ್ದರಿಂದಲೇ ಅದು ಪ್ರಸ್ತುತ ವೈಶಿಷ್ಟ್ಯಗಳ ಬಗ್ಗೆಯೂ ಕೆಲವೆಡೆ ಆಂಶಿಕ, ಆದರೆ ನೇರ ಸೂಚನೆ ಯನ್ನು ಕೊಟ್ಟಿದೆ. ಆ ಸೂಚನೆಗಳನ್ನು ಗಮನಿಸಿದರೆ ಪವಿತ್ರ ಕುರ್‌ಆನ್ ಕೂಡಾ ಮನುಷ್ಯ ಕೃತಿಯನ್ನು ಸಮೂಹಪ್ರಿಯವೆಂದೇ ಪರಿಗಣಿಸಿರುವುದು ತಿಳಿಯುತ್ತದೆ. ಉದಾಹರಣೆಗೆ, -ಪುರುಷರ ನಡುವೆ ಅವರ ಸೃಷ್ಟಿಕರ್ತನು ಪರಸ್ಪರ ಪ್ರೇಮ ಮತ್ತು ಅನುಕಂಪವನ್ನು ತ್ತಿರುವನೆಂಬ ಕುರ್‌ಆನ್‌ನ ಹೇಳಿಕೆಯು[3] ಮನುಷ್ಯ ಮೂಲತಃ ಸಂಘ ಪ್ರಿಯನೆಂಬ ಂಗಿತವನ್ನೇ ಪ್ರತಿಬಿಂಬಿಸುತ್ತದೆ. ಹಾಗೆಯೇ ಪರಲೋಕದ ಸುಖ, ಸಂತೋಷಗಳನ್ನು ರ್ಣಿಸುವಾಗಲೂ ಪವಿತ್ರ ಕುರ್‌ಆನ್ ಸ್ವರ್ಗಜೀವಿಗಳ ಸಹ ಜೀವನ, ಸಹಭೋಜನ ಮತ್ತು ವರೆಲ್ಲಾ ಜೊತೆ ಜೊತೆಯಾಗಿ ಸ್ವರ್ಗ ಸುಖವನ್ನು ಅನುಭವಿಸುವ ದೃಶ್ಯಗಳನ್ನು ಪ್ರತಿಬಿಂಬಿಸಲು ಂರೆಯುವುದಿಲ್ಲ.[4] ಈ ಮೂಲಕ ಪವಿತ್ರ ಕುರ್‌ಆನ್, ಮನುಷ್ಯ ಜೀವನ ಇಹಲೋಕದಲ್ಲಿ ಾತ್ರವಲ್ಲದೆ ಪರಲೋಕದಲ್ಲಿಯೂ ಸಮೂಹ ಪ್ರಿಯವಾಗಿಯೇ ಇರುವುದೆಂಬುದನ್ನು ಮತ್ತು ರ್ಗದಲ್ಲೂ ಮನುಷ್ಯನು ಇತರ ಮನುಷ್ಯರ ಸಾಮೀಪ್ಯ ಮತ್ತು ಒಡನಾಟದಲ್ಲೇ ತೃಪ್ತಿಯನ್ನು ಡುವನೆಂಬುದನ್ನು ಪ್ರತಿಪಾದಿಸುತ್ತದೆ.

---

ಇಬ್ನು ಖಲ್ದೂನ್ : ಮುನ್ನುಡಿ

ಸೂರಃ ಅರ್‍ರೂಮ್

'ಸ್ವರ್ಗದವರು ಪರಸ್ಪರ ಸಹೋದರರಂತೆ ಆಸನಗಳಲ್ಲಿ ಎದುರೆದುರು ಕುಳಿತಿರುವರು (ಸೂರಃ ಹಜರ್) ವರು ಸ್ವರ್ಗದಲ್ಲಿ ಪೇಯ ತುಂಬಿದ ಪಾತ್ರೆಯನ್ನು ಎಳೆದಾಡುವರು... ಮತ್ತು ಪರಸ್ಪರರೆಡೆಗೆ ಗಮನ ಿಸಿ ಮಾತನಾಡುತ್ತಾ ಇರುವರು. (ಸೂರಃ ಅತ್ತೂರ್)

## ಇಸ್ಲಾಮ್ ಪ್ರಕೃತಿ ಧರ್ಮ

ಮನುಷ್ಯ ಪ್ರಕೃತಿಯ ಈ ವೈಶಿಷ್ಟ್ಯವನ್ನು ಗಮನದಲ್ಲಿಟ್ಟು ಕೊಂಡು, ಮನುಷ್ಯ ಪ್ರಾಕೃತಿಕ ಅಗತ್ಯಗಳಿಗೆ ಇಸ್ಲಾಮ್ ಯಾವ ಸ್ಥಾನ ನೀಡುತ್ತದೆ ಎಂಬುದನ್ನು ಅಭ್ಯಸಿಸಿ. ( ತಾತ್ವಿಕವಾಗಿಯೂ ಬೌದ್ಧಿಕವಾಗಿಯೂ ಇಸ್ಲಾಮೀ ಚಿಂತನೆ ಮತ್ತು ವ್ಯವಸ್ಥೆಯಲ್ಲಿ ಸಾಮೂಹಿ ಮತ್ತು ಅದರ ಪ್ರಾಯೋಗಿಕ ಬೇಡಿಕೆಗಳಿಗೆ ಅವಕಾಶ ಇರಬೇಕೋ ಬೇಡವೋ ಎಂಬುದ ತೀರ್ಮಾನಿಸಬಹುದು.

ಪವಿತ್ರ ಕುರ್‌ಆನ್ ಮನುಷ್ಯ ರಚನೆಯ ಕುರಿತು 'ಅಲ್ಲಾಹನು ಮನುಷ್ಯ ಮನಸ್ಸ ವ್ಯವಸ್ಥಿತಗೊಳಿಸಿದ್ದಾನೆ' ಎನ್ನುತ್ತದೆ? ಮೂಲದಲ್ಲಿ 'ಸವ್ವಾಹಾ' ಎಂಬ ಅರಬೀ ಪದವ ಬಳಸಲಾಗಿದ್ದು ಯಾವುದೇ ವಸ್ತುವನ್ನು ಗರಿಷ್ಠ ಮಟ್ಟದಲ್ಲಿ ಸರಿಪಡಿಸುವುದು ಎಂ ಅರ್ಥವನ್ನು ಅದು ಕೊಡುತ್ತದೆ. ಇನ್ನೊಂದು ಕಡೆ ಪವಿತ್ರ ಕುರ್‌ಆನ್ 'ಮನುಷ್ಯನ ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಲಾಗಿದೆ' ಎನ್ನುತ್ತದೆ.[6] ಇಲ್ಲಿ ಮೂಲದಲ್ಲಿ 'ಅಹ್ಸನಿ ತಕ್ವೀಮ ಎಂಬ ಅರಬೀ ಪದವನ್ನು ಬಳಸಲಾಗಿದ್ದು 'ತಕ್ವೀಮ್' ಎಂಬ ಶಬ್ದವು ನೇರಗೊಳಿಸುವು ಎಂಬ ಅರ್ಥ ಕೊಡುತ್ತದೆ. ಒಂದು ವಸ್ತುವಿನ ಮೇಲ್ಮೈ ಮತ್ತು ಆ ವಸ್ತುವಿನ ಗುಣವಿಶೇಷಗ ಇವೆರಡನ್ನೂ ಉದ್ದೇಶಿಸಿ ಈ ಪದವು ಬಳಸಲ್ಪಟ್ಟರೆ ಆಗ ಅದು ಆ ವಸ್ತುವನ್ನು ಒಂದು ವಿಶೇ ಉದ್ದೇಶಕ್ಕಾಗಿ ಸಿದ್ಧಪಡಿಸಿರುವುದನ್ನು ಸೂಚಿಸುತ್ತದೆ. ಆದ್ದರಿಂದ ಮನುಷ್ಯನನ್ನು 'ಅ ತಕ್ವೀಮ್' ಅರ್ಥಾತ್ 'ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಲಾಗಿದೆ' ಎನ್ನುವಾಗ ಅದರ ಅ ಮನುಷ್ಯನನ್ನು ಯಾವ ಉದ್ದೇಶಕ್ಕಾಗಿ ಸೃಷ್ಟಿಸಲಾಗಿದೆಯೋ ಅದಕ್ಕೆ ಅತ್ಯಂತ ಪೂರಕವ ಅವನನ್ನು ರಚಿಸಲಾಗಿದೆ ಎಂದಾಗುತ್ತದೆ. ಒಟ್ಟಿನಲ್ಲಿ ಮೇಲಿನ ಎರಡೂ ವಾಕ್ಯಗ ಬಳಸಲಾಗಿರುವ 'ಸವ್ವಾಹಾ' ಮತ್ತು 'ಫೀ ಅಹ್ಸನಿ ತಕ್ವೀಮ್' ಎಂಬ ಪದಗಳು ಮನುಷ್ಯನ ಯಾವ ಉದ್ದೇಶಕ್ಕಾಗಿ ಸೃಷ್ಟಿಸಲಾಗಿದೆಯೋ ಮತ್ತು ಅವನ ಮೇಲೆ ಯಾವ ಕರ್ತವ್ಯವ ಹೊರಿಸಲಾಗಿದೆಯೋ ಆ ಉದ್ದೇಶ ಮತ್ತು ಕರ್ತವ್ಯಗಳ ಈಡೇರಿಕೆಗೆ ಬಹಳಷ್ಟು ಪೂರಕವ ಪ್ರಕೃತಿಯಲ್ಲಿ ಮನುಷ್ಯನನ್ನು ರಚಿಸಲಾಗಿದೆ ಎಂಬುದನ್ನು ಸೂಚಿಸುತ್ತವೆ. ತನಗೆ ತೋ ಕೊಡಲಾದ ಗುರಿಯ ಸಾಧನೆಗೆ ಮತ್ತು ವಹಿಸಿ ಕೊಡಲಾದ ಕರ್ತವ್ಯದ ಈಡೇರಿಕೆಗೆ ಯ ಸಾಮರ್ಥ್ಯಗಳ ಅಗತ್ಯ ಮನುಷ್ಯನಿಗಿದೆಯೋ ಆ ಪೈಕಿ ಒಂದೇ ಒಂದು ಸಾಮರ್ಥ್ಯ ಕೊರತೆಯೂ ಅವನ ರಚನೆಯಲ್ಲಿಲ್ಲ, ಅಲ್ಲದೆ ತನ್ನ ಧ್ಯೇಯ ಸಾಧನೆಗೆ ಪ್ರಕೃತಿ ಸಹಜವ ಇರಬೇಕಾದ ಒಲವುಗಳಲ್ಲಿ ಯಾವುದೇ ಒಲವಿನ ಕೊರತೆಯೂ ಮನುಷ್ಯ ಪ್ರಕೃತಿಯಲ್ಲಿ ಹಾಗೆಯೇ ಪ್ರಸ್ತುತ ಗುರಿಯ ಸಾಧನೆಗೆ ಎಷ್ಟು ಬೇಕೋ ಅದಕ್ಕಿಂತ ಹೆಚ್ಚಿನ ಸಾಮರ್ಥ್ಯಗಳ ಕೂಡಾ ಮನುಷ್ಯನಿಗೆ ಕೊಡಲಾಗಿಲ್ಲ ಎಂಬುದನ್ನು ಈ ಪದಗಳು ಸಂಕೇತಿಸುತ್ತವೆ.

5. ಸೂರಃ ಶಮ್ಸ್
6. ಸೂರಃ ಅತ್ತೀನ್

ಒಂದೆಡೆ ಮನುಷ್ಯ ಪ್ರಕೃತಿಯ ಬಗ್ಗೆ ಇಸ್ಲಾಮಿನ ನಿಲುವು ಇದಾದರೆ ಇನ್ನೊಂದೆಡೆ ಧರ್ಮವು ತಾನು ಮಾತ್ರ ಮನುಷ್ಯನನ್ನು ಅವನ ಜೀವನದ ನೈಜ ಗುರಿಯೆಡೆಗೆ ಂಡೊಯ್ಯಬಲ್ಲ ಹೆದ್ದಾರಿಯೆಂದೂ, ಈ ದಾರಿಯಲ್ಲಿ ನಡೆಯುವ ಮೂಲಕ ಮಾತ್ರ ನುಷ್ಯನು ತನ್ನ ಜೀವನೋದ್ದೇಶವನ್ನು ಸಾಧಿಸಬಹುದು ಎಂದೂ ಪ್ರತಿಪಾದಿಸುತ್ತದೆ. ಈ ನ್ನೆಲೆಯಲ್ಲಿ ಇಸ್ಲಾಮ್, ಮನುಷ್ಯ ಪ್ರಕೃತಿಯನ್ನು ಕಿಂಚಿತ್ತೂ ನಿರ್ಲಕ್ಷಿಸದಿರಬೇಕಾದುದು ುತ್ತು ಮನುಷ್ಯ ಪ್ರಕೃತಿಯ ಬುನಾದಿಗಳಲ್ಲೇ ಅದರ ಸಂಪೂರ್ಣ ರಚನೆ ಆಗಿರಬೇಕಾದುದು ಿವಾರ್ಯ. ಮಾತ್ರವಲ್ಲ ಇಸ್ಲಾಮಿನ ಬೋಧನೆಗಳು ಆಮೂಲಾಗ್ರವಾಗಿ ಮನುಷ್ಯ ಪ್ರಕೃತಿಗೆ ನುಯೋಜ್ಯವಾಗಿದ್ದು ಅವರ ಎಲ್ಲ ಬೇಡಿಕೆಗಳ ಉತ್ತರ ಹಾಗೂ ಅವರ ಸುಪ್ತ ಅಪೇಕ್ಷೆಗಳ ಶ್ಲೇಷಣೆ ಆಗಿರಬೇಕಾದುದು ಅಗತ್ಯವೂ ಆಗಿದೆ. ಮನುಷ್ಯ ಬುದ್ಧಿಯ ಈ ಅಪೇಕ್ಷೆ ತಪ್ಪಲ್ಲ ುಬುದು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮದ್(ಸ)ರ ವಚನಗಳಿಂದ ನಮಗೆ ಯುತ್ತದೆ. ನಿಜವಾಗಿ ಇಸ್ಲಾಮ್ ಸಂಪೂರ್ಣವಾಗಿ ಮನುಷ್ಯ ಪ್ರಕೃತಿಯ ಆಧಾರದಲ್ಲಿ ರಚಿತವಾಗಿದ್ದು ಅದು ಮನುಷ್ಯ ಪ್ರಕೃತಿಯನ್ನು ಕಿಂಚಿತ್ತೂ ನಿರ್ಲಕ್ಷಿಸುವುದಿಲ್ಲ.

ಪವಿತ್ರ ಕುರ್‌ಆನ್ ಹೇಳುತ್ತದೆ,

**"ಸಂಪೂರ್ಣ ಏಕಾಗ್ರ ಚಿತ್ತರಾಗಿ ಈ ಧರ್ಮದೆಡೆಗೆ ಗಮನಹರಿಸಿರಿ. ಅಲ್ಲಾಹನು ರ್ಮಿತ) ಪ್ರಕೃತಿಯಲ್ಲೇ ಮನುಷ್ಯನನ್ನು ನಿರ್ಮಿಸಲಾಗಿದ್ದು ಆ ಪ್ರಕೃತಿಯನ್ನೇ ಅನುಸರಿಸಿರಿ."** ೂರಃ ಅರ್ರೂಮ್:30) ಮೂಲತಃ ಮನುಷ್ಯ ಪ್ರಕೃತಿಯ ಬುನಾದಿಯ ಮೇಲೆ ಇಸ್ಲಾಮ್ ಧರ್ಮ ಟ್ಟಲ್ಪಟ್ಟಿದೆ ಎಂಬುದನ್ನು ಈ ವಾಕ್ಯವು ಸ್ಪಷ್ಟವಾಗಿ ಸಾರುತ್ತದೆ.

ಪವಿತ್ರ ಕುರ್‌ಆನ್ ಇಸ್ಲಾಮ್ ಧರ್ಮವನ್ನು 'ದಿಕ್ರ್' 'ತದ್‌ಕಿರಃ' ಮತ್ತು 'ದಿಕ್ರಾ' ಂದೂ ವರ್ಣಿಸಿದೆ. 'ನೆನಪಿಸುವುದು' ಎಂಬುದೇ ಈ ಎಲ್ಲ ಶಬ್ದಗಳ ಮೂಲಾರ್ಥ. ವಿತ್ರ ಕುರ್‌ಆನ್ ಸ್ವತಃ ತನ್ನನ್ನು ಅಥವಾ ಇಸ್ಲಾಮ್ ಧರ್ಮವನ್ನು 'ನೆನಪಿಸುವಿಕೆ' ಂದು ವಿಶ್ಲೇಷಿಸುವುದರ ಅರ್ಥ. ಈ ಧರ್ಮ ಎಲ್ಲಿಂದಲೋ ತಂದು ಮಾನವನ ಮೇಲೆ ೇರಲ್ಪಟ್ಟ ಅಪರಿಚಿತ ಧರ್ಮವಾಗಿರದೆ ಮನುಷ್ಯನ ಸಾಕ್ಷಾತ್ ಪ್ರಕೃತಿಯೇ ಆಗಿದ್ದು ಇದು ರಂಭದಿಂದಲೇ ಮನುಷ್ಯನ ಅಂತರಂಗದಲ್ಲಿ ಬೇರು ಬಿಟ್ಟಿರುವ ಅವನ ಸಹಜ ಸ್ವಭಾವದ ಿನ ಕರೆಯಾಗಿದ್ದು, ಅವನು ಮರೆತ ಈ ಕರೆಯ ಮತ್ತು ಈ ಪಾಠವನ್ನು ಮತ್ತೆ ಅವನಿಗೆ ನೆನಪಿಸಲು ಬ್ದಗಳ ರೂಪದಲ್ಲಿ ಇದನ್ನು ಅವನ ಮುಂದಿಡಲಾಗಿದೆ ಎಂಬುದೇ ಆಗಿದೆ.

## ಾನವ ಪ್ರಕೃತಿ

ಈ ವೈಶಿಷ್ಟ್ಯದ ಹಿನ್ನೆಲೆಯಲ್ಲಿ ಇಸ್ಲಾಮ್ ತನ್ನನ್ನು ನಿರಾಕರಿಸುವ ಪ್ರವೃತ್ತಿಯನ್ನು 'ಕುಫ್ರ್' ಂದು ಕರೆಯುತ್ತದೆ. 'ಕುಫ್ರ್'ನ ಶಬ್ದಾರ್ಥ 'ಅಡಗಿಸಿಡುವುದು' ಎಂದಾಗಿದೆ. ಅಂದರೆ ಸ್ಲಾಮನ್ನು ನಿರಾಕರಿಸಿದರೆ ನಿಜವಾಗಿ ಮನುಷ್ಯನು ಆ ಮೂಲಕ ಸ್ವತಃ ತನ್ನ ಪ್ರಕೃತಿಯನ್ನೇ ರಾಕರಣೆಯ ಕರಾಳ ಮುಸುಕಿನೊಳಗೆ ಬಚ್ಚಿಟ್ಟಂತಾಗುತ್ತದೆ. ಯಾವ ಪ್ರಕೃತಿಯಲ್ಲಿ ತನ್ನನ್ನು ಷ್ಟಿಸಲಾಗಿದೆಯೋ ಅದನ್ನೇ ಅದುಮಿಟ್ಟಂತಾಗುತ್ತದೆ.

ಪ್ರವಾದಿ ಮುಹಮ್ಮದ್(ಸ) ಹೇಳಿದರು:

'ಪ್ರತಿಯೊಂದು ಮಗುವೂ 'ಫಿತ್ರಃ'(ಪ್ರಕೃತಿ)ದಲ್ಲಿ ಹುಟ್ಟುತ್ತದೆ. ಆದರೆ ಅದರ ಹೆತ್ತವ ಅದನ್ನು ಯಹೂದಿ, ನಸ್ರಾನೀ ಅಥವಾ ಮಜೂಸಿಯಾಗಿ ಪರಿವರ್ತಿಸಿ ಬಿಡುತ್ತಾರೆ. (ಬುಖಾ

ಅಂದರೆ ಮಾನವ ಪ್ರಕೃತಿ ಸಂಪೂರ್ಣವಾಗಿ ಸಮನ್ವಯ ಹಾಗೂ ಸಾಮರ ಹೊಂದಿರುವುದು ಇಸ್ಲಾಮ್‌ನೊಂದಿಗೆ ಮಾತ್ರ.[7] ಬಾಹ್ಯ ಹಸ್ತಕ್ಷೇಪಗಳಿಲ್ಲದಿದ್ದ ಪ್ರತಿಯೊಂದ ಮಗುವೂ ತಾನು ಬೆಳೆದಾಗ ಇಸ್ಲಾಮನ್ನೇ ತನ್ನ ಮಾರ್ಗವಾಗಿ ಆಯ್ದುಕೊಳ್ಳುತ್ತಿತ್ತು. ಆದ ಸಾಮಾನ್ಯ ಸ್ಥಿತಿಯಲ್ಲಿ ಈ ಹಸ್ತಕ್ಷೇಪ ಅನಿವಾರ್ಯವಾಗಿರುತ್ತದೆ. ಮಗುವಿನ ಹೆತ್ತವರು ಮ ವನ್ನು ಪೋಷಿಸುವುದರ ಜೊತೆಗೇ ಆ ಮಗುವಿನ ಮನದ ಮೇಲೆ ತಾವು ಆಚರಿಸುವ ಧಮ ಗಳ ಮುದ್ರೆ ಒತ್ತುತ್ತಲೇ ಹೋಗುತ್ತಾರೆ. ಆದ್ದರಿಂದ ಆ ಮಗು ಬೆಳೆದಾಗ ಯಹೂದಿ, ನಸ್ರಾನಿ ಮಜೂಸೀ ಅಥವಾ ಇನ್ನಾವುದಾದರೂ ಜಾತಿಗೆ ಸೇರಿರುತ್ತದೆ. ಒಂದು ಮಗುವನ್ನು ಈ ಬಗೆ ಯಾವುದೇ ಹಸ್ತಕ್ಷೇಪಕ್ಕೆ ಒಳಪಡಿಸದೇ, ಅದರ ಪರಿಸರದ ಯಾವ ಶಕ್ತಿಯೂ ಆ ಮಗುವ ತನ್ನೆಡೆಗೆ ಸೆಳೆಯುವ ಅಥವಾ ತನ್ನೊಳಗೆ ಲೀನಗೊಳಿಸುವ ಪ್ರಯತ್ನ ಮಾಡದೆ ಆ ಮಗು ತಾ ಹುಟ್ಟಿದ ಪ್ರಕೃತಿಯಲ್ಲೇ ಮುಕ್ತವಾಗಿ, ಸ್ವತಂತ್ರವಾಗಿ ಬೆಳೆಯುವಂತಹ ವಾತಾವರಣವ ಕಲ್ಪಿಸಿಕೊಟ್ಟರೆ ಆ ಮಗು ಬೆಳೆದಾಗ ಏಕ ಕಾಲದಲ್ಲಿ ಎಲ್ಲ ಧರ್ಮ ಮತ್ತು ತತ್ವಗಳನ್ನು ಅದ ಮುಂದೆ ಇಟ್ಟು ಅದಕ್ಕೆ ಆಯ್ಕೆಯ ಸ್ವಾತಂತ್ರ್ಯ ಕೊಟ್ಟರೆ ಅದು ಖಂಡಿತವಾಗಿಯೂ ಇಸ್ಲಾಮ ಆರಿಸಿಕೊಳ್ಳುವುದು. ಹಲವು ಧರ್ಮ ತತ್ವಗಳು ಅದರ ಮುಂದೆ ಬಂದಾಗ ಆ ಮಗು ಹಲವು ಮಹಿಳೆಯರ ಮಧ್ಯೆ ತನ್ನ ತಾಯಿಯನ್ನು ಗುರುತಿಸುವಷ್ಟೇ ಸುಲಭವಾಗಿ ತ ಪ್ರಕೃತಿಯಾಗಿರುವ ಇಸ್ಲಾಮನ್ನು ಗುರುತಿಸಿ ಅದರೆಡೆಗೆ ಧಾವಿಸುವುದು. ಇತರೆಲ್ಲ ಮಾರ್ಗಗಳ ಮನುಷ್ಯ ಪ್ರಕೃತಿಯ ನೈಜ ಮಾರ್ಗದಿಂದ ಭಿನ್ನವಾಗಿರುವುದೇ ಇದಕ್ಕೆ ಕಾರಣ. ಆದ್ದರಿಂದ ತನ್ನ ಹೆತ್ತವರಿಂದ ಅಥವಾ ಪರಿಸರದಿಂದ ಪ್ರಭಾವಿತವಲ್ಲದ ಸ್ವತಂತ್ರ ಮಗುವು ಈ ಇ ಮಾರ್ಗಗಳಿಂದ ಎಳ್ಳಷ್ಟೂ ಆಕರ್ಷಿತವಾಗದು. ಆ ಮಗುವಿಗೆ ಇತರ ಮಾರ್ಗಗಳೆಲ್ಲಾ ತನ ಸಂಯೋಜ್ಯವಲ್ಲದ ಅಪರಿಚಿತ ಮಾರ್ಗಗಳಾಗಿ ತೋರುವವು. ಆದರೆ ಇಸ್ಲಾಮ್‌ನ ಕಡ ಅದು ತಕ್ಷಣ ಆಕರ್ಷಿತವಾಗುವುದು. ಏಕೆಂದರೆ ಇಸ್ಲಾಮ್ ಸಾಕ್ಷಾತ್ ತನ್ನ ಪ್ರಕೃತಿಯೆಂದು ತನ್ನ ಪ್ರಕೃತಿಯ ಜೊತೆ ಸಂಪೂರ್ಣ ಸಾಮರಸ್ಯ ಹೊಂದಿರುವ ಮಾರ್ಗವೆಂದೂ, ಅ ಅನಿಸುವುದಲ್ಲದೆ ವಿಶೇಷ ಒಲವಿನೊಂದಿಗೆ ಅದು ಅದರತ್ತ ಧಾವಿಸಿ ಹೋಗುವುದು. ಕಬ್ಬಿಣ ಅಪ್ಪಟ ಅಯಸ್ಕಾಂತದಿಂದ ಆಕರ್ಷಿತವಾಗುವಂತೆ ಇಸ್ಲಾಮ್ ಸ್ವತಂತ್ರ ಮನುಷ್ಯನ ಮನವ ತನ್ನೆಡೆಗೆ ಸೆಳೆಯುವುದು.

7. ಇಲ್ಲಿ ಇಸ್ಲಾಮ್ ಎಂಬ ಶಬ್ದದ ಅರ್ಥ ಸೃಷ್ಟಿಕರ್ತನಿಗೆ ಸಂಪೂರ್ಣ ಶರಣಾಗುವ ಪ್ರವೃತ್ತಿ ಎಂಬು ಗಮನಾರ್ಹ.

ಇಸ್ಲಾಮ್ ಮನುಷ್ಯ ಪ್ರಕೃತಿಯ ವಕ್ತಾರನಾಗಿದ್ದು ಪ್ರಕೃತಿಯ ಬುನಾದಿಯಲ್ಲೇ ಈ ಧರ್ಮವನ್ನು ಕಟ್ಟಲಾಗಿದೆ ಎಂಬುದು ಮೇಲಿನ ವಾದದಿಂದ ಬಹಳ ಸ್ಪಷ್ಟವಾಗಿ ಬಿಡುತ್ತದೆ. ಪ್ರವಾದಿ ಮುಹಮ್ಮದ್(ಸ) ಅವರು ಕೂಡಾ ಈ ಮಾತನ್ನು ಬಹಳ ಸ್ಪಷ್ಟವಾಗಿ ಹೇಳಿದ್ದಾರೆ;

ಯಾವ ಪ್ರಕೃತಿಯಲ್ಲಿ ಅಲ್ಲಾಹನು ಮನುಷ್ಯನನ್ನು ಸೃಷ್ಟಿಸಿರುವನೋ ಆ ಪ್ರಕೃತಿಯ ಧರ್ಮ ಇದುವೇ (ಇಸ್ಲಾಮ್) ಆಗಿದೆ.[8]

## ಪ್ರಕೃತಿ ಧರ್ಮದ ಬೇಡಿಕೆ

ಒಂದು ವೇಳೆ ನಿಜಕ್ಕೂ ಇಸ್ಲಾಮ್ ಪ್ರಕೃತಿ ಧರ್ಮವಾಗಿದ್ದರೆ ಮತ್ತು ಪ್ರಕೃತಿಯೇ ಅದರ ಬುಹದಿಯಾಗಿದ್ದರೆ ಮತ್ತು ಮನುಷ್ಯನನ್ನು ಯಾವ ಉದ್ದೇಶಕ್ಕಾಗಿ ಸೃಷ್ಟಿಸಲಾಗಿದೆಯೋ ಅದಕ್ಕೆ ಬೇಕಾದ ಸಾಮರ್ಥ್ಯ ಮತ್ತು ಪ್ರವೃತ್ತಿಗಳನ್ನು ಮಾತ್ರ ಮನುಷ್ಯನೊಳಗೆ ಇರಿಸಲಾಗಿದೆ ಎಂದಾದರೆ ಈ ಎಲ್ಲಾ ಪ್ರಾಕೃತಿಕ ಸಾಮರ್ಥ್ಯ ಮತ್ತು ಪ್ರವೃತ್ತಿಗಳನ್ನು ಸಹಿಸಬೇಕಾದುದು, ಅದನ್ನು ತನ್ನ ಹಾದಿಯ ತಡೆಯೆಂದು ಪರಿಗಣಿಸದೆ ಅವೆಲ್ಲವನ್ನೂ ತನ್ನ ಸೇವೆಗೆ ಬಳಸಿಕೊಳ್ಳಬೇಕಾದುದು ಇಸ್ಲಾಮ್‌ನ ಪಾಲಿಗೆ ಅನಿವಾರ್ಯವಾಗುತ್ತದೆ. ಇದಕ್ಕೆಲ್ಲಾ ಇಸ್ಲಾಮ್ ಸಿದ್ಧವಿಲ್ಲ ಎಂದಾದರೆ ಅದು ಕನಿಷ್ಠ ಪಕ್ಷ ಈ ಕೆಳಗಿನ ಮೂರು ಅಂಶಗಳನ್ನು ಅಂಗಿಕರಿಸಬೇಕಾಗುತ್ತದೆ. 1. ಮನುಷ್ಯ ಪ್ರಕೃತಿಯೇ ಅದರ ಬುನಾದಿಯಲ್ಲ. 2. ದೇವನು ಮನುಷ್ಯ ಪ್ರಕೃತಿಯಲ್ಲಿ ಮನುಷ್ಯನ ಏದುಕಿಗೆ ಅಗತ್ಯವಿಲ್ಲದ ಅಥವಾ ಹಾನಿಕಾರಕವಾದ ಕೆಲವು ಅಂಶಗಳನ್ನೂ ಸೃಷ್ಟಿಸಿದ್ದಾನೆ. 3. ಅದು ಮನುಷ್ಯನಿಗೆ ಅವನ ಕರ್ತವ್ಯದ ಪೂರೈಕೆ ಮತ್ತು ಅವನ ನೈಜ ವಿಜಯದ ನೇರ ಮಾರ್ಗ ತೋರಲು ಬಂದ ಧರ್ಮವಲ್ಲ.

ಆದರೆ ಇಸ್ಲಾಮ್ ಈ ಪೈಕಿ ಯಾವುದೇ ಒಂದಂಶವನ್ನು ಕೂಡಾ ಒಪ್ಪಲು ಸಿದ್ಧವಿಲ್ಲ. ಅಲ್ಲದೆ ಅದು ಈ ಮೂರು ಅಂಶಗಳನ್ನು ಜಗತ್ತಿನ ಅತಿ ದೊಡ್ಡ ಸುಳ್ಳುಗಳೆಂದು ತಳ್ಳಿ ಹಾಕುತ್ತದೆ. ಹಾಗಿರುವಾಗ, ಮನುಷ್ಯ ಪ್ರಕೃತಿಯಲ್ಲಿರುವ ಎಲ್ಲಾ ಸಾಮರ್ಥ್ಯಗಳು ಮತ್ತು ಒಲವುಗಳ ಬಗ್ಗೆ ಸಕಾರಾತ್ಮಕ ಮತ್ತು ರಚನಾತ್ಮಕ ನಿಲುವು ತಾಳಬೇಕಾದುದು ಇಸ್ಲಾಮ್‌ನ ಪಾಲಿಗೆ ಅನಿವಾರ್ಯವಾಗುತ್ತದೆ. ಮಾತ್ರವಲ್ಲ, ಇಸ್ಲಾಮ್ ಪ್ರಕೃತಿಯನ್ನು ಪೂರ್ಣವಾಗಿ ಗೌರವಿಸಬೇಕಾಗುತ್ತದೆ. ಅದರ ಎಲ್ಲ ಉಚಿತ ಬೇಡಿಕೆಗಳನ್ನು ಈಡೇರಿಸಬೇಕಾಗುತ್ತದೆ. ಮನುಷ್ಯ ಜೀವನದ ಗುರಿ ಸಾಧನೆಗೆ ಅವೆಲ್ಲವೂ ಅಗತ್ಯವೆಂದು ಪರಿಗಣಿಸಬೇಕಾಗುತ್ತದೆ ಮತ್ತು ಅವೆಲ್ಲವನ್ನೂ ಬಳಸಬೇಕೆಂದು ಆದೇಶಿಸಬೇಕಾಗುತ್ತದೆ.

ಇಸ್ಲಾಮ್ ಈ ಎಲ್ಲ ಬೇಡಿಕೆಗಳನ್ನು ಬಹಳ ಸಮರ್ಥವಾಗಿ ಈಡೇರಿಸುತ್ತದೆ. ಅದು ಮನುಷ್ಯನಲ್ಲಿ ಸಹಜವಾಗಿರುವ ಎಲ್ಲ ಸ್ವಾಭಾವಿಕ ಸಾಮರ್ಥ್ಯಗಳನ್ನು ಮತ್ತು ಒಲವುಗಳನ್ನು ಅಂಗೀಕರಿಸಿ ಅವುಗಳನ್ನು ಗೌರವಿಸುತ್ತದಲ್ಲದೆ ಆ ಒಲವುಗಳ ಸಾಕ್ಷಾತ್ಕಾರವನ್ನು ಪ್ರೋತ್ಸಾಹಿಸಿ

8. ರೂಹುಲ್ ಮಆನಿ, ಕಾಂಡ 21, ಪುಟ 40.

ಅದಕ್ಕೆ ಬೇಕಾದ ಮಾರ್ಗವನ್ನು ನಿಶ್ಚಯಿಸಿ ಕೊಡುತ್ತದೆ. ಈ ಸ್ವಾಭಾವಿಕ ಒಲವುಗಳನ
ಅದುಮಿಡುವ ಅಥವಾ ಅದನ್ನು ಕೆಡುಕೆಂದು ಪರಿಗಣಿಸುವ ಪ್ರವೃತ್ತಿಯನ್ನು ಇಸ್ಲಾಮ
ಉಗ್ರವಾಗಿ ವಿರೋಧಿಸುತ್ತದೆ. ಇಸ್ಲಾಮಿನ ಈ ನಿಲುವಿಗೆ ಪ್ರಸ್ತುತ ಒಲವುಗಳ ಬಗ್ಗೆ ಅದಕ್ಕಿರು
ಔದಾರ್ಯ ಕಾರಣವಲ್ಲ, ಹಾಗೆಯೇ ಈ ನಿಲುವಿನ ಬುನಾದಿಯೂ ನಕಾರಾತ್ಮಕ (Negative
ಅಲ್ಲ. ಮನುಷ್ಯನು ಈ ದೌರ್ಬಲ್ಯಗಳ ಜೊತೆಗೇ ಹುಟ್ಟುತ್ತಾನಾದ್ದರಿಂದ ಅವುಗಳನ್ನೂ ಗಣನೆ
ತೆಗೆದುಕೊಳ್ಳಬೇಕಾಗುತ್ತದೆ ಎಂಬ ಒಲ್ಲದ ಮನಸ್ಸಿನಿಂದ ಇಸ್ಲಾಮ್ ಈ ನಿಲುವು ತಳೆಯು
ದಲ್ಲ. ಇಸ್ಲಾಮಿನ ಈ ನಿಲುವು ಸಾಕ್ಷಾತ್ ಅದರ ಧರ್ಮ ಕಲ್ಪನೆಯ ಅಂಗವಾಗಿದೆ.

ಇಸ್ಲಾಮಿನ ದೃಷ್ಟಿಯಲ್ಲಿ ಮನುಷ್ಯ ಪ್ರಕೃತಿಯಲ್ಲಿರುವ ಸಾಮರ್ಥ್ಯಗಳು ಮತ
ಪ್ರವೃತ್ತಿಗಳೆಲ್ಲಾ ಮನುಷ್ಯನ ನೈಜ ಜೀವನೋದ್ದೇಶದ ಸಮರ್ಪಕ ಈಡೇರಿಕೆಗಾಗಿ ಬಹ
ಅವಶ್ಯಕವಾಗಿವೆ. ಆದ್ದರಿಂದಲೇ ಇಸ್ಲಾಮ್ ಮನುಷ್ಯನ ಈ ಪ್ರಾಕೃತಿಕ ಬೇಡಿಕೆಗಳ ನಿಯಮ
ಬದ್ಧ ಈಡೇರಿಕೆಯನ್ನು ಕೇವಲ ಲೌಕಿಕ ಕ್ರಿಯೆ ಎಂದು ಪರಿಗಣಿಸದೆ ಅದನ್ನು ಕೂಡಾ ಧಾರ್ಮಿ
ಕ್ರಿಯೆಯೆಂದೂ ಆರಾಧನಾ ಕರ್ಮವೆಂದೂ ಬಣ್ಣಿಸುತ್ತದೆ.

ಉದಾಹರಣೆಗೆ, ಮನುಷ್ಯನಲ್ಲಿ ತಿನ್ನುವ, ಕುಡಿಯುವ, ದೈಹಿಕ ವಿಶ್ರಾಂ
ಮತ್ತು ನೆಮ್ಮದಿಯ,ಸಂತಾನ ಪ್ರಾಪ್ತಿಯ,ಪತ್ನಿ–ಮಕ್ಕಳ ಪೋಷಣೆಯ, ಬಂಧುಗಳನ
ಆದರಿಸುವಂತಹ ಬಯಕೆಗಳು ಸ್ವಾಭಾವಿಕವಾಗಿಯೇ ಇರುತ್ತವೆ. ಅದೇ ರೀತಿ ಅವನು ಕೋ
ದ್ವೇಷ, ಕಾಠಿಣ್ಯ, ಯುದ್ಧ, ಕಾಮ, ಮಾತುಗಾರಿಕೆ, ಹರ್ಷ, ದುಃಖ, ದುಗುಡ ಮುಂತಾ
ಗುಣಗಳನ್ನು ಹುಟ್ಟುವಾಗಲೇ ತನ್ನ ಜೊತೆಗೆ ತಂದಿರುತ್ತಾನೆ. ಮೇಲ್ನೋಟಕ್ಕೆ ಇವೆಲ್ಲವ
ಧರ್ಮ ಮತ್ತು ಧಾರ್ಮಿಕತೆಗೆ ಯಾವುದೇ ಸಂಬಂಧವಿಲ್ಲದ ಗುಣಗಳಂತೆ ಕಾಣಿಸುತ್ತ
ಕೆಲವಂತೂ ಧರ್ಮಕ್ಕೆ ತದ್ವಿರುದ್ಧವಾದ ಗುಣಗಳಂತೆ ತೋರುತ್ತವೆ. ಆದರೆ ಇಸ್ಲಾಮ್ ಈ ಎ
ಗುಣಗಳನ್ನೂ ಮನುಷ್ಯ ಪ್ರಕೃತಿಯ ಅಮೂಲ್ಯ ಭಾಗಗಳೆಂದೇ ಪರಿಗಣಿಸುತ್ತದೆ. ಅದ
ದೃಷ್ಟಿಯಲ್ಲಿ ಈ ಪೈಕಿ ಯಾವುದೇ ಗುಣವು ನಿಷ್ಪ್ರಯೋಜಕವೋ ಅನಾವಶ್ಯಕವೋ ಅ
ಇಸ್ಲಾಮಿನ ದೃಷ್ಟಿಯಲ್ಲಿ ಮನುಷ್ಯನ ಮೇಲೆ ಅವನ ಸೃಷ್ಟಿಕರ್ತ ದೇವನಿಗೆ ಸಂಬಂಧಿಸಿ
ಬಾಧ್ಯತೆಗಳಿರುವಂತೆಯೇ ಅವನ ಮೇಲೆ ಅವನ ಸ್ವಂತಕ್ಕೆ ಸಂಬಂಧಿಸಿದ ಬಾಧ್ಯತೆಗಳೂ ಇ
ಹಾಗೆಯೇ ತನ್ನ ಕಣ್ಣುಗಳಿಗೆ, ತನ್ನ ಪರಿವಾರಕ್ಕೆ ಮತ್ತು ತನ್ನ ಬಂಧುಗಳಿಗೆ ಸಂಬಂಧಿಸಿ
ಬಾಧ್ಯತೆಗಳೂ ಅವನ ಮೇಲಿವೆ. ಈ ಎಲ್ಲ ಬಾಧ್ಯತೆಗಳನ್ನು ಈಡೇರಿಸಬೇಕಾದುದು ಮ
ಈ ಎಲ್ಲರ ಹಕ್ಕುಗಳನ್ನು ಅವರಿಗೆ ಸಲ್ಲಿಸಬೇಕಾದುದು ಅವನ ಕರ್ತವ್ಯವಾಗಿದೆ. (ಬುಖಾ
ಕಿತಾಬುಸ್ಸೌಮ್) ಒಬ್ಬ ವ್ಯಕ್ತಿ ತನ್ನ ಸ್ವಂತಕ್ಕಾಗಿ ಹಾಗೂ ತನ್ನ ಪರಿವಾರಕ್ಕಾಗಿ ಹಣ ವ್ಯಯಿಸುವು
ಕೂಡಾ ಪುಣ್ಯ ಕರ್ಮವಾಗಿದೆ.(ಮುಸ್ಲಿಮ್, ಕಿತಾಬುಝ್ಝಕಾತ್) ಒಬ್ಬನು ತನ್ನ ಕೈಯ
ತನ್ನ ಪತ್ನಿಯ ಬಾಯಿಗೆ ಒಂದು ತುತ್ತು ಅನ್ನವನ್ನಿಟ್ಟರೆ ಅದೂ ಪುಣ್ಯಕಾರ್ಯವಾಗಿ
(ಬುಖಾರಿ, ಕಿತಾಬುನ್ನಫಕಾತ್) ಒಬ್ಬ ವ್ಯಕ್ತಿ ಧಾರ್ಮಿಕತೆಯ ಆವೇಶದಲ್ಲಿ ಸಾಮಾ

ದಿನಗಳಲ್ಲೂ ಎಡಬಿಡದೆ ನಿರಂತರ ಉಪವಾಸ ಆಚರಿಸತೊಡಗಿದರೆ ಅವನು ಉಪವಾಸ ಆಚರಿಸಿಯೇ ಇಲ್ಲದ ವ್ಯಕ್ತಿಯಷ್ಟೇ ತಪ್ಪಿತಸ್ಥನೆಂದು ಪರಿಗಣಿಸಲಾಗುವುದು.(ಬುಖಾರಿ, ಕಿತಾಬುಸ್ಸೌಮ್) ವಿವಾಹವು ಧರ್ಮದ ಬೇಡಿಕೆಯಾಗಿದೆ. ಅದನ್ನು ನಿರ್ಲಕ್ಷಿಸುವವನು ಪ್ರವಾದಿ ಮುಹಮ್ಮದ್(ಸ)ರ ಅನುಯಾಯಿಯೆನಿಸಿಕೊಳ್ಳುವುದಕ್ಕೂ ಅನರ್ಹನಾಗುತ್ತಾನೆ. (ಬುಖಾರಿ, ಕಿತಾಬುನ್ನಿಕಾಹ್)ಮನುಷ್ಯನಲ್ಲಿ ಸಂತಾನ ಪ್ರಾಪ್ತಿಯ ಹಂಬಲ ಇರಬೇಕು. ಸೂರಃ ಅಲ್‌ಬಕರಃ, ಅಬೂದಾವೂದ್ ಕಿತಾಬುನ್ನಿಕಾಹ್) ಆದರ್ಶ ಮುಸ್ಲಿಮರು ಅಂದರೆ ದೇವ-ಪ್ರವಾದಿಗಳಲ್ಲಿ ಹೆಚ್ಚಿನವರೆಲ್ಲರೂ ಗೃಹಸ್ಥರಾಗಿದ್ದರು. (ಸೂರಃ ಅರ್‌ರಅದ್) ಸತ್ಯವಿಶ್ವಾಸಿಗೆ, ಅವನು ತನ್ನ ವೈವಾಹಿಕ ಮಿತಿಯೊಳಗೆ ಪಡೆಯುವ ಭೋಗಕ್ಕೂ ಪುಣ್ಯವಿದೆ. (ಮುಸ್ಲಿಮ್, ಕಿತಾಬುರ್ಝ್ಝಕಾತ್) ಸತ್ಯ ಮತ್ತು ಧರ್ಮದ ವಿಷಯದಲ್ಲಿ ಸಂದರ್ಭ ಬಂದಾಗ ವ್ಯಕ್ತವಾಗುವ ರೋಷ ಮತ್ತು ದ್ವೇಷವನ್ನೂ ಧರ್ಮ ವಿಶ್ವಾಸದ ಅಂಗವೆಂದು ಪರಿಗಣಿಸಲಾಗುತ್ತದೆ. (ಮಿಶ್ಕಾತ್- ಅಬೂದಾವೂದ್ ಆಧರಿತ) ಧರ್ಮ ಮತ್ತು ಸತ್ಯದ ರಕ್ಷಣೆಗೆ ಅಗತ್ಯ ಬಿದ್ದರೆ ಯುದ್ಧಮಾಡುವುದು ಕೂಡಾ ಶ್ರೇಷ್ಠ ಪುಣ್ಯ ಕಾರ್ಯವೆನಿಸಿಕೊಳ್ಳುತ್ತದೆ.(ಬುಖಾರಿ, ಕಿತಾಬುಲ್ ಜಿಹಾದ್) ಒಬ್ಬ ಮುಸ್ಲಿಮನ ಮನದಲ್ಲಿ ಇಂಥ ಸಂದರ್ಭದಲ್ಲೂ ಅಧರ್ಮದ ವಿರುದ್ಧ ಯುದ್ಧ ಸಾರುವ ಸನ್ನದ್ಧತೆ ಮೂಡದಿದ್ದರೆ ಅದು ಒಂದು ಮುಸ್ಲಿಮ್ ಮನಸ್ಸೆಂದು ಪರಿಗಣಿಸಲ್ಪಡಲು ಅರ್ಹವಾಗಿರುವುದಿಲ್ಲ, (ಮುಸ್ಲಿಮ್ ಸಂಪುಟ- 2) ಧರ್ಮ ವಿರೋಧ ಮತ್ತು ಕಾಪಟ್ಯದ ವಿಷಯದಲ್ಲಿ ನಯ ನೀತಿ ತೋರುವ ಬದಲು ಕಾಠಿಣ್ಯ ತೋರುವುದೇ ಧರ್ಮ ವಿಶ್ವಾಸದ ಲಕ್ಷಣವಾಗಿದೆ.(ಸೂರಃ ಫತ್‌ಹ್) ವಾಕ್ ಸಾಮರ್ಥ್ಯವನ್ನು ಬಳಸದೆ ಮೂಕವಾಗಿರುವುದು ಅಜ್ಞಾನದ ಸಂಕೇತವೇ ಹೊರತು ಅದು ಇಸ್ಲಾಮಿನ ಲಕ್ಷಣವಲ್ಲ. (ಬುಖಾರಿ ಸಂಪುಟ- 2) ಮಕ್ಕಳನ್ನು ಪ್ರೀತಿಸುವುದು ಕೂಡಾ ಧಾರ್ಮಿಕವಾಗಿ ಪ್ರೋತ್ಸಾಹನೀಯವೇ ಹೊರತು ಅದು ಧರ್ಮಕ್ಕೆ ವಿರುದ್ಧವಲ್ಲ.(ಬುಖಾರಿ, ಕಿತಾಬುಲ್ ಅದಾಬ್) ಓರ್ವ ಬಂಧು ನಿಧನವಾಗಿ ಅಗಲಿದಾಗ ದುಃಖಿಸುವುದು ಅಥವಾ ಕಣ್ಣೀರಿಡುವುದು ಮಾನವೀಯ ಪ್ರೇಮಾನುಕಂಪಗಳ ಸಾಕ್ಷಿಯೇ ಹೊರತು ಅದೊಂದು ದೌರ್ಬಲ್ಯವಲ್ಲ. (ಮುಸ್ಲಿಮ್ ಕಿತಾಬುಲ್ ಜನಾಇಝ್)

## ಸಹಜ ಪ್ರವೃತ್ತಿಯ ಸಮರ್ಥನೆ

ಈ ಎಲ್ಲ ಅಂಶಗಳು, ಇಸ್ಲಾಮ್ ಪ್ರಕೃತಿ ಧರ್ಮ ಎಂಬುದನ್ನು ಸಂಶಯಕ್ಕಾಗಲೀ ನಿರಾಕರಣೆಗಾಗಲೀ ಎಡೆಯೇ ಇಲ್ಲದಷ್ಟು ಸ್ಪಷ್ಟವಾಗಿ ಸಾಬೀತುಪಡಿಸುತ್ತವೆ. ಪ್ರಸ್ತುತ ಸಾಕ್ಷ್ಯಗಳ ಆಧಾರದಲ್ಲಿ ಹೇಳುವುದಾದರೆ ಇಸ್ಲಾಮ್ ಮನುಷ್ಯನ ಸಹಜ ವೈಶಿಷ್ಟ್ಯ, ಸಾಮರ್ಥ್ಯ ಹಾಗೂ ಸ್ವಾಭಾವಿಕ ಒಲವುಗಳನ್ನು ದೌರ್ಬಲ್ಯವೆಂದು ಪರಿಗಣಿಸುವುದಿಲ್ಲ. ತದ್ವಿರುದ್ಧವಾಗಿ, ಈ ವೈಶಿಷ್ಟ್ಯಗಳನ್ನು ದೌರ್ಬಲ್ಯವೆಂದು ತಾತ್ಸಾರದಿಂದ ಕಾಣುವ, ಅವುಗಳನ್ನು ಅದುಮಿಡುವ ಅಥವಾ ಅವುಗಳ ಬಳಕೆ, ಬೆಳವಣಿಗೆಗಳನ್ನು ಧಾರ್ಮಿಕತೆಗೆ ವಿರುದ್ಧವೆಂದು ಭಾವಿಸುವ

ಪ್ರವೃತ್ತಿಯೇ ಇಸ್ಲಾಮಿನ ದೃಷ್ಟಿಯಲ್ಲಿ ತಪ್ಪು ಪ್ರವೃತ್ತಿ ಎನಿಸಿಕೊಳ್ಳುತ್ತದೆ.

ಮನುಷ್ಯನನ್ನೂ ಅವನ ಎಲ್ಲ ಸ್ವಾಭಾವಿಕ ವೈಶಿಷ್ಟ್ಯ ಮತ್ತು ಸಾಮರ್ಥ್ಯಗಳನ್ನೂ ಸೃಷ್ಟಿಸಿದ ಯುಕ್ತಿಪೂರ್ಣನಾದ ಸೃಷ್ಟಿಕರ್ತನಿಂದಲೇ ಬಂದ ಧರ್ಮವಾಗಿದೆ ಇಸ್ಲಾಮ್. ಆದ್ದರಿಂದ ಅವನ ಈ ಧರ್ಮವು ಅವನೇ ಮನುಷ್ಯನಲ್ಲಿ ಸೃಷ್ಟಿಸಿರುವ ಯಾವುದಾದರೂ ಸಹಜ ವೈಶಿಷ್ಟ್ಯ ಅಥವಾ ಸಾಮರ್ಥ್ಯವನ್ನು ನಿರರ್ಥಕವೆಂದು ಕಡೆಗಣಿಸುವುದು ಅಸಾಧ್ಯ.

ದೇವ ಧರ್ಮ ಮತ್ತು ಪ್ರಕೃತಿ ಧರ್ಮ ಎಂಬ ನೆಲೆಯಲ್ಲಿ ಮನುಷ್ಯನಿಗೆ, ಅವನ ತನ್ನ ಸ್ವಾಭಾವಿಕ ಶಕ್ತಿ ಸಾಮರ್ಥ್ಯಗಳನ್ನು ಯಾವ ರೀತಿ ಬಳಸಬೇಕೆಂದು ಮಾರ್ಗದರ್ಶನ ಮಾಡುವುದು, ಆ ಸಾಮರ್ಥ್ಯಗಳ ದುರುಪಯೋಗ ಮಾಡದಂತೆ ಅವನನ್ನು ತಡೆಯುವುದು ಸದುಪಯೋಗದ ದಾರಿ ತೋರಿಸಿಕೊಡುವುದು ಮತ್ತು ತನ್ನ ಸಾಮರ್ಥ್ಯಗಳನ್ನು ಸದುದ್ದೇಶ ಗಳಿಗಾಗಿ ಮಾತ್ರ ಬಳಸುವಂತೆ ಪ್ರೇರಣೆ ಕೊಡುವುದು ಇಸ್ಲಾಮ್‌ನ ಮೂಲ ಉದ್ದೇಶವಾಗಿದೆ ನಿಜವಾಗಿ ಇದುವೇ ದೇವ ಧರ್ಮವನ್ನು ದೇವೇತರ ಧರ್ಮಗಳಿಂದ ಮತ್ತು ಇಸ್ಲಾಮನ ಇಸ್ಲಾಮೇತರ ಧರ್ಮಗಳಿಂದ ಪ್ರತ್ಯೇಕಿಸಿ ಉನ್ನತಗೊಳಿಸುವ ಅತಿ ದೊಡ್ಡ ವೈಶಿಷ್ಟ್ಯ.

ಇಸ್ಲಾಮ್ ತಾನು ಪ್ರಕೃತಿ ಧರ್ಮವಾದ್ದರಿಂದ ಮನುಷ್ಯನ ಪ್ರತಿಯೊಂದು ನೈಸರ್ಗಿ ಒಲವನ್ನೂ ಗಮನಾರ್ಹವಾಗಿ ಗಣನೆಗೆ ತೆಗೆದುಕೊಂಡು ಅದನ್ನು ಗೌರವಿಸುತ್ತದಲ್ಲದೆ ಅದ ಅಸ್ತಿತ್ವಕ್ಕೆ ಏನಾದರೊಂದು ಅರ್ಥ ಮತ್ತು ಅಗತ್ಯ ಇದ್ದೇ ಇದೆ ಎಂಬುದನ್ನು ಅಂಗೀಕರಿಸುತ್ತದೆ ತನ್ನ ವ್ಯಾಪ್ತಿಯೊಳಗೆ ಅಂಥ ಎಲ್ಲ ಸೂಕ್ತ ಒಲವುಗಳ ಬೆಳವಣಿಗೆಗೆ ಮತ್ತು ಈಡೇರಿಕೆಗೆ ಅವಕಾ ಕಲ್ಪಿಸಿಕೊಡುತ್ತದೆ.

ಹೀಗಿರುವಾಗ ವಸ್ತುತಃ ಮನುಷ್ಯ ಪ್ರಕೃತಿಯ ಬಹಳ ವ್ಯಕ್ತ ಹಾಗೂ ಶಕ್ತಿಯು ಒಲವಾಗಿರುವ ಸಾಮೂಹಿಕತೆಯನ್ನು ಈ ಧರ್ಮವು ಕೆಟ್ಟದೆಂದು ನಿಷೇಧಿಸಿರಲು ಅಥವ ಅನಗತ್ಯವೆಂದು ನಿರ್ಲಕ್ಷಿಸಿರಲು ಸಾಧ್ಯವೇ ಇಲ್ಲ, ಇಸ್ಲಾಮ್ ಹಾಗೆ ಮಾಡೀತೆಂದು ಊಹಿಸಲು ಸಾಧ್ಯವಿಲ್ಲ, ತದ್ವಿರುದ್ಧವಾಗಿ ಅದು ಮನುಷ್ಯನ ಸಮೂಹ ಪ್ರಿಯತೆಯ ಈ ಒಲವನ್ನು, ಅವ ಜೀವನೋದ್ದೇಶಕ್ಕೆ ಸಂಬಂಧಿಸಿದ ಒಂದು ಅಗತ್ಯವೆಂದು ಪರಿಗಣಿಸುತ್ತಾ ಈ ಒಲವಿಗೆ ತ ವ್ಯಾಪ್ತಿಯೊಳಗೆ ಸೂಕ್ತವಾದ ಸ್ಥಾನ ಕಲ್ಪಿಸಿಕೊಟ್ಟಿದೆ ಮತ್ತು 'ಮುಸ್ಲಿಮ್' ಆಗಿದ್ದುಕೊಂಡೂ ಅಂಶಗಳನ್ನೆಲ್ಲಾ ಕಡೆಗಣಿಸುತ್ತಾ ಇರುವವನನ್ನು ಅದು ತಪ್ಪಿತಸ್ಥನೆಂದು ಪರಿಗಣಿಸುತ್ತದೆ ಎಂದ ನಂಬಲು ಸಾಕಷ್ಟು ಪುರಾವೆಗಳಿವೆ. ಇಸ್ಲಾಮಿನ ಈ ಚಿತ್ರವನ್ನೇ ಬುದ್ಧಿ ಕೂಡಾ ಒಪ್ಪುತ್ತದ ಒಂದು ವೇಳೆ ವಾಸ್ತವಿಕತೆ ಇದಕ್ಕೆ ವಿರುದ್ಧವಾಗಿದ್ದು ಇಸ್ಲಾಮ್ ಧರ್ಮವು ಸಾಮೂಹಿಕತೆಯ ಕುರಿತು ಇಂಥ ಧೋರಣೆಯನ್ನು ಅನುಸರಿಸದೆ ಇದ್ದಿದ್ದರೆ ಖಂಡಿತವಾಗಿಯೂ ಅದು ಒಂದ ತತ್ವಹೀನ ಹಾಗೂ ವಿರೋಧಾಭಾಸವುಳ್ಳ ಧರ್ಮವೆಂಬ ಆರೋಪಕ್ಕೆ ತುತ್ತಾಗಬೇಕಾಗುತ್ತಿತ್ತು. ಆರೋಪವನ್ನು ನಿರಾಕರಿಸುವಂತೆಯೂ ಇರಲಿಲ್ಲ.

ಈಗ ನಾವು ಇಸ್ಲಾಮ್ ಪ್ರಕೃತಿ ಧರ್ಮವೆಂಬ ನೆಲೆಯಲ್ಲಿ ಪ್ರಕೃತಿಯ ಈ ಸಹ ಬೇಡಿಕೆಯನ್ನು ಎಷ್ಟರ ಮಟ್ಟಿಗೆ ಅಂಗೀಕರಿಸಿದೆ ಮತ್ತು ತನ್ನಲ್ಲಿ ಸಾಮೂಹಿಕತೆಗೆ ಎಂಥ ಸ್ಥಾ

ಾನವನ್ನು ಕಲ್ಪಿಸಿಕೊಟ್ಟಿದೆ ಎಂಬುದನ್ನು ನೋಡೋಣ.

## ಾಮೂಹಿಕತೆಯ ಅಂಗೀಕೃತ ಧಾರ್ಮಿಕ ಮಹತ್ವ

ಇಸ್ಲಾಮೀ ಜೀವನ ವ್ಯವಸ್ಥೆಯಲ್ಲಿ ಸಾಮೂಹಿಕತೆಗೆ ಜಾಗ ಕೊಟ್ಟಿರುವುದು ಮಾತ್ರವಲ್ಲದೆ ದರ ಮಹತ್ವವನ್ನು ಒಪ್ಪುವುದರ ಜೊತೆಗೆ ಅದರ ಎಲ್ಲ ಬೇಡಿಕೆಗಳನ್ನು ಅಂಗೀಕರಿಸಲಾಗಿದೆ ಂಬುದು ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ಗಳ ಪ್ರಾಥಮಿಕ ಅಧ್ಯಯನದಿಂದಲೇ ತಿಳಿದು ರುತ್ತದೆ. ಇನ್ನು ಆಳಕ್ಕೆ ಹೋಗಿ ನೋಡಿದಂತೆಲ್ಲಾ ಈ ನಂಬಿಕೆ ಇನ್ನಷ್ಟು ಉಜ್ವಲವಾಗುತ್ತಾ ಹೋಗುತ್ತದೆ. ಈ ವ್ಯವಸ್ಥೆಯಲ್ಲಿ ಸಾಮೂಹಿಕತೆಗೆ ಅತ್ಯಂತ ಅದ್ಭುತವೆಂದು ತೋರುವಷ್ಟು ಸಾಮಾನ್ಯವಾದ ಮಹತ್ವ ಕೊಡಲಾಗಿದೆ. ಯಾವ ಕೋನದಿಂದ ನೋಡಿದರೂ ಅಲ್ಲಿ ಾಮೂಹಿಕತೆಯ ಮಹತ್ವವನ್ನು ಸಾರುವ ಅಥವಾ ನೆನಪಿಸುವ ಯಾವುದಾದರೂ ಅಂಶ ಂಡಿತ ಕಾಣ ಸಿಗುತ್ತದೆ. ಎಲ್ಲೆಲ್ಲಿ ಸಾಮೂಹಿಕತೆಯ ಅವಕಾಶವಿದೆಯೋ ಅಲ್ಲೆಲ್ಲಾ ಾಮೂಹಿಕತೆಯನ್ನು ಪಾಲಿಸಲು ಇಸ್ಲಾಮ್ ಆದೇಶಿಸಿದೆ ಎಂಬುದು ಈ ಧರ್ಮದ ಸೂಕ್ಷ್ಮ ಧ್ಯಯನದಿಂದ ಮನವರಿಕೆ ಆಗುತ್ತದೆ.

ಈ ವಾದದ ಸಮರ್ಥನೆಗೆ ಬೇಕಾದ ಪುರಾವೆಗಳು ಮತ್ತು ಈ ಸಂಕ್ಷಿಪ್ತ ನಿಯಮದ ವರಗಳು ನಮಗೆ ಈ ಕೆಳಗಿನ ಅಂಶಗಳಲ್ಲಿ ಸಿಗುತ್ತವೆ.

1. ಇಸ್ಲಾಮ್‌ನ ಸಾಮಾಜಿಕ ಕಲ್ಪನೆ. ಅಂದರೆ ಇಸ್ಲಾಮ್ ಮನುಷ್ಯನನ್ನು ಸಾಮಾಜಿಕವಾಗಿ ಯಾವ ಪಾತ್ರದಲ್ಲಿ ಗುರುತಿಸುತ್ತದೆ ಎಂಬುದು.

2. ಮುಸ್ಲಿಮರ ಸಾಮುದಾಯಿಕ ಐಕ್ಯ ಮತ್ತು ಅವರ ಸಂಘಟನಾತ್ಮಕ ಒಗ್ಗಟ್ಟಿನ ಬಗ್ಗೆ ಶರೀಅತ್(ಧರ್ಮ ಸಂಹಿತೆ)ನಲ್ಲಿರುವ ಆದೇಶಗಳು.

3. ಜೀವನದ ಸಾಮಾನ್ಯ ವ್ಯವಹಾರಗಳಲ್ಲಿ ಸಾಮೂಹಿಕ ಶಿಸ್ತಿನೊಂದಿಗೆ ಪಾಲಿಸಬೇಕಾದ ನಿಯಮಗಳ ಬಗ್ಗೆ ಇರುವ ಧಾರ್ಮಿಕ ಆದೇಶಗಳು.

4. ಕಡ್ಡಾಯ ಆರಾಧನಾ ಕರ್ಮಗಳ ವಿಷಯದಲ್ಲಿ ಅನಿವಾರ್ಯಗೊಳಿಸಲಾಗಿರುವ ಸಾಮೂಹಿಕ ಆದೇಶಗಳು.

ನಾವೀಗ ಈ ಪೈಕಿ ಒಂದೊಂದೇ ಅಂಶವನ್ನು ವಿವರವಾಗಿ ಅಭ್ಯಸಿಸೋಣ.

## 1. ಇಸ್ಲಾಮಿನ ಸಾಮಾಜಿಕ ಕಲ್ಪನೆಯ ಹಿನ್ನೆಲೆಯಲ್ಲಿ

ಪ್ರತಿಯೊಂದು ಧರ್ಮವೂ ತನ್ನ ಸಂದೇಶವನ್ನು ಮನುಷ್ಯನ ಮುಂದಿಡುವಾಗ ಮೂಲಭೂತವಾಗಿ ಮನುಷ್ಯನ ಸ್ಥಾನ, ಸ್ವರೂಪ ಅಥವಾ ಜಗತ್ತಿನಲ್ಲಿ ಅವರ ಪಾತ್ರದ ಕುರಿತು ತನ್ನದಾದ ಒಂದು ಕಲ್ಪನೆಯನ್ನು ಹೊಂದಿರುತ್ತದೆ. ಈ ರೀತಿ ಅವನ ಪಾತ್ರವನ್ನು ನಿರ್ಧರಿಸಿದ ಬಳಿಕವೇ ಅವನ ಮುಂದೆ ತನ್ನ ಸಂದೇಶವನ್ನಿಡುತ್ತದೆ. ಈ ರೀತಿ ಅವನ ಪಾತ್ರವನ್ನು ನಿರ್ಧರಿಸದೆ ಮುಂದುವರಿಯುವುದು ಅಸಾಧ್ಯ. ಹಾಗೆಯೇ ಅದು ಅಸಮರ್ಪಕ ಕೂಡಾ. ಏಕೆಂದರೆ

ಒಂದು ಧರ್ಮದ ಸಂದೇಶ, ಅದು ಆ ಸಂದೇಶವನ್ನು ಸಮರ್ಪಿಸುವ ಶೈಲಿ, ಅದರ ವಿ
ನಿಷೇಧಗಳು, ಮೌಲ್ಯಗಳ ನಿರ್ಣಯ ಇವೆಲ್ಲಾ ಭೂಮಿಯಲ್ಲಿ ಮನುಷ್ಯನ ಪಾತ್ರ ಮ
ಸ್ವರೂಪದ ಬಗ್ಗೆ ಆ ಧರ್ಮದ ಕಲ್ಪನೆ ಏನು ಎಂಬುದನ್ನೇ ಅವಲಂಬಿಸಿದೆ. ಇದನ್ನು ಕಡೆಗಣಿಸಿದ
ಆ ಧರ್ಮದ ಬೋಧನೆಗಳಲ್ಲಿ ಯಾವುದೇ ಸಮತೋಲನವಾಗಲೀ, ಸಮರ್ಪಕತೆಯಾಗ
ಉಳಿಯಲಾರದು.

ಮನುಷ್ಯನ ನೈಜ ಮತ್ತು ಸ್ವಾಭಾವಿಕ ಪಾತ್ರ-ಸ್ವರೂಪಗಳನ್ನು ನಿರ್ಣಯಿಸುವು
ಅತ್ಯಗತ್ಯವಾಗಿರುವಂತಹ ಹಲವು ಕ್ಷೇತ್ರಗಳ ಪೈಕಿ ಸಾಮಾಜಿಕತೆಯೂ ಒಂದು ಮಹತ್ವ
ಕ್ಷೇತ್ರವಾಗಿದೆ. ಮನುಷ್ಯನು ತನ್ನ ಪ್ರಪಂಚವನ್ನು ತಾನೊಬ್ಬನೇ ರಚಿಸಿಕೊಳ್ಳುತ್ತಾ ಏಕಾಂತ ಜೀವ
ಸಾಗಿಸಬೇಕೇ? ಅಥವಾ ತನ್ನ ಸಹಜೀವಿಗಳ ಜೊತೆ ಸೇರಿಕೊಂಡು, ಬೆರೆತು ಬದುಕಬೇಕೇ
ಇತರರೊಂದಿಗೆ ಬೆರೆತುಕೊಂಡು ಬದುಕಬೇಕೆಂದಾದರೆ ಅದಕ್ಕಿರುವ ಮಿತಿಗಳೇನು? ಇತರ
ಜೊತೆಗಿನ ಸಂಬಂಧದ ಸ್ವರೂಪ ಹೇಗಿರಬೇಕು ಎಂಬ ಪ್ರಶ್ನೆಗಳಿಗೆಲ್ಲಾ ಪ್ರತಿಯೊಂದು ಧರ್ಮ
ಆರಂಭದಲ್ಲೇ ಏನಾದರೊಂದು ನಿರ್ದಿಷ್ಟ ಉತ್ತರವನ್ನು ಕಂಡಿರಲೇಬೇಕಾಗುತ್ತದೆ.

ಸಹಜವಾಗಿಯೇ, ಇಸ್ಲಾಮ್ ಧರ್ಮವು ಈ ಎಲ್ಲ ಪ್ರಶ್ನೆಗಳಿಗೆ ತನ್ನದಾದ ಒಂದು ನಿರ್ದಿ
ಉತ್ತರವನ್ನು ಕಂಡುಕೊಂಡು, ಮನುಷ್ಯನನ್ನು ಒಂದು ವಿಶಿಷ್ಟ ಸ್ಥಾನದಲ್ಲಿ ಕಲ್ಪಿಸಿಕೊಂಡೇ ತ
ನೀತಿ-ನಿಯಮಗಳನ್ನು ರೂಪಿಸಿದೆ. ಆ ಉತ್ತರ ಯಾವುದು? ಮತ್ತು ಸಾಮಾಜಿಕವಾಗಿ ಅ
ಮನುಷ್ಯನನ್ನು ಯಾವ ದೃಷ್ಟಿಯಿಂದ ನೋಡುತ್ತದೆ ಎಂಬುದನ್ನು ನೋಡೋಣ.

ಮೊದಲನೆಯದಾಗಿ ಮನುಷ್ಯನ ಸಾಮಾಜಿಕ ಸ್ವರೂಪದ ಬಗ್ಗೆ ಇಸ್ಲಾಮಿನ ತಾ
ದೃಷ್ಟಿಕೋನ ಹೀಗಿದೆ?

"ಓ ಮನುಷ್ಯರೇ! ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಸ್ತ್ರೀಯಿಂದ ಸೃಷ್ಟಿಸಿರುವೆ
ಮತ್ತು ನಿಮ್ಮನ್ನು ಜನಾಂಗಗಳಾಗಿಯೂ ಸಮುದಾಯಗಳಾಗಿಯೂ ಮಾಡಿದೆವು."

(ಸೂರಃ ಅಲ್‌ಹುಜರಾತ

ಎರಡನೆಯದಾಗಿ, ಪ್ರಾಯೋಗಿಕವಾಗಿಯೂ ಇಸ್ಲಾಮೀ ನೀತಿ ನಿಯಮಗಳ
ಸಾಮೂಹಿಕತೆಯು ಬಹಳ ಆಳವಾಗಿ ಅಚ್ಚೊತ್ತಿರುವುದು ಸ್ಪಷ್ಟವಾಗಿ ಗೋಚರಿಸುತ್ತ
ಇಸ್ಲಾಮೀ ಶಿಕ್ಷಣ-ಬೋಧನೆಗಳ ಒಂದು ದೊಡ್ಡ ಅಂಶವು ಮನುಷ್ಯನ ಸಾಮಾಜಿಕ ಜೀವ
ಸಂಬಂಧಿಸಿದ್ದಾಗಿದೆ. ಧರ್ಮದ ವ್ಯಕ್ತಿಗತ ಆದೇಶಗಳಂತೆಯೇ ಈ ಸಾಮಾಜಿಕ ಆದೇಶ
ಪಾಲನೆಯನ್ನು ಕೂಡಾ ಇಸ್ಲಾಮ್ ಕಡ್ಡಾಯಗೊಳಿಸಿದೆ. ಅದು ಒಂದೆಡೆ ಅಲ್ಲಾಹ
ಸಂಬಂಧಿಸಿದ ಬಾಧ್ಯತೆಗಳ ಬಗ್ಗೆ ಚರ್ಚಿಸಿದ್ದರೆ ಇನ್ನೊಂದೆಡೆ ಮನುಷ್ಯನ ಮೇಲೆ ತನ್ನ ಸಹಜೀ
ಮನುಷ್ಯರಿಗೆ ಸಂಬಂಧಿಸಿದಂತೆ ಇರುವ ಬಾಧ್ಯತೆಗಳಿಗೆ ಬಹಳಷ್ಟು ಮಹತ್ವ ಕೊಟ್ಟಿದೆ. ಇಸ್ಲಾಮ
ಜನರಿಗೆ ಕೇವಲ ಕೆಲವು ಆರಾಧನಾ ವಿಧಾನಗಳನ್ನು ಕಲಿಸಿ ಸುಮ್ಮನಿರುವ ಧರ್ಮವಲ್ಲ, ಅ
ಮನುಷ್ಯನ ಸಾಮೂಹಿಕ ಬದುಕಿಗೆ ಬೇಕಾದ ಒಂದು ಸಮಗ್ರ ವ್ಯವಸ್ಥೆ ಕೊಡುತ್ತದೆ. ಖಾಸ

ುಟುಂಬಿಕ, ನಾಗರಿಕ ರಾಷ್ಟ್ರೀಯ ನೈತಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ುತ್ತು ಅಂತಾರಾಷ್ಟ್ರೀಯವೆನ್ನದೆ ಮನುಷ್ಯ ಜೀವನದ ಪ್ರತಿಯೊಂದು ಕ್ಷೇತ್ರದ ಬಗ್ಗೆಯೂ ಅದು ಯಮ ನಿರ್ದೇಶನಗಳನ್ನು ಕೊಟ್ಟಿದೆ.

ತಾತ್ವಿಕ ಮತ್ತು ಪ್ರಾಯೋಗಿಕವಾದ ಈ ಎರಡು ಅಂಶಗಳು ಮನುಷ್ಯನ ಸ್ವರೂಪದ ಗ್ಗೆ ಇಸ್ಲಾಮಿನ ದೃಷ್ಟಿಕೋನವನ್ನು ಯಾವುದೇ ವಾದ, ತರ್ಕಗಳ ಅಗತ್ಯವೇ ಇಲ್ಲದಷ್ಟು ಷ್ಟಪಡಿಸುತ್ತವೆ. ಇದರಿಂದ ನಮಗೆ ವ್ಯಕ್ತವಾಗಿ ತಿಳಿದು ಬರುವಂತೆ, ಇಸ್ಲಾಮ್ ಧರ್ಮವು ುನುಷ್ಯನನ್ನು ಅತ್ಯುನ್ನತ ಸಾಮಾಜಿಕ ಸ್ಥಾನದಲ್ಲಿಟ್ಟು ಅವನನ್ನು ಅಭಿಸಂಬೋಧಿಸುತ್ತದೆ. ಸ್ಲಾಮೀ ನಿಯಮಾವಳಿಗಳನ್ನು ಗಮನಿಸಿದಾಗಲೂ, ಇಸ್ಲಾಮ್ ಧರ್ಮವು ಮನುಷ್ಯನ ಗ್ಗೆ ಅವನು ಸಂಘಟಿತ ಸಾಮೂಹಿಕ ಬದುಕು ಸಾಗಿಸುವ ಶಿಸ್ತುಬದ್ಧ ಜೀವಿ ಎಂಬ ಖಚಿತ ಭಿಪ್ರಾಯವನ್ನು ಹೊಂದಿರುವುದು ತಿಳಿಯುತ್ತದೆ.

ಒಬ್ಬ ವ್ಯಕ್ತಿಯು ಒಂದು ಪಂಗಡ, ಜನಾಂಗ ಅಥವಾ ಸಮಾಜದ ಭಾಗ ಮಾತ್ರ ಗಿರುತ್ತಾನೆ. ಪ್ರಸ್ತುತ 'ಸಂಸ್ಥೆ'ಗಳ 'ಭಾಗ'ವಾಗಿಯೇ ಬದುಕಬೇಕಾದುದು ಅವನ ವಶ್ಯಕತೆಯಾಗಿರುತ್ತದೆ. ಮನೆ, ಕುಟುಂಬ, ಹೊಲಗದ್ದೆ, ಪೇಟೆ, ಶಿಕ್ಷಣ ಸಂಸ್ಥೆಗಳು, ಂಶೋಧನಾ ಕೇಂದ್ರಗಳು, ರಾಜಕೀಯ ನಿಯಂತ್ರಣ ಕೇಂದ್ರಗಳು, ಯುದ್ಧರಂಗ, ಪ್ಪಂದ-ಸಂಧಾನಗಳು ಇತ್ಯಾದಿ ಸಮಾಜದ ಎಲ್ಲ ಅಂಗಗಳನ್ನು ಒಂದಿಲ್ಲೊಂದು ಧದಲ್ಲಿ ಅವನು ಅವಲಂಬಿಸಿಕೊಂಡಿರುತ್ತಾನೆ. ಈ ಎಲ್ಲ ವಾಸ್ತವಿಕತೆಗಳನ್ನು ಅಂಗೀಕರಿಸಿ, ದರ ಆಧಾರದಲ್ಲಿ ಮನುಷ್ಯನ ಯಾವ ಸ್ವರೂಪ ನಿರ್ಣಯವಾಗುತ್ತದೋ ಅದನ್ನೇ ುಂದಿಟ್ಟುಕೊಂಡು ಇಸ್ಲಾಮ್ ಧರ್ಮವು ಅವನನ್ನು ಅಭಿಸಂಬೋಧಿಸುತ್ತದೆ.

ಇಸ್ಲಾಮ್, ಮನುಷ್ಯನನ್ನು ಅಭಿಸಂಬೋಧಿಸುವಾಗ ಅವನ ಸಾಮಾಜಿಕ ಸ್ವರೂಪದ ಗ್ಗೆ ಇಂಥ ಕಲ್ಪನೆ ಇಟ್ಟುಕೊಂಡಿದೆ ಎಂಬುದೇ ವಸ್ತುತಃ ಈ ಧರ್ಮವು ಸಾಮೂಹಿಕತೆಯನ್ನು ನ್ನ ಅನುಯಾಯಿಗಳ ಪಾಲಿಗೆ ಕಡ್ಡಾಯಗೊಳಿಸಿದೆ ಎಂಬುದಕ್ಕೆ ಸಾಕ್ಷಿಯಾಗಿದೆ, ಈ ೀತಿ ಇಸ್ಲಾಮ್ ಸಾಮೂಹಿಕತೆಗೆ ಎಷ್ಟೊಂದು ಮಹತ್ವ ಕಲ್ಪಿಸಿದೆಯೆಂದರೆ, ಮನುಷ್ಯನನ್ನು ೀವು ಮೇಲೆ ಹೇಳಿದ್ದಕ್ಕಿಂತ ಭಿನ್ನವಾದ ಯಾವ ಸ್ವರೂಪದಲ್ಲಿ ಕಲ್ಪಿಸಿಕೊಂಡರೂ, ಆ ಭಿನ್ನ ್ವರೂಪದವನು ಇಸ್ಲಾಮಿನ ಅಭಿಸಂಬೋಧಿತನಲ್ಲವಾದ್ದರಿಂದ ಇಸ್ಲಾಮಿಗೆ ಅಭಿಸಂಬೋಧಿತರೇ ಲ್ಲವೆಂದಂತಾಗುತ್ತದೆ.

### . ಸಂಘಟನಾತ್ಮಕ ಆದೇಶಗಳ ಹಿನ್ನೆಲೆಯಲ್ಲಿ:

ಇಸ್ಲಾಮ್ ಧರ್ಮವು ವ್ಯಕ್ತಿಗೆ ಬಹಳಷ್ಟು ಪ್ರಾಧಾನ್ಯ ಕೊಟ್ಟಿದೆ ಎಂಬುದರಲ್ಲಿ ಂದೇಹವಿಲ್ಲ, ನಿಜವಾಗಿ ಇಸ್ಲಾಮ್ ಪ್ರಥಮತಃ ಅಭಿಸಂಬೊಧಿಸುವುದು ವ್ಯಕ್ತಿಯನ್ನೇ. ುನುಷ್ಯನು ತಾನು ಒಬ್ಬಂಟಿಯಾಗಿ ಹುಟ್ಟಿರುವಂತೆಯೇ, ಅಲ್ಲಾಹನ ಆದೇಶಗಳಿಗೆ ದ್ಧವಾಗಿ-ಬದುಕುವ ಮೂಲಕ ತನ್ನ ಜೀವನವನ್ನು ಯಶಸ್ವಿಗೊಳಿಸುವ ಕೆಲಸವನ್ನೂ ಆತನು

ಒಬ್ಬಂಟಿಯಾಗಿಯೇ ಮಾಡಬೇಕಾಗುತ್ತದೆ. ಮರಣಾನಂತರವೂ ಅವನು ಒಬ್ಬಂಟಿಗನಾಗಿಯೆ ತನ್ನ ಕರ್ಮಗಳ ಬಗ್ಗೆ ದೇವನಿಗೆ ಉತ್ತರ ಕೊಡಬೇಕಾಗುತ್ತದೆ. ಆದರೆ ಅದೇ ವೇಳೆ ವ್ಯಕ್ತಿ ಬದುಕು ಯಶಸ್ವಿಯಾಗಲು ಇರುವ ದಾರಿಯೂ ಒಂದು ಸಂಘಟಿತ ಸಾಮೂಹಿಕ ಜೀವನ ಮಧ್ಯೆಯಿಂದಲೇ ಹಾದು ಹೋಗುತ್ತದೆಯೇ ಹೊರತು ಆ ದಾರಿಯು ಸಾಮೂಹಿಕತೆಯಿಂ ತಪ್ಪಿಸಿಕೊಂಡು ಹೋಗುವುದಿಲ್ಲ ಎಂದೂ ಇಸ್ಲಾಮ್ ಧರ್ಮವು ವಾದಿಸುತ್ತದೆ.

**''ಸತ್ಯವಿಶ್ವಾಸಿಗಳೇ... ಎಲ್ಲರೂ ಸೇರಿ ಅಲ್ಲಾಹನ ಪಾಶವನ್ನು ಭದ್ರವಾಗಿ ಹಿಡಿಯಿ ಛಿದ್ರರಾಗದಿರಿ.'' (ಸೂರಃ ಆಲಿ ಇಮ್ರಾನ್)**

ಇಲ್ಲಿ ವಿಚ್ಛಿದ್ರರಾಗದಿರಿ ಎಂದರೆ ಪರಸ್ಪರರಿಂದ ಬೇರ್ಪಡದೆ ಜೊತೆಯಾಗಿ ಒಗ್ಗಟ್ಟಾಗಿ ಎಂದರ್ಥ. ಆದರೆ ಈ ಪರಸ್ಪರ ಒಗ್ಗಟ್ಟು ಯಾವ ಸ್ವರೂಪದ್ದಾಗಿರಬೇಕು ಎಂಬುದ ಸ್ಪಷ್ಟೀಕರಣಕ್ಕೆ ನಾವು ಪ್ರವಾದಿ ಮುಹಮ್ಮದ್(ಸ)ರ ವಚನಗಳೆಡೆಗೆ ಗಮನಹರಿಸೋಣ ಪ್ರವಾದಿ(ಸ) ಹೇಳುತ್ತಾರೆ:

'ಸಂಘಟನೆಯನ್ನು ಭದ್ರವಾಗಿ ಹಿಡಿಯಿರಿ, ಭಿನ್ನತೆಯಿಂದ ದೂರವಿರಿ.' (ತಿರ್ಮಿದಿ)

ನಾನು ನಿಮಗೆ 5 ವಿಷಯಗಳನ್ನು ಆದೇಶಿಸುತ್ತೇನೆ. 1) ಸಂಘಟಿತ ಜೀವನ ನಡೆಸಿ 2) (ನಾಯಕನ ಆದೇಶಗಳನ್ನು) ಆಲಿಸಿರಿ. 3) ಪಾಲಿಸಿರಿ. 4) ಹಿಜ್ರತ್ (ಅಗತ್ಯ ಬಂದಾಗ ವಲ ಹೋಗುವುದು) ಮತ್ತು 5) ಜಿಹಾದ್ ಮಾಡಿರಿ. (ತಿರ್ಮಿದಿ ಮತ್ತು ಅಹ್ಮದ್-ಮಿಶ್ಕಾತ್‌ನಲ್ಲಿ

ಇಸ್ಲಾಮ್ ಧರ್ಮವು ಪ್ರತಿಪಾದಿಸುವಂತಹ ಸಾಮೂಹಿಕ ಜೀವನವು ಕೇವಲ ನೈತಿ ಸಂಬಂಧಗಳ ಆಧಾರದಲ್ಲಿ ರೂಪುಗೊಳ್ಳುವ ದುರ್ಬಲ ಸ್ವರೂಪದ ಸಾಮೂಹಿಕತೆಯೇ ನಾಯಕತ್ವ ಅನುಸರಣೆ ಮತ್ತಿತರ ಎಲ್ಲ ಶಿಸ್ತು, ನಿಯಮಗಳಿಂದ ಕೂಡಿದ ಅತ್ಯಂತ ಸುಸಜ್ಜಿ ಹಾಗೂ ಸುಸಂಘಟಿತ ಸಮೂಹ ಜೀವನವನ್ನೇ ಇಸ್ಲಾಮ್ ಅಪೇಕ್ಷಿಸುತ್ತದೆ.

ಪ್ರಸ್ತುತ ಹದೀಸ್‌ನಲ್ಲಿ ಇರುವಂತಹ ಜಮಾಅತ್ ಅರ್ಥಾತ್ ಸಂಘಟಿತ ಜೀವ ನಡೆಸಿರೆಂಬುದು ಕೇವಲ ಒಂದು ಸಾಮಾನ್ಯ ಅಪ್ಪಣೆಯಲ್ಲ, ಇದು ಎಷ್ಟೊಂದು ಮಹತ್ವ ಆದೇಶವೆಂದರೆ ಈ ಆದೇಶದ ಉಲ್ಲಂಘನೆಯಿಂದ ಒಬ್ಬ ವ್ಯಕ್ತಿಯ ಧರ್ಮ ವಿಶ್ವಾಸ, ಧರ್ಮ ನಿಷ್ಠೆ ಎಲ್ಲವೂ ಬಾಧಿತವಾಗುತ್ತದೆ.

ಪ್ರವಾದಿ(ಸ) ಹೇಳಿದರು: 'ಅಲ್ ಜಮಾಅಃ(ಸಂಘಟಿತ)ದಿಂದ ಒಂದು ಗೇಣು ಕೂಡ ದೂರ ಹೋದವನು ನಿಸ್ಸಂದೇಹವಾಗಿಯೂ ತನ್ನ ಕೊರಳಿನಿಂದ ಇಸ್ಲಾಮಿನ ಉರುಳ ಕಿತ್ತೆಸೆದನು. (ತಿರ್ಮಿದಿ ಮತ್ತು ಅಹ್ಮದ್-ಮಿಶ್ಕಾತ್‌ನಲ್ಲಿ)

ಮುಸ್ಲಿಮರ ನಾಯಕನನ್ನು ಅನುಸರಿಸುವುದು ಬಿಟ್ಟು ಮುಸ್ಲಿಮರ ಕೂಟದಿಂ ದೂರವುಳಿದವನು ಅದೇ ಸ್ಥಿತಿಯಲ್ಲಿ ಮರಣ ಹೊಂದಿದರೆ ಅವನು ಅಜ್ಞಾನಾವಸ್ಥೆಯ ಮರಣ ಹೊಂದಿದ್ದನೆಂದೇ ಅರ್ಥ. (ಮುಸ್ಲಿಮ್ ಭಾಗ 2, ಪುಟ 127)

ಮುಸಲ್ಮಾನರ ಮಟ್ಟಿಗೆ 'ಅಲ್ ಜಮಾಅತ್'ನಿಂದ ಬೇರ್ಪಡುವುದೆಂದರೆ ಅದು ಅವ

ರ್ಮವಿಶ್ವಾಸಕ್ಕೆ ವಿರುದ್ಧವಾದ ಕ್ರಿಯೆಯಾಗಿದೆ. ಹಾಗೆಯೇ ಸಂಘಟಿತ ವ್ಯವಸ್ಥೆಯಿಂದ ೨ರವಿರುವುದು ಕೂಡಾ ಧಾರ್ಮಿಕ ದೃಷ್ಟಿಯಿಂದ ಬಹಳ ಅಪಾಯಕಾರೀ ಅವಸ್ಥೆ ುಸಿಕೊಳ್ಳುತ್ತದೆ.

ತನ್ನ ಕೊರಳಲ್ಲಿ ಬೈಅತ್ (ನಾಯಕನ ಜೊತೆಗಿನ ಕರಾರು) ಇಲ್ಲದವನು ಅದೇ ಸ್ಥಿತಿಯಲ್ಲಿ ುರಣ ಹೊಂದಿದರೆ ಅದು ಅಜ್ಞಾನದ ಸ್ಥಿತಿಯಲ್ಲಿನ ಮರಣವೆನಿಸುವುದು.

(ಮುಸ್ಲಿಮ್ ಭಾಗ 2, ಪುಟ 128)

ಅಲ್ ಜಮಾಅತ್‌ಗೆ ಇಷ್ಟು ಮಹತ್ವ ಬರುವಾಗ ಮತ್ತು ಸಾಮೂಹಿಕ ವ್ಯವಸ್ಥೆಯಿಂದ ೀರ್ಪಡುವುದು ಒಬ್ಬ ಮುಸಲ್ಮಾನನ ಪಾಲಿಗೆ ಅಜ್ಞಾನದ ಅಂಧಕಾರಕ್ಕೆ ಮರಳುವಷ್ಟೇ ೨ರಕವಾಗಿರುವಾಗ ಈ ವ್ಯವಸ್ಥೆಯನ್ನು ದುರ್ಬಲಗೊಳಿಸುವ ಅಥವಾ ಇದರಲ್ಲಿ ಬಿರುಕುಂಟು ಾಡುವ ಯಾವುದೇ ಕ್ರಿಯೆಯನ್ನು ಇಸ್ಲಾಮ್ ಧರ್ಮವು ಖಂಡಿತ ಸಹಿಸಲಾರದೆಂಬುದು ಚಿತ. ಈ ಕುರಿತು ಪ್ರವಾದಿ ಮುಹಮ್ಮದ್(ಸ) ಅವರು ಹೀಗೆನ್ನುತ್ತಾರೆ:

ಈ ಸಂಘಟನೆ (ಮುಸ್ಲಿಮ್ ಸಮುದಾಯ) ಒಂದಾಗಿದ್ದಾಗ ಅದನ್ನು ಒಡೆಯುವವನನ್ನು ತ್ಗದ ಮೇಲಿಡಿ, ಆತ ಯಾರಾದರೂ ಸರಿಯೇ. (ಮುಸ್ಲಿಮ್ ಭಾಗ 2, ಪುಟ 128)

ಇನ್ನೊಂದೆಡೆ ಸ್ವಾಭಾವಿಕವಾಗಿಯೇ ಈ ಸಾಮೂಹಿಕ ವ್ಯವಸ್ಥೆಯ ಮತ್ತು ಅದರ ್ರಯೋಗಿಕ ರೂಪವಾಗಿರುವ ಇಸ್ಲಾಮೀ ಸರಕಾರದ ರಕ್ಷಣೆ ಮತ್ತು ಭದ್ರತೆಗಾಗಿ ್ಲವನ್ನೂ ಪಣಕ್ಕಿಟ್ಟು ಹೋರಾಡುವವರನ್ನು ಇಸ್ಲಾಮ್ ಧರ್ಮವು ಬಹಳ ಶ್ರೇಷ್ಠರೆಂದೂ ುಕರಣೀಯರೆಂದೂ ಪರಿಗಣಿಸುತ್ತದೆ.

ಈ ಕುರಿತು ಪ್ರವಾದಿ(ಸ) ಹೀಗೆಂದಿರುವರು: 'ಒಂದು ಹಗಲು ಮತ್ತು ಇರುಳನ್ನು ತಿಗಳ ರಕ್ಷಣೆಯಲ್ಲಿ ಕಳೆಯುವುದು ಒಂದು ತಿಂಗಳು ನಿರಂತರ ಉಪವಾಸ ಆಚರಿಸುವುದು ್ತು ನಮಾಝ್ ನಿರ್ವಹಿಸುವುದಕ್ಕಿಂತ ಶ್ರೇಷ್ಠವಾಗಿದೆ. ಅವನು ಅದೇ ಸ್ಥಿತಿಯಲ್ಲಿ ತೀರಿ ಂಡರೆ, ಯಾವ ಸತ್ಕಾರ್ಯವನ್ನು ಅವನು ತನ್ನ ಜೀವನಾವಧಿಯಲ್ಲಿ ಮಾಡುತ್ತಲಿದ್ದನೋ ು ನಿರಂತರ ಮುಂದುವರಿಯುತ್ತಿದೆಯೆಂದು ಪರಿಗಣಿಸಲಾಗುವುದು. ಅವನಿಗೆ ಅವನ ೀವನಾಂಶ ಸಿಗುತ್ತಲೇ ಇರುವುದು ಮತ್ತು ಪಿತೂರಿಗಳಿಗೆ ಒಳಪಡಿಸುವವರಿಂದ ಆತನು ರಕ್ಷಿತನಾಗಿರುವನು.' (ಮುಸ್ಲಿಮ್ ಭಾಗ 2, ಪುಟ 142)

ಎರಡು ಕಣ್ಣುಗಳನ್ನು ನರಕಾಗ್ನಿಯು ಸ್ಪರ್ಶಿಸಲಾರದು. 1) ದೇವ ಭಯದಿಂದ ಅತ್ತ ಣ್ಣುಗಳು. 2) ದೇವ ಸಂಪ್ರೀತಿಗಾಗಿ ಗಡಿಗಳ ಪಹರೆಯಲ್ಲಿ ಇರುಳನ್ನು ಕಳೆದ ಕಣ್ಣುಗಳು. ರ್ಮಿದಿ ಭಾಗ 1, ಪುಟ 210)

ಇದೇ ರೀತಿ ಸಾಂಘಿಕ ಶಿಸ್ತಿನ ಪಾಲನೆಯನ್ನು ಸತ್ಯವಿಶ್ವಾಸದ ಅಂಗವೆಂದೂ, ನಾಯಕನ ುಸರಣೆಯನ್ನು ಅಲ್ಲಾಹ್ ಮತ್ತವನ ಪ್ರವಾದಿಯ ಅನುಸರಣೆಯೆಂದೂ ಸಾರಲಾಗಿದೆ.

ಪ್ರವಾದಿ(ಸ) ಹೇಳಿರುವರು: 'ನಾಯಕನ ಆಜ್ಞಾಪಾಲನೆ ಮಾಡಿದವನು ನನ್ನ ಆಜ್ಞಾ ಲನೆ ಮಾಡಿದನು. ನಾಯಕನ ಆಜ್ಞೋಲ್ಲಂಘನೆ ಮಾಡಿದವನು ನನ್ನ ಆಜ್ಞೋಲ್ಲಂಘಕ

ನಾದನು.' (ಮುಸ್ಲಿಮ್ ಭಾಗ 2, ಪುಟ 124)

'ನಾಯಕನ ಅನುಸರಣೆ'ಯ ಈ ಕರ್ತವ್ಯವನ್ನು ಸಾಧ್ಯವಿದ್ದಷ್ಟು ಗರಿಷ್ಠ ಮಟ್ಟ ಪಾಲಿಸಬೇಕೆಂದು ಆದೇಶವಿದೆ. ಎಷ್ಟೆಂದರೆ ಕೆಡುಕಿನಲ್ಲಿ ಮುಳುಗಿರುವಂತಹ ಮತ್ತು ಪ್ರಜೆ ಮೇಲೆ ದೌರ್ಜನ್ಯವೆಸಗುವಂತಹ ನಾಯಕರ ಅನುಸರಣೆ ಮತ್ತು ಬೈಅತ್ ಅನ್ನು ಕೂಡಾ ಬಿ ಬಿಡುವಂತಿಲ್ಲ, ನಿಜವಾಗಿ ಈ ಕೆಡುಕು ಮತ್ತು ದೌರ್ಜನ್ಯಗಳು ಇಸ್ಲಾಮಿನ ದೃಷ್ಟಿಯಲ್ಲಿ ಅತ್ಯ ಘೋರ ಸ್ವರೂಪದ್ದಾಗಿರಬಹುದು. ಆದರೆ ಹಾಗಿದ್ದರೂ ಅವರ ಈ ಅಕ್ರಮಗಳನ್ನು ತಾಳ್ಮೆಯಿ ಸಹಿಸಿಕೊಳ್ಳಬೇಕೆಂದೂ, ಅವರ ನಾಯಕತ್ವವನ್ನು ಪ್ರಶ್ನಿಸದೆ, ಒಳಿತಿನಲ್ಲಿ ಅವರನ್ನು ತ ಅನುಸರಿಸಬೇಕೆಂದೂ ಆದೇಶಿಸಲಾಗಿದೆ.

ಈ ವಿಷಯದಲ್ಲಿ ಇಸ್ಲಾಮ್ ಧರ್ಮವು ಇಷ್ಟು ಉದಾರವಾದ ಕ್ಷಮೆಯ ನೀತಿಯ ಅನುಸರಿಸಿದ್ದೇಕೆ? ಅಕ್ರಮಿ ಮತ್ತು ಭ್ರಷ್ಟ ಆಡಳಿತಗಾರರ ವಿಷಯದಲ್ಲಿ ಇಂತಹ ವಿಪರೀತ ಸ ಮತ್ತು ಸಹಿಷ್ಣುತೆಯ ನೀತಿ ಅನುಸರಿಸುವಂತೆ ಅದು ತನ್ನ ಅನುಯಾಯಿಗಳಿಗೆ ಆದೇಶಿಸ ಕಾರಣವೇನು?

ಸಮುದಾಯದ ಸಂಘಟನೆ ಸುರಕ್ಷಿತವಾಗಿರಬೇಕು ಮತ್ತು ಮುಸಲ್ಮಾನರ ಐಕ್ಯ ವಿಚ್ಛಿದ್ರತೆಯಾಗಿ ಮಾರ್ಪಡಬಾರದು ಎಂಬುದೇ ಈ ನಿಲುವಿನ ಉದ್ದೇಶ. ಈ ಬಗ್ಗೆ ಇರ ಹದೀಸ್‌ಗಳ ಕುರಿತು ಪ್ರಖ್ಯಾತ ವಿದ್ವಾಂಸ ಇಮಾಮ್ ನವವಿ ಅವರು ಹೀಗೆ ಹೇಳಿರುವರು:

'ಆಡಳಿತಗಾರರ ಆದೇಶಗಳನ್ನು ಎಲ್ಲ ಸ್ಥಿತಿಯಲ್ಲೂ ಆಲಿಸಬೇಕು ಮತ್ತು ಪಾ ಬೇಕೆಂಬುದಕ್ಕೆ ಒತ್ತುಕೊಡುವುದೇ ಈ ಹದೀಸ್‌ಗಳ ಹಿಂದಿರುವ ಇಂಗಿತ. ಮುಸಲ್ಮಾ ಐಕ್ಯ ಮತ್ತು ಸಂಘಟನೆಯನ್ನು ಸಂರಕ್ಷಿಸುವುದೇ ಇವುಗಳ ಉದ್ದೇಶ. ಏಕೆಂದರೆ ಭಿನ್ನತೆ ಮುಸಲ್ಮಾನರ ಪಾಲಿಗೆ ಧಾರ್ಮಿಕವಾಗಿಯೂ, ಲೌಕಿಕವಾಗಿಯೂ ಮಾರಕವಾಗಿದೆ.'

(ಶರಹ್ ಮುಸ್ಲಿಮ

ಇದು, ಸಾಮೂಹಿಕ ಶಿಸ್ತು ಮತ್ತು ಸಾಮುದಾಯಿಕ ಐಕ್ಯದ ಕುರಿತು ಇಸ್ಲಾಮ್ ಅನುಯಾಯಿಗಳಿಗೆ ಕೊಟ್ಟಿರುವ ಆದೇಶಗಳ ಒಟ್ಟು ಸಾರಾಂಶ. ಈ ಕೆಲವು ಆದೇಶಗಳ ಗಮನವಿಟ್ಟು ನೋಡಿದರೆ ಇಸ್ಲಾಮಿನಲ್ಲಿ ಸಾಮೂಹಿಕತೆಗೆ ಎಷ್ಟೊಂದು ಮಹತ್ವವಿದೆಯೆಂಬು ಅತ್ಯಂತ ಸ್ಪಷ್ಟವಾಗಿ ಮನವರಿಕೆಯಾಗುತ್ತದೆ.

ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳ ಪ್ರಕಾರ, ಎಲ್ಲ ಮುಸಲ್ಮಾನರೂ ಒಂದು ವಿ ಪಥಕ್ಕೆ (ಹಬ್ಲುಲ್ಲಾಹ್ ಅಥವಾ ಅಲ್ಲಾಹನ ಪಾಶಕ್ಕೆ) ಅಂಟಿಕೊಂಡಿರಬೇಕಾದುದು ಮ ವಿಚ್ಛಿದ್ರತೆಯಿಂದ ದೂರವುಳಿಯಬೇಕಾದುದು ಅತ್ಯವಶ್ಯಕ. ಖಿಲಾಫತ್ ವ್ಯವಸ್ಥೆಯ

9. ಖಿಲಾಫತ್‌ನ ಸ್ಥಾಪನೆ ಕಡ್ಡಾಯ (ವಾಜಿಬ್) ಎಂಬ ಬಗ್ಗೆ ಸಂಪೂರ್ಣ ಮುಸ್ಲಿಮ್ ಸಮುದಾ ಒಮ್ಮತಾಭಿಪ್ರಾಯವಿದೆ. ಈ ಕುರಿತು ವಿವರವಾದ ಚರ್ಚೆ ಇದೇ ಸರಣಿಯಲ್ಲಿ ಒಂದು ಪ್ರತ್ಯೇ ಅಧ್ಯಾಯದಲ್ಲಿ ಬರಲಿದೆ.

ಪಿಸಬೇಕಾದುದು ಅವರ ಮೇಲೆ ಕಡ್ಡಾಯ.[9] ಮುಸ್ಲಿಮರ ಆಡಳಿತಗಾರ(ಇಮಾಮುಲ್ ುಸ್ಲಿಮೀನ್)ನ ಅನುಸರಣೆ ಅಲ್ಲಾಹ್ ಮತ್ತವನ ಪ್ರವಾದಿಯ ಅನುಸರಣೆಗೆ ಸಮಾನ. ಒಬ್ಬನು ುಸ್ಲಿಮ್ ಸಮುದಾಯದ ಸಂಘಟನಾ ವೃತ್ತದಿಂದ ಒಂದು ಗೇಣಿನಷ್ಟಾದರೂ ದೂರ ಸರಿದರೆ ವನು ಇಸ್ಲಾಮಿನ ವೃತ್ತದಿಂದಲೇ ದೂರ ಸರಿದಂತಾಗುತ್ತದೆ. ನಾಯಕನನ್ನು ಗುರುತಿಸಿಯೂ ವನ ಜೊತೆ ಬೈಅತ್ ಮಾಡದೆ ಮರಣ ಹೊಂದಿದರೆ ಅದು ಅಜ್ಞಾನದಲ್ಲಿನ ಮರಣವೆನಿಸುತ್ತದೆ. ಲ್ ಜಮಾಅಃ' ಅರ್ಥಾತ್ ಸಾಮುದಾಯಿಕ ಸಂಘಟನೆಯಲ್ಲಿ ಬಿರುಕುಂಟು ಮಾಡುವವನ ್ರಾಣಕ್ಕೆ ಬೆಲೆ ಇಲ್ಲವಾಗುತ್ತದೆ. ಸಮಾಜದ ಸಾಮೂಹಿಕ ವ್ಯವಸ್ಥೆ ಅಥವಾ ಇಸ್ಲಾಮೀ ಸರಕಾರದ ಂರಕ್ಷಣೆಗಾಗಿ ಹೋರಾಡುವುದಕ್ಕಿಂತ ದೊಡ್ಡ ಆರಾಧನಾ ಕರ್ಮ ಇಲ್ಲ...

ಈ ಎಲ್ಲ ವಾಸ್ತವಗಳನ್ನು ಗಮನಿಸಿದಾಗ ನಿಮಗೇನನಿಸುತ್ತದೆ? ಸಾಮೂಹಿಕತೆಗೆ ಗಬೇಕಾದ ಯಾವ ಮಹತ್ವ ಇಸ್ಲಾಮಿನಲ್ಲಿ ಅದಕ್ಕೆ ಸಿಕ್ಕಿಲ್ಲ?

## . ಸಾಮೂಹಿಕ ಆದೇಶಗಳ ಹಿನ್ನಲೆಯಲ್ಲಿ:

ಸಾಮಾನ್ಯವಾಗಿ ಒಂದು ಆಡಳಿತ ವ್ಯವಸ್ಥೆಯ ಸ್ಥಾಪನೆ ಎಂಬುದೇ 'ಸಾಮೂಹಿಕತೆ ಮತ್ತು ಮೂಹಿಕ ಜೀವನ ವ್ಯವಸ್ಥೆ'ಯ ಅತ್ಯಂತ ವಿಶಾಲ ಹಾಗೂ ಅತ್ಯುನ್ನತ ವಿಶ್ಲೇಷಣೆ ಎಂದು ಾವಿಸಲಾಗುತ್ತದೆ. ಈ ರೀತಿ ಆಡಳಿತ ವ್ಯವಸ್ಥೆಯ ಸ್ಥಾಪನೆಯೇ ಸಾಮೂಹಿಕತೆಯ ಆಪೇಕ್ಷಿತ ಾನವೆಂದೂ, ಅದರ ಪರಿಪೂರ್ಣತೆಯ ಅಂತಿಮ ಮಟ್ಟವೆಂದೂ, ಆಡಳಿತ ಪ್ರಭಾವ ಮತ್ತು ಟುವಟಿಕೆಗಳ ವೃತ್ತದಿಂದ ಹೊರಗಿರುವ ಜೀವನಕ್ಕೆಲ್ಲಾ ಸಾಮೂಹಿಕತೆಯ ಜೊತೆ ಯಾವ ಂಬಂಧವೂ ಇಲ್ಲವೆಂದೂ ಸಾಮಾನ್ಯ ಸಮಾಜಗಳಲ್ಲಿ ಜನರು ನಂಬುತ್ತಾರೆ ಎಂದಂತಾಯಿತು.

ಆದರೆ, ಇಸ್ಲಾಮ್ ಈ ಸಾಮಾನ್ಯ ನಿಲುವನ್ನು ಒಪ್ಪದೆ ಮುಂದುವರಿಯುತ್ತದೆ. ಅದು ನ್ನ ಅನುಯಾಯಿಗಳಿಗೆ ಕೇವಲ ಆಡಳಿತ ಅಥವಾ ಸರಕಾರದ ವಿಷಯದಲ್ಲಿ ಮಾತ್ರವಲ್ಲದೆ ವಲಯಕ್ಕಿಂತ ಹೊರಗಿರುವ ಜೀವನದ ಉಳಿದೆಲ್ಲಾ ಕ್ಷೇತ್ರಗಳಲ್ಲೂ ಯಾವುದಾದರೊಂದು ಧದಲ್ಲಿ ಸಾಮೂಹಿಕ ಶಿಸ್ತನ್ನು ಪಾಲಿಸುತ್ತಲೇ ಬದುಕಬೇಕೆಂದು ಆದೇಶಿಸುತ್ತವೆ. ಈ ಕುರಿತು ಸ್ಲಾಮ್ ಧರ್ಮ ಕೊಡುವ ಕೆಲವು ಆದೇಶಗಳನ್ನು ಕ್ರಮವಾಗಿ ಅವಲೋಕಿಸೋಣ.

1. ಹಝ್ರತ್ ಅಬ್ದುಲ್ಲಾ ಬಿನ್ ಉಮರ್(ರ) ಹೇಳುತ್ತಾರೆ; ಪ್ರವಾದಿ ಮುಹಮ್ಮದ್(ಸ) ೞಳಿದರು: 'ಅತ್ಯಂತ ನಿರ್ಜನ ಪ್ರದೇಶವೊಂದರಲ್ಲಿ ಕೂಡಾ ಮೂರು ಮಂದಿ ಇದ್ದರೆ ಅವರು ಮ್ಮ ಪೈಕಿ ಒಬ್ಬನನ್ನು ನಾಯಕನನ್ನಾಗಿ ನೇಮಿಸದೆ ಇರುವುದು ಸರಿಯಲ್ಲ.' (ಮುಂತಕಾ 230)

ಈ ಪ್ರವಾದಿ ವಚನದ ಪ್ರಕಾರ ಕೇವಲ ಮೂರು ಮಂದಿ ಮುಸ್ಲಿಮರು ಒಂದು ಕಡೆ ದ್ದರೂ– ಅವರಿರುವ ಸ್ಥಳ ಜನವಾಸವಿಲ್ಲದ ಯಾವುದೋ ಮೂಲೆಯಾಗಿದ್ದರೂ ಅವರು ತಮ್ಮ ಕಿ ಒಬ್ಬನನ್ನು ತಮ್ಮ ನಾಯಕನನ್ನಾಗಿ ನೇಮಿಸಿ ಉಳಿದಿಬ್ಬರು ಅವನನ್ನು ಅನುಸರಿಸಬೇಕಾಗುತ್ತದೆ. ರೀತಿ ತಮ್ಮ ಗುಂಪನ್ನು ಸಂಘಟಿಸುವ, ಶಿಸ್ತಿಗೊಳಪಡಿಸುವ ಅಥವಾ ಒಂದು ರೀತಿಯಲ್ಲಿ ಸಣ್ಣ ಆಡಳಿತ ವ್ಯವಸ್ಥೆ'ಯೊಂದನ್ನು ರೂಪಿಸುವ ತನಕ ಅವರ ಜೀವನ ಒಂದು ಇಸ್ಲಾಮೀ ಜೀವನ

ಎನಿಸಿಕೊಳ್ಳುವುದಿಲ್ಲ.

2. ಹಝ್ರತ್ ಅಬೂ ಸಈದ್ ಖುದ್ರೀ(ರ) ಹೇಳುತ್ತಾರೆ; ಪ್ರವಾದಿ ಮುಹಮ್ಮದ್( ಹೀಗೆಂದರು: 'ನಿಮ್ಮ ಪೈಕಿ ಮೂರು ಮಂದಿ ಪ್ರಯಾಣ ಹೊರಟಾಗ ಅವರು ತಮ್ಮಲ್ಲೊಬ್ಬನ ನಾಯಕನಾಗಿ ನೇಮಿಸಲಿ.' (ಅಬೂದಾವೂದ್ ಭಾಗ– 1, ಪುಟ– 351)

ಅಂದರೆ ಪ್ರಯಾಣದಂತಹ ಸೀಮಿತ ಅವಧಿಯೂ ಸಂಘಟನೆ ಮತ್ತು ಶಿಸ್ತಿನಿ ಮುಕ್ತವಾಗಿರಬಾರದು ಎಂದು ಆದೇಶಿಸಲಾಗಿದೆ. ಈ ರೀತಿ ಕೇವಲ ಮೂರು ಮಂ ಕೂಡಾ, ಜೊತೆಯಾಗಿ ಪ್ರಯಾಣದಲ್ಲಿ ತಮ್ಮ ನಾಯಕನೆಂದು ನೇಮಿಸಿ ಅವನ ನೇತೃತ್ವದ ಪ್ರಯಾಣಿಸಬೇಕು. ಇದು ಇಸ್ಲಾಮೀ ಸ್ವಭಾವಕ್ಕೆ ತಕ್ಕುದಾದ ನಿಲುವಾಗಿದೆ.

3. ಹಝ್ರತ್ ಅಬೂ ಸಅಲಬ ಖುಶ್ನೀ(ರ) ಹೇಳುತ್ತಾರೆ: ಹಿಂದೆ ಪ್ರಯಾಣದ ಮ ಯಾತ್ರಾ ತಂಡವು ಎಲ್ಲಾದರೂ ನಿಂತಾಗ ಜನರೆಲ್ಲಾ ಅತ್ತಿತ್ತ ಚದುರಿ ಹೋಗುತ್ತಿದ್ದ ಪ್ರತಿಯೊಬ್ಬರೂ ತಮಗಿಚ್ಛೆ ಬಂದಲ್ಲಿ ಹೋಗಿ ತಂಗುತ್ತಿದ್ದರು. ಒಮ್ಮೆ ಈ ಅವಸ್ಥೆ ಕಂಡು ಪ್ರವಾ ಮುಹಮ್ಮದ್(ಸ) ಅವರು ಜನರನ್ನು ಹೀಗೆಂದು ಎಚ್ಚರಿಸಿದರು: 'ನೀವು ಈ ರೀತಿ ವಿ ಬಯಲು ತಪ್ಪಲುಗಳಲ್ಲಿ ಚದುರಿ ಹೋಗುವುದಕ್ಕೆ ಶೈತಾನನ ಪ್ರೇರಣೆಯೇ ಕಾರಣ.'

(ಅಬೂದಾವೂದ್ ಭಾಗ– 1, ಪುಟ– 35

ಕೇವಲ ಪ್ರಯಾಣದಲ್ಲಿ ಮಾತ್ರವಲ್ಲ, ಪ್ರಯಾಣದ ಮಧ್ಯೆ ಕೆಲವು ಗಂಟೆಗಳ ವಿರಾ ವೇಳೆಯಲ್ಲಿ ಕೂಡಾ ಜನರು ಸಂಘಟನಾ ಶಿಸ್ತಿನಿಂದ ಮುಕ್ತರಾಗಿ ಆ ಶಿಸ್ತಿಗೆ ಅಪವಾದವೆಂ ತೋರುವ ರೀತಿಯಲ್ಲಿ ತಮ್ಮಿಚ್ಛೆಯಂತೆ ವರ್ತಿಸುವುದು ಕೂಡಾ ಸಂಘಟನಾ ಸ್ಫೂರ್ತಿ ವಿರುದ್ಧವಾಗಿದ್ದು ಅದನ್ನು ಇಸ್ಲಾಮ್ ಧರ್ಮವು ಸಹಿಸುವುದಿಲ್ಲ, ಮಾತ್ರವಲ್ಲದೆ ಅದು ಶೈತಾ ಅನುಸರಣೆಯೆಂದು ಪರಿಗಣಿಸುತ್ತದೆಂದು ಇದರಿಂದ ತಿಳಿಯುತ್ತದೆ.

4. ಒಮ್ಮೆ ಓರ್ವ ಸಹಾಬಿ ಒಂದು ಬೆಟ್ಟದಿಂದ ಕೆಳಗೆ ಇಳಿಯುತ್ತಿದ್ದರು. ಅವ ದೂರದಲ್ಲಿ ಸಿಹಿ ನೀರಿನ ಬುಗ್ಗೆಯೊಂದು ಚಿಮ್ಮುತ್ತಿರುವುದು ಕಂಡಿತು. ಅಲ್ಲಿನ ದ ಅವರಿಗೆ ಅತ್ಯಂತ ರಮ್ಯವೆನಿಸಿತು. ನಾನೇಕೆ ಜನವಾಸದ ಸ್ಥಳಗಳನ್ನೆಲ್ಲಾ ಬಿಟ್ಟು ಇಲ್ಲೇ ಬಂ ವಾಸಿಸಬಾರದು ಎಂದವರು ಆಲೋಚಿಸ ತೊಡಗಿದರು. ಅವರು ತಮ್ಮ ಈ ಆಲೋಚನೆಯ ಪ್ರವಾದಿ ಮುಹಮ್ಮದ್(ಸ)ರಿಗೆ ತಿಳಿಸಿ ಅಲ್ಲಿ ಹೋಗಿ ನೆಲೆಸಲು ಅನುಮತಿ ಕೇಳಿದರು. ಅವ ಪ್ರವಾದಿ ಮುಹಮ್ಮದ್(ಸ) ಹೀಗೆಂರು: 'ಬೇಡ, ಹಾಗೆ ಮಾಡಬೇಡಿ. ನಿಮ್ಮಲ್ಲೊಬ್ಬನು ಅಲ್ಲಾ ಮಾರ್ಗದಲ್ಲಿ ಕೇವಲ ನಿಂತುಕೊಳ್ಳುವುದು, ಮನೆಯೊಳಗೆ ಕುಳಿತು ಎಪ್ಪತ್ತು ವರ್ಷ ನಮಾ ನಿರ್ವಹಿಸುವುದಕ್ಕಿಂತ ಉತ್ತಮ.' (ತಿರ್ಮಿದಿ, ಭಾಗ – 1)

ಸಮೂಹ ಜೀವನವನ್ನು ಬಿಟ್ಟು ಏಕಾಂತದ ಬದುಕನ್ನು ಆಯ್ದುಕೊಳ್ಳುವುದ ಧಾರ್ಮಿಕ ಅಥವಾ ಲೌಕಿಕವಾಗಿ ಅದೆಷ್ಟೇ ಪ್ರಯೋಜನಗಳಿವೆ ಎಂದು ಕಂಡರೂ ಇಸ್ಲಾ ಧರ್ಮವಂತೂ ತನ್ನ ಅನುಯಾಯಿಗಳಿಗೆ ಸಮೂಹದಿಂದ ಬೇರ್ಪಟ್ಟು ಬದುಕಲು ಅನುವ

ವುದಿಲ್ಲ. ಮೇಲ್ನೋಟಕ್ಕೆ ಏಕಾಂತದ ಬದುಕಿನಲ್ಲಿ ಧಾರ್ಮಿಕ ಮತ್ತು ಲೌಕಿಕವಾದ ಎಷ್ಟೇ
ಯೋಜನಗಳು ಕಂಡು ಬಂದರೂ ಒಂದು ಸುಸಂಘಟಿತ ಇಸ್ಲಾಮೀ ಸಮಾಜದೊಳಗೆ ಒಬ್ಬ
ುಸ್ಲಿಮನಿಗೆ ಸಿಗುವ ಪ್ರಯೋಜನಗಳಿಗೆ ಹೋಲಿಸಿದರೆ ಅವೆಲ್ಲಾ ತೀರಾ ನಿಕೃಷ್ಟ.

ಚಿಂತಿಸಿ! ಪ್ರಯಾಣ ಮತ್ತು ಇತರ ಸಂದರ್ಭಗಳಲ್ಲಿ ಪಾಲಿಸಲು ಕೊಡಲಾಗಿರುವ ವಿವಿಧ ಧಾರ್ಮಿಕ ಆದೇಶಗಳು ಇಸ್ಲಾಮೀ ವೈಚಾರಿಕ ವ್ಯವಸ್ಥೆ ಮತ್ತದರ ಪ್ರಾಯೋಗಿಕ ವಸ್ಥೆಯಲ್ಲಿ ಸಾಮೂಹಿಕತೆಗೆ ಎಷ್ಟೊಂದು ಉನ್ನತ ಸ್ಥಾನ ಕೊಡಲಾಗಿದೆ. ನಿಜವಾಗಿ ಇದು ವಲ ಇಸ್ಲಾಮ್ ಧರ್ಮದಲ್ಲಿ ಮಾತ್ರ ಇರುವ ಮತ್ತು ಜಗತ್ತಿನ ಬೇರಾವುದೇ ವ್ಯವಸ್ಥೆಯಲ್ಲಿ ರಿಚಿತವಾಗಿರುವ ಒಂದು ವೈಶಿಷ್ಟ್ಯವನ್ನು ತೋರಿಸುತ್ತದೆ. ಇಸ್ಲಾಮೀ ಜೀವನದ ಮೂಹಿಕ ಬೇಡಿಕೆಗಳು ಕೇವಲ ಆಡಳಿತ ನಿರ್ವಹಣೆಯಲ್ಲಿಗೆ ಸೀಮಿತವಾಗಿರದೆ, ಈ ಕ್ಷೇತ್ರದ ರಗಿನ ಸಂಪೂರ್ಣ ಜೀವನವನ್ನು ಆವರಿಸಿಕೊಂಡಿವೆ. ಒಟ್ಟಿನಲ್ಲಿ ಇಸ್ಲಾಮಿನ ದೃಷ್ಟಿಯಲ್ಲಿ ಮೂಹಿಕತೆಗೆ ಅತ್ಯಂತ ಮಹತ್ವದ ಉನ್ನತ ಸ್ಥಾನ ಇರುವುದು ಮಾತ್ರವಲ್ಲ, ಆ ಕಲ್ಪನೆಯು ಳ ವಿಶಾಲವೂ ಅತ್ಯಂತ ವ್ಯಾಪಕವೂ ಆಗಿದೆ. ಎಷ್ಟೆಂದರೆ ಮನುಷ್ಯನ ಸಾಮಾನ್ಯ ಬದುಕಿನ ದು ಸಣ್ಣಕ್ಷೇತ್ರವನ್ನು ಕೂಡಾ, ತನ್ನ ಈ ಕಲ್ಪನೆಯ ಪ್ರಭಾವದಿಂದ ಮುಕ್ತವಾಗಿಡಲು ಇಸ್ಲಾಮ್ ುಮತಿಸುವುದಿಲ್ಲ.

ಈ ಕುರಿತು ಪ್ರಸ್ತಾಪಿಸಲಾದ ಹದೀಸ್‌ಗಳನ್ನು ವಿಶ್ಲೇಷಿಸುತ್ತಾ ಅಲ್ಲಾಮಾ ಶೌಕಾನೀ(ರ) ಗೆ ಹೇಳಿರುವರು:

ಎಲ್ಲಾದರೂ ಮೂರು ಅಥವಾ ಅದಕ್ಕಿಂತ ಹೆಚ್ಚು ಮಂದಿ ಮುಸಲ್ಮಾನರು ಇದ್ದರೆ ಅವರು ್ಮ ಪೈಕಿ ಒಬ್ಬನನ್ನು ತಮ್ಮ 'ಅಮೀರ್' (ನಾಯಕ) ಆಗಿ ನೇಮಿಸಬೇಕೆಂಬ ಶರೀಅತ್‌ನ ೇಶಕ್ಕೆ ಈ ಹದೀಸ್‌ಗಳು ಆಧಾರವಾಗಿವೆ. ಇದು ಪರಸ್ಪರ ಭಿನ್ನತೆಯಿಂದ ಪಾರಾಗಲು ಇರುವ ರ್ಗವಾಗಿದೆ. ನಿರ್ಜನ ಅರಣ್ಯದಲ್ಲಿರುವ ಅಥವಾ ಪ್ರಯಾಣಿಸುವ ಮೂರು ಜನರಿಗೆ ಥ ಆದೇಶ ಇರುವಾಗ, ಯಾವುದಾದರೂ ಹಳ್ಳಿ ಅಥವಾ ಪಟ್ಟಣದಲ್ಲಿ ದೊಡ್ಡ ಸಂಖ್ಯೆಯಲ್ಲಿ ಸುವ ಮುಸಲ್ಮಾನರ ಮಟ್ಟಿಗೆ ಈ ಆದೇಶವು ಬಹಳ ಹೆಚ್ಚು ಅನ್ವಯವಾಗುತ್ತದೆ.

(ನೈಲುಲ್ ಔತಾರ್)

## ಇಸ್ಲಾಮೀ ಆರಾಧನೆಗಳಲ್ಲಿ ಸಾಮೂಹಿಕತೆ:

ಮನುಷ್ಯ ಜೀವನದ ವಿವಿಧ ಶಾಖೆಗಳ ಪೈಕಿ 'ಆರಾಧನೆ'ಯ ಶಾಖೆಯಲ್ಲಿ ಮೂಹಿಕತೆಯನ್ನು ಕಲ್ಪಿಸಿಕೊಳ್ಳುವುದೂ ಕಷ್ಟ. ದೇವಾರಾಧನೆಯ ಹೆಸರೆತ್ತಿದರೆ ಸಾಕು, ನಮ್ಮ ನೆ ಏಕಾಂತದೆಡೆಗೆ, ನಿರ್ಜನ ಪ್ರದೇಶಗಳೆಡೆಗೆ ಹರಿಯತೊಡಗುತ್ತದೆ. ಆರಾಧನೆಯೆಂದರೆ ು ಅಪ್ಪಟವಾಗಿ ಧರ್ಮಕ್ಕೆ ಮತ್ತು ಪರಲೋಕಕ್ಕೆ ಮಾತ್ರ ಸಂಬಂಧಿಸಿದ ವಿಚಾರ ಹಾಗೂ ಾವ ರೀತಿಯಲ್ಲೂ ಅದು ಲೌಕಿಕ ಸಂಗತಿಯಲ್ಲ ಎಂಬ ಆಲೋಚನೆ ಹುಟ್ಟಿಕೊಳ್ಳುತ್ತದೆ. ರುವಾಗ ಅದನ್ನು ಸಾಮೂಹಿಕಗೊಳಿಸಲು ಹೇಗೆ ಸಾಧ್ಯ? ನಮ್ಮ ಕೌಟುಂಬಿಕ,

ಸಾಮುದಾಯಿಕ, ಸಾಮಾಜಿಕ ಮತ್ತು ರಾಷ್ಟ್ರೀಯ ಬದುಕಿಗೆ ಸಾಮೂಹಿಕತೆಯ ಅಗತ್ಯ ಬಹುದಾದರೂ ದೇವನನ್ನು ಸ್ಮರಿಸುವುದಕ್ಕೆ ಸಾಮೂಹಿಕತೆಯ ಅಗತ್ಯವೇನಿದೆ? ಆರಾಧನೆ, ದೆ ಧ್ಯಾನಗಳೆಲ್ಲಾ ವಿರಕ್ತಿ ಮತ್ತು ಪರಿಸರದಿಂದ ವಿಮುಕ್ತಿಯನ್ನು ಮಾತ್ರ ಬಯಸುತ್ತದೆಂದ ಮೇ ದೇವಾಲಯಗಳಲ್ಲಿ, ಧ್ಯಾನ ಮಂದಿರಗಳಲ್ಲಿ ಏಕಾಂತದ ಹೊರತು ಬೇರೇನನ್ನೂ ಊಹಿಸುವು ಕಷ್ಟವೆಂದ ಮೇಲೆ ಒಂದು ಧರ್ಮ ಆರಾಧನೆಗಳಲ್ಲೂ ಕೆಲವು ಸಾಮೂಹಿಕ ಶಿಷ್ಟಾಚಾರ ಪಾಲನೆಯನ್ನು ನಿರ್ಬಂಧಿಸಿದ್ದರೆ ಅದರ ಅರ್ಥವೇನು? ಅದಕ್ಕೊಂದು ಬಲವಾದ ಕಾ ಇರಲೇಬೇಕು. ಆ ಧರ್ಮವು ಸಾಮೂಹಿಕತೆಗೆ ಗರಿಷ್ಠ ಮಹತ್ವ ಕಲ್ಪಿಸಿಕೊಡುವುದಕ್ಕಾಗಿ ಈ ಅಂತಿಮ ಹೆಜ್ಜೆ ಇಟ್ಟಿದೆ ಎಂದೇ ಅರ್ಥೈಸಬೇಕಾಗುತ್ತದೆ. ಹೀಗಿರುವಾಗ ಆ ಧರ್ಮ ಸಾಮೂಹಿಕತೆಗೆ ಇರುವ ಮಹತ್ವ ಯಾವ ಮಟ್ಟದ್ದೆಂಬುದನ್ನು ನಿರ್ಧರಿಸುವಲ್ಲಿ ಅದು ಆರಾಧನಾ ವ್ಯವಸ್ಥೆಯಲ್ಲಿ ಸೇರಿಸಿರುವ ಸಾಮೂಹಿಕ ಶಿಷ್ಟಾಚಾರಗಳು ಅತ್ಯಂತ ನಿರ್ಣಾ ಪಾತ್ರ ವಹಿಸಬಲ್ಲವು. ಆರಾಧನೆಯಂತಹ ಕಾರ್ಯದಲ್ಲಿ ಆ ಧರ್ಮವು ಸಾಮೂಹಿಕತೆಗೆ ಎ ಮಹತ್ವ ಕೊಟ್ಟಿದೆಯೋ, ಅದುವೇ ಅದರ ಒಟ್ಟು ವ್ಯವಸ್ಥೆಯಲ್ಲಿ ಸಾಮೂಹಿಕತೆಗೆ ಇರುವ ಗ ಸ್ಥಾನ ಎಂದು ತಿಳಿಯಬಹುದು.

ಇಸ್ಲಾಮಿನ ಮಟ್ಟಿಗೆ ಹೇಳುವುದಾದರೆ ಅದರ ಆರಾಧನಾ ವ್ಯವಸ್ಥೆ ಸಾಮೂಹಿಕತೆಯು ಒಂದು ಮುಖ್ಯ ಅಂಶವಾಗಿ ಗೋಚರಿಸುತ್ತದೆ. ಅದು ಯಾವ ಮಟ್ಟ ಮತ್ತು ಯಾವ ಸ್ವರೂಪದಲ್ಲಿ ಎಂಬುದಕ್ಕೆ ಉದಾಹರಣೆಗಳು ಇಲ್ಲಿವೆ:

## (ಅ) ನಮಾಝ್‌ನಲ್ಲಿ ಸಾಮೂಹಿಕತೆ:

ಈ ವಿಷಯದಲ್ಲಿ ನಾವು ಪ್ರಥಮವಾಗಿ ನಮಾಝನ್ನೇ ತೆಗೆದುಕೊಳ್ಳೋಣ. ಏಕೆಂ ಇದು ಇಸ್ಲಾಮಿನಲ್ಲಿ ಅತಿ ಹೆಚ್ಚು ಪ್ರಾಮುಖ್ಯತೆ ಇರುವ ಆರಾಧನೆ. ಇದು ಸಂಪೂರ್ಣ ಧರ್ಮ ತಿರುಳು ಮತ್ತು ಅದರ ಮೂಲ. ಇದನ್ನು ಇಸ್ಲಾಮಿನ ಆಧಾರಸ್ಥಂಭ (ಇಮಾದುದ್ದೀನ್) ಎಂ ವರ್ಣಿಸಲಾಗಿದೆ. ಈ ಆರಾಧನೆಯಲ್ಲಿ ಪಾಲಿಸಬೇಕಾದ ಕೆಲವು ಗಮನಾರ್ಹ ನಿಯಮ ಹೀಗಿವೆ:

(ಅ) ನಮಾಝ್ ನಿರ್ವಹಿಸುವಾಗ ಜಗತ್ತಿನ ಎಲ್ಲ ಮುಸ್ಲಿಮರೂ ಸೂಚಿಸಲ್ಪಟ್ಟ ಒಂ ದಿಕ್ಕಿಗೆ ಮುಖಮಾಡಿ ನಿಲ್ಲಬೇಕು. (**'ನೀವು ಎಲ್ಲಿದ್ದರೂ ಪವಿತ್ರ ಕಅಬಾದತ್ತ ಮುಖ ಮ ನಿಲ್ಲಿರಿ' ಪವಿತ್ರ ಕುರ್‌ಆನ್ 2:144**) ಒಬ್ಬ ವ್ಯಕ್ತಿ ಮುಸಲ್ಮಾನನೋ ಅಲ್ಲವೋ ಎಂಬು ಅವನು ಪವಿತ್ರ ಕಅಬಾದತ್ತ ಮುಖಮಾಡಿ ನಮಾಝ್ ಮಾಡುವನೋ ಇಲ್ಲವೋ ಎ ಆಧಾರದಲ್ಲಿ ನಿರ್ಧರಿಸಬಹುದು. ಈ ಕ್ರಿಯೆಗೆ ಅಷ್ಟು ಮಹತ್ವ ಇದೆ. ('ನಮ್ಮಂತೆ ನಮಾ ನಿರ್ವಹಿಸುವವನು, ನಮ್ಮ ಕಿಬ್ಲಾ ಅಭಿಮುಖ ಕೇಂದ್ರದೆಡೆಗೆ ಮುಖ ಮಾಡುವವನು ವ ನಾವು ದಿಬಹ್ ಮಾಡಿದ ಪ್ರಾಣಿ ತಿನ್ನುವವನು ಅವನೇ ಮುಸಲ್ಮಾನ' ಹದೀಸ್: ಬುಖಾ ಭಾಗ– 1 ಪುಟ – 56)

ನಿಜವಾಗಿ ಅಲ್ಲಾಹನು ಯಾವುದಾದರೊಂದು ವಿಶಿಷ್ಟ ದಿಕ್ಕಿನಲ್ಲಿ ಮಾತ್ರ ಇರುವವನಲ್ಲ, ಎಲ್ಲಡೆಯೂ, ಎಲ್ಲ ದಿಕ್ಕುಗಳಲ್ಲೂ ಇರುವವನು. ಇದನ್ನು ಪವಿತ್ರ ಕುರ್‌ಆನ್‌ನಲ್ಲೇ ಬಹಳ ಷ್ಟವಾಗಿ ಸಾರಲಾಗಿದೆ. ('ನೀವು ಯಾವ ದಿಕ್ಕಿಗೆ ಮುಖ ಮಾಡಿದರೂ ಅಲ್ಲಾಹನ ಗಮನ ಆ ಗಿದೆ' ಪವಿತ್ರ ಕುರ್‌ಆನ್: 2-115)

(ಅ) ನಮಾಝ್‌ಗಳ ಪೈಕಿ ಮೂಲಭೂತ ಪ್ರಾಮುಖ್ಯತೆಯುಳ್ಳ ಕಡ್ಡಾಯ ನಮಾಝ್ ನ್ನು ಸಾಮೂಹಿಕವಾಗಿ ನಿರ್ವಹಿಸಬೇಕೆಂಬ ಆದೇಶವಿದೆ. ಈ ಕಡ್ಡಾಯ ನಮಾಝ್‌ಗಳನ್ನು ಮೂಹಿಕವಾಗಿ ನಿರ್ವಹಿಸಿದರೆ ಒಬ್ಬಂಟಿಯಾಗಿ ನಿರ್ವಹಿಸುವುದಕ್ಕಿಂತ ಇಪ್ಪತ್ತೇಳು ಪಟ್ಟು ಕ ಪುಣ್ಯವಿದೆ. (ಬುಖಾರಿ: ಭಾಗ- 1)

ನಮಾಝುನ್ನು ಈ ರೀತಿ ಸಾಮೂಹಿಕವಾಗಿ ನಿರ್ವಹಿಸಬೇಕಾದುದು ಎಷ್ಟು ಹತ್ವಪೂರ್ಣ ಎಂಬುದು ಪ್ರವಾದಿ ಮುಹಮ್ಮದ್(ಸ)ರ ಒಂದು ವಚನದಿಂದ ಸ್ಪಷ್ಟವಾಗುತ್ತದೆ. ಮ್ಮೆ ಪ್ರವಾದಿವರ್ಯರು(ಸ) ವಿನಾಕಾರಣ ಸಾಮೂಹಿಕ ನಮಾಝಿಗೆ ಹಾಜರಾಗದೆ ವವರ ಕುರಿತು ಹೀಗೆಂದರು: 'ನಮಾಝ್‌ನ ನಾಯಕತ್ವ ವಹಿಸಲು ನನ್ನ ಸ್ಥಳದಲ್ಲಿ ಬೇರೆ ರನ್ನಾದರೂ ನೇಮಿಸಿ ಅನಂತರ, ಸಾಮೂಹಿಕ ನಮಾಝ್‌ಗೆ ಹಾಜರಾಗದೆ ಇರುವ ರು ಇರುವಲ್ಲಿಗೆ ಹೋಗಿ ಕಟ್ಟಿಗೆಯನ್ನು ರಾಶಿ ಹಾಕಿ ಅವರನ್ನು ಅವರ ಮನೆಗಳ ಸಮೇತ ಟ್ಟು ಹಾಕಲು ಆದೇಶಿಸಬೇಕೆಂದು ನನಗನಿಸುತ್ತದೆ!' (ಮುಸ್ಲಿಮ್: ಭಾಗ - 1)

ಇದು ಕರುಣೆ ಅನುಕಂಪಗಳ ಸಾಕಾರ ಮೂರ್ತಿಯಾಗಿದ್ದ ಲೋಕಾನುಗ್ರಹಿ ಪ್ರವಾದಿ(ಸ) ರ ಮಾತು. ಅವರು(ಸ) ಇಷ್ಟು ಉಗ್ರವಾದ ಮಾತನ್ನು ಹೇಳಬೇಕಿದ್ದರೆ, ನಮಾಝುನ್ನು ಮೂಹಿಕವಾಗಿ ನಿರ್ವಹಿಸದೆ ಇರುವುದು ಸಾಮಾನ್ಯ ತಪ್ಪಾಗಿರದೆ ಒಂದು ಗಂಭೀರ ರಾಧವಾಗಿದೆ ಎಂಬುದು ಸ್ಪಷ್ಟ.

(ಇ) ನಮಾಝುನ್ನು ಎಲ್ಲರೂ ಒಟ್ಟುಗೂಡಿ ಸಾಮೂಹಿಕವಾಗಿ ನಿರ್ವಹಿಸಬೇಕು ನ್ನವಾಗ, ಜನರೆಲ್ಲಾ ತಮ್ಮ ತಮ್ಮ ಮನೆಗಳಿಂದ ಹೊರಟು ಒಂದೆಡೆ ಸೇರಿ ಅಲ್ಲಿ ಪ್ರತ್ಯ ಕ್ಯೇಕವಾಗಿ ನಮಾಝ್ ನಿರ್ವಹಿಸಿದರೂ ಸಾಲದು ಎಂಬುದು ಗಮನಾರ್ಹ. ನಿಯಮ ನಾರ ಎಲ್ಲರೂ ಸಾಲುಗಟ್ಟಿ, ಭುಜಕ್ಕೆ ಭುಜ ತಾಗಿಸಿ ನಿಲ್ಲಬೇಕು ಮತ್ತು ಸಾಲು ಬಾಣದಷ್ಟು ರವಾಗಿರಬೇಕು. (ನೋಡಿರಿ: ಬುಖಾರಿ ಭಾಗ -1)

ಅನಂತರ ಅವರ ಪೈಕಿ ಅರ್ಹನಾದ ಒಬ್ಬ ವ್ಯಕ್ತಿ ಅವರ ಇಮಾಮತ್ (ನಾಯಕತ್ವ) ಸಬೇಕು. ಆತ ಅವರೆಲ್ಲರ ಮುಂದೆ ನಿಲ್ಲಬೇಕು. ಉಳಿದೆಲ್ಲರೂ ಅವನನ್ನು ಅನುಸರಿಸುತ್ತಾ ಮಾಝ್ ಮಾಡಬೇಕು. ಈ ಅನುಸರಣೆಯೂ ಎಷ್ಟೊಂದು ಸಂಪೂರ್ಣವಾಗಿರಬೇಕೆಂದರೆ ದೆ ನಿಂತ ಪ್ರತಿಯೊಬ್ಬರ ಪ್ರತಿಯೊಂದು ಚಲನೆಯೂ ಇಮಾಮ್‌ನ (ನಾಯಕನ) ಟುವಟಿಕೆಗಳ ಅಧೀನವಾಗಿರಬೇಕು. ಇಮಾಮ್ ನಿಂತಿರುವಾಗ ಮುಕ್ತದೀ (ನಮಾಝ್‌ನಲ್ಲಿ ಮಾಮ್‌ನ ಹಿಂದೆ ನಿಲ್ಲುವ ಅನುಯಾಯಿ)ಗಳೆಲ್ಲರೂ ನಿಂತಿರಬೇಕು. ಆತನು ಬಾಗುವಾಗ

ಉಳಿದೆಲ್ಲರೂ ಬಾಗಬೇಕು. ಆತನು ಸಾಷ್ಟಾಂಗವೆರಗುವಾಗ ಎಲ್ಲರೂ ಸಾಷ್ಟಾಂಗವೆರಗಬೇ
ಆತ ಕುರ್‌ಆನ್ ಪಠಿಸುವಾಗ ಅದನ್ನು ಮೌನವಾಗಿ ಬಹಳ ಏಕಾಗ್ರತೆಯಿಂದ ಆಲಿಸಬೇ
ಒಂದು-ವೇಳೆ ಮರೆವಿನಿಂದಾಗಿ ಇಮಾಮ್‌ನಿಂದ ಏನಾದರೂ ತಪ್ಪು ಸಂಭವಿಸಿದರೂ ಆ
ಅನುಸರಣೆಯಿಂದ ವಿಮುಖರಾಗಲು ಅನುಯಾಯಿಗಳಿಗೆ ಅವಕಾಶವಿರುವುದಿಲ್ಲ, ಇ
ಸಂದರ್ಭದಲ್ಲಿ ಅವರು 'ಸುಬ್‌ಹಾನಲ್ಲಾಹ್' (ಅಲ್ಲಾಹನು ಮಾತ್ರ ಪವಿತ್ರ ನಿಷ್ಕಳಂಕ) ಎಂ
ಹೇಳುವ ಮೂಲಕ ಆತನನ್ನು ಅವನ ತಪ್ಪಿನ ಬಗ್ಗೆ ಎಚ್ಚರಿಸಬಹುದು ಅಷ್ಟೆ.

ಈ ಎರಡು ವಿಷಯಗಳು ಅಂದರೆ, ಪಂಕ್ತಿಬದ್ಧತೆ ಮತ್ತು ಇಮಾಮ್‌ನ ಅನುಸ
ನಮಾಝ್‌ನಲ್ಲಿ ಕೇವಲ ಉಪನಿಯಮಗಳ ರೂಪದಲ್ಲಿ ಇರುವುದಲ್ಲ, ಅವು ಸಾಮೂ
ನಮಾಝ್‌ನ ಕಡ್ಡಾಯ ವಿಧಿಗಳಾಗಿವೆ. ಇವುಗಳ ಪಾಲನೆಯಲ್ಲಿ ತೋರಿಸಲಾಗ
ನಿರ್ಲಕ್ಷ್ಯವು ನಮಾಝನ್ನೇ ದುರ್ಬಲಗೊಳಿಸುತ್ತದೆ. ಮಾತ್ರವಲ್ಲ, ನಿಷ್ಫಲಗೊಳಿಸುತ್ತ
ಹಾಗೆಯೇ ಇಂತಹ ನಿರ್ಲಕ್ಷ್ಯದಿಂದ ಮನುಷ್ಯನ ಪರಲೋಕ ಜೀವನ ಮಾತ್ರವಲ್ಲ, ಅವನ
ಜೀವನವೂ ತೀವ್ರ ಆಘಾತಕ್ಕೆ ಒಳಗಾಗುತ್ತದೆ. ಒಮ್ಮೆ ನಮಾಝ್‌ಗೆ ನಿಂತಿದ್ದಾಗ ಒಬ್ಬ ವ್ಯಕ್ತಿ
ಎದೆ ಪಂಕ್ತಿಯಲ್ಲಿ ನಿಂತಿದ್ದ ಇತರರಿಗಿಂತ ಮುಂದೆ ಚಾಚಿಕೊಂಡಿದ್ದು ಇದನ್ನು ಕಂಡ ಪ್ರವಾದಿ
ಹೀಗೆ ಎಚ್ಚರಿಸಿದರು;

ಅಲ್ಲಾಹನ ದಾಸರೇ! ನಿಮ್ಮ ಸಾಲುಗಳನ್ನು ಸರಿಯಾಗಿ, ನೇರವಾಗಿ ಇಟ್ಟುಕೊ
ಇಲ್ಲವಾದರೆ ಅಲ್ಲಾಹನು ನಿಮ್ಮನ್ನು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ನಿಲ್ಲಿಸಬಹುದು.

(ಮುಸ್ಲಿಮ್: ಭಾಗ –

ಇನ್ನೊಂದು ಸಂದರ್ಭದಲ್ಲಿ ಪ್ರವಾದಿ ಮುಹಮ್ಮದ್(ಸ) ಹೇಳಿದರು: ನಮಾಝ
ಯಾವುದೇ ಪಂಕ್ತಿಯನ್ನು ಜೋಡಿಸುವವನನ್ನು ಅಲ್ಲಾಹನು ಜೋಡಿಸುವನು. ಪಂಕ್ತಿಯ
ಮುರಿಯುವವನನ್ನು ಅಲ್ಲಾಹನು ಮುರಿದುಬಿಡುವನು. (ಅಬೂದಾವೂದ್: ಭಾಗ– 1)

ಇದೇ ರೀತಿ ಇಮಾಮ್‌ನನ್ನು ಅನುಸರಿಸುವ ಕುರಿತು ಪ್ರವಾದಿ(ಸ) ಹೀಗೆ ಹೇಳಿರುವ

ನಿಮ್ಮ ಪೈಕಿ (ನಮಾಝ್‌ನಲ್ಲಿ) ಇಮಾಮ್‌ಗಿಂತ ಮುಂಚೆಯೇ (ರುಕೂಅ್‌ನಿಂದ)
ಎತ್ತುವವನ ತಲೆಯನ್ನು ಅಲ್ಲಾಹನು ಕತ್ತೆಯ ತಲೆಯಾಗಿ ಮಾರ್ಪಡಿಸಬಹುದೆಂಬ ಭ
ಇರುವುದಿಲ್ಲವೇ? (ಮುಸ್ಲಿಮ್: ಭಾಗ – 1)

(ಈ) ನಮಾಝನ್ನು ಸಾಮೂಹಿಕವಾಗಿ ಒಬ್ಬ ಇಮಾಮ್‌ನ ನೇತೃತ್ವ
ನಿರ್ವಹಿಸಬೇಕೆಂಬ ಈ ಸಾರ್ವತ್ರಿಕ ಆದೇಶ ಪ್ರತಿಯೊಂದು ಬಡಾವಣೆ ಅಥವಾ ಕೇರಿ
ಅನ್ವಯಿಸುವಂತಹ ಸ್ವರೂಪದ್ದಾಗಿದೆ. ಅಂದರೆ ಒಂದು ಊರಿನ ಪ್ರತಿಯೊಂದು ಕೇರಿಯ
ಜನರು ಐದು ಹೊತ್ತಿನ ನಮಾಝ್‌ಗಳನ್ನು ತಮ್ಮ ವಠಾರದ ಮಸೀದಿಯಲ್ಲಿ ಸಾಮೂಹಿಕವ
ನಿರ್ವಹಿಸಬೇಕು. ಈ ವಿಷಯದಲ್ಲಿ ಶರೀಅತ್ ಇಷ್ಟಕ್ಕೇ ತೃಪ್ತಿಪಡದೆ ಮುಂದುವರಿಯುತ್ತ
ವಾರಕ್ಕೊಮ್ಮೆ ಊರಿನ ಎಲ್ಲ ಮಂದಿಯೂ ಒಂದೇ ಮಸೀದಿಯಲ್ಲಿ ಸೇರಿ, ಎಲ್ಲರೂ

ಾಮ್‌ನ ನೇತೃತ್ವದಲ್ಲಿ ಒಟ್ಟಾಗಿ ತಮ್ಮ ಒಡೆಯನ ಮುಂದೆ ತಲೆಬಾಗಬೇಕು ಎಂದು ಅದು ಚಿಸುತ್ತದೆ. ಜುಮಾ ಅಥವಾ ಶುಕ್ರವಾರದ ಈ ನಮಾಝ್‌ನ ಮಹತ್ವದ ಕುರಿತು ಪವಿತ್ರ ್‌ಆನ್‌ನ ಜುಮಾ ಅಧ್ಯಾಯದಲ್ಲಿ ಸಾಕಷ್ಟು ಒತ್ತುಕೊಟ್ಟು ಹೇಳಲಾಗಿದೆ. ಅದರ ಪ್ರಕಾರ ಸ್ಲಿಮ್ ಸಮುದಾಯವು ತನ್ನ ವಿಚಾರ ಮತ್ತು ಆಚಾರಗಳನ್ನು ಅದರ ಮೂಲ ಸ್ವರೂಪದಲ್ಲಿ ಸಿಕೊಂಡಿರುವ ತನಕ ಮಾತ್ರ ಅದಕ್ಕೆ ತನ್ನ ನೈಜ ಕರ್ತವ್ಯವನ್ನು ಈಡೇರಿಸಲು ಸಾಧ್ಯ. ್ನ ಆ ಆಚಾರ ವಿಚಾರಗಳು ತಮ್ಮ ಮೂಲ ಸ್ವರೂಪದಲ್ಲಿ ಉಳಿಸಿಕೊಳ್ಳುವವೋ ಇಲ್ಲವೋ ುದು ಕೆಲವು ಅಂಶಗಳನ್ನು ಅವಲಂಬಿಸಿದೆ. ಅಂಥ ಅಂಶಗಳಲ್ಲಿ ಜುಮಾ ನಮಾಝ್‌ನ ರ್ನೆಯೂ ಒಂದು. ಒಂದು ವೇಳೆ ಮುಸಲ್ಮಾನರು ಈ ಜುಮಾ ನಮಾಝ್‌ನ ವಿಷಯದಲ್ಲಿ ೇಕ್ಷಿತ ಶಿಸ್ತನ್ನು ತೋರದೆ ಇದನ್ನು ನಿರ್ಲಕ್ಷಿಸಿದರೆ ಅವರು ಕೂಡಾ ದಿವ್ಯ ಕಾನೂನಿನ ಪ್ರಕಾರ ಈ ಿನ ಜನಾಂಗಗಳು (ವಿಶೇಷತಃ ಯಹೂದ್ಯರು) ಕಂಡಂತಹ ಅಪಮಾನಾತ್ಮಕ ವಿನಾಶವನ್ನೇ ಬಹುದು.

ಪ್ರವಾದಿ ಮುಹಮ್ಮದ್(ಸ) ಅವರು ಈ ಕುರಿತು ಇಂತಹದೇ ಎಚ್ಚರಿಕೆಯನ್ನು ಟ್ಟಿರುವರು. ಜುಮಾಆ ನಮಾಝನ್ನು ಬಿಟ್ಟುಬಿಡುವ ಪಾಪವನ್ನು ಜನರು ತೊರೆಯಬೇಕು. ವಾದರೆ ಅಲ್ಲಾಹನು ಖಂಡಿತವಾಗಿಯೂ ಅವರ ಮನಸ್ಸುಗಳನ್ನು ಮುದ್ರೆಯೊತ್ತಿದಂತೆ ಚ್ಚಿಬಿಡುವನು ಮತ್ತು ಅವರು ಸತ್ಯ ಧರ್ಮದ ಬಗ್ಗೆ ಅಸಡ್ಡೆಗೊಳಗಾಗುವರು.

(ಮುಸ್ಲಿಮ್: ಭಾಗ – 1)

(ಉ) ನಮಾಝ್‌ನಲ್ಲಿ ಪಠಿಸಬೇಕೆಂದು ಆದೇಶಿಸಲಾಗಿರುವ ಹೆಚ್ಚಿನೆಲ್ಲಾ ವಚನಗಳು, ರ್ಥನೆಗಳು ಮತ್ತು ಸ್ತುತಿಗಳು ಬಹುವಚನದಲ್ಲಿವೆ. ಉದಾ: 'ಇಯ್ಯಾಕ ನಅ್‌ಬುದು' ರ್ಥಾತ್ 'ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ.' 'ಇಯ್ಯಾಕ ನಸ್ತಈನ್' ಅರ್ಥಾತ್ 'ನಾವು ಿದ ಮಾತ್ರ ಸಹಾಯ ಯಾಚಿಸುತ್ತೇವೆ'. 'ಇಹ್ದಿನಸ್ಸಿರಾತಲ್ ಮುಸ್ತಕೀಮ್' ಅರ್ಥಾತ್ ಮ್ಮನ್ನು ಸನ್ಮಾರ್ಗದಲ್ಲಿ ನಡೆಸು..' 'ರಬ್ಬನಾ ಲಕಲ್‌ಹಮ್ದು' ಅರ್ಥಾತ್ 'ನಮ್ಮ ಒಡೆಯನೇ! ಗಳೆಲ್ಲವೂ ನಿನಗೇ ಮೀಸಲು.' 'ಅಸ್ಸಲಾಮು ಅಲೈನಾ ವ ಅಲಾ ಇಬಾದಿಲ್ಲಾಹಿಸ್ಸಾಲಿಹೀನ್' ರ್ಥಾತ್ 'ಶಾಂತಿ ಇರಲಿ ನಮ್ಮೆಲ್ಲರ ಮೇಲೆ ಮತ್ತು ಅಲ್ಲಾಹನ ಎಲ್ಲ ಸಜ್ಜನ ದಾಸರ ಲೆ' ಇತ್ಯಾದಿ.

ನಮಾಝ್ ಸಲ್ಲಿಸುವಾಗ ಜನರು ಬಾಹ್ಯವಾಗಿ ಒಗ್ಗಟ್ಟಿನಿಂದ ಪಂಕ್ತಿಬದ್ಧರಾಗಿ ನಿಲ್ಲ ಂಬ ಆದೇಶ ಇರುವಂತೆಯೇ ಅವರು ಮಾನಸಿಕವಾಗಿಯೂ ಪರಸ್ಪರ ಏಕತೆ ಮತ್ತು ಯತೆಯ ಭಾವನೆಯನ್ನು ಹೊಂದಿರಬೇಕೆಂಬ ಆದೇಶ ಇರುವುದು ಇಲ್ಲಿ ಸ್ಪಷ್ಟವಾಗಿ ಸುತ್ತದೆ.

ಇವೆಲ್ಲವೂ ನಮಾಝ್‌ನ ಪ್ರಧಾನ ಅಂಶಗಳಾಗಿದ್ದು, ಇವುಗಳನ್ನೆಲ್ಲಾ ಬಿಟ್ಟರೆ ನಮಾಝ್ ರ್ಣಗೊಳ್ಳುವುದಿಲ್ಲ. ಇವೆಲ್ಲಾ ಸಾಮೂಹಿಕ ಶಿಷ್ಟಾಚಾರಗಳೆಂದು ಮೊದಲ ನೋಟದಲ್ಲೇ

ಸ್ಪಷ್ಟವಾಗುತ್ತದೆ. ನಮಾಝನ್ನು ಸಾಮೂಹಿಕ ಪ್ರಜ್ಞೆ ಮತ್ತು ಶಿಸ್ತುಬದ್ಧತೆಯನ್ನು ಬೆಳೆ
ಉಪಾಧಿಯಾಗಿ ಮಾಡಬೇಕು. ಒಬ್ಬ ಮುಸಲ್ಮಾನನು ಸ್ವತಃ ತನ್ನ ಅಸ್ತಿತ್ವವನ್ನು ಮರೆತು
ಏಕಾಗ್ರತೆಯಿಂದ ಅಲ್ಲಾಹನೆಡೆಗೆ ಗಮನಹರಿಸುತ್ತಿರುವ ಸಂದರ್ಭದಲ್ಲೂ ತಾನು ಒ
ಸಮೂಹದ ಅಂಗವೆಂಬ ವಾಸ್ತವಿಕತೆಯನ್ನು ಮರೆಯಬಾರದು. ಸಾನ್ನಿಧ್ಯದ ಈ ಅತಿ ವಿ
ಕ್ಷಣಗಳಲ್ಲೂ, ಅವನು ತನ್ನ ಕರ್ತವ್ಯ, ಜೀವನೋದ್ದೇಶ ಮತ್ತು ತನ್ನ ಹಿತಾಸಕ್ತಿಗಳು
ಸತ್ಯವಿಶ್ವಾಸಿಗಳಿಗಿಂತ ಭಿನ್ನವಲ್ಲ ಮತ್ತು ತಾನು ಆ ಮಟ್ಟದಲ್ಲೂ ಅವರ ಜೊತೆ ಸಂಬ
ವಿಲ್ಲದ ಪ್ರತ್ಯೇಕ ಅಸ್ತಿತ್ವವಲ್ಲ ಎಂಬ ಪ್ರಜ್ಞೆ ಹೊಂದಿರಬೇಕು. ಹಾಗೆಯೇ ಈ ಕ್ಷೇತ್ರದಲ್ಲೂ
ಪ್ರಸ್ತುತ ಕರ್ತವ್ಯಗಳ ಈಡೇರಿಕೆಯಲ್ಲಿ ಮತ್ತು ತನ್ನ ಅಗತ್ಯಗಳ ಪೂರೈಕೆಗಳಲ್ಲಿ ಇತರರ ಸಹ
ಅವಶ್ಯಕ ಎಂಬುದನ್ನು ಅವನು ಮರೆಯಬಾರದು ಎಂಬುದೇ ಈ ಶಿಷ್ಟಾಚಾರಗಳ ಹಿಂದಿ
ಪ್ರಧಾನ ಉದ್ದೇಶ.

ಇದೇ ರೀತಿ ಓರ್ವ ಮುಸಲ್ಮಾನನು ತನ್ನ ದುಆ ಅಥವಾ ಪ್ರಾರ್ಥನೆಗಳಲ್ಲೂ
ವ್ಯಕ್ತಿಗತ ಅನನ್ಯತೆಯು ಅಬಾಧಿತವಾಗಿ ಉಳಿದಿರುವ ಜೊತೆಗೇ ತಾನು ಒಂದು ಸಂಘ
ಸಮೂಹದ ಅವಿಭಾಜ್ಯ ಅಂಗವಾಗಿದ್ದೇನೆಂಬುದನ್ನು ಆಗಾಗ ಸಾರುತ್ತಾನೆ. ತನ್ನ ಗರಿಯೆ
ಒಬ್ಬನೇ ನಡೆಯಲು ಆತನೇನೂ ಪಾದಚಾರಿಯಲ್ಲ. ಆತನು ಸಾಮಾನ್ಯ ಸ್ಥಿತಿಯಲ್ಲಿ ಇ
ಸಹ ಪ್ರಯಾಣಿಕರ ಜೊತೆಗೂಡಿ ಪ್ರಯಾಣಿಸಿ ಅವರ ಜೊತೆಗೇ ದಡ ಸೇರುವ ಹ
ಪ್ರಯಾಣಿಕನಾಗಿರುತ್ತಾನೆ!

ಈಗ ನಮಾಝ್‌ನ ಈ ಎಲ್ಲ ಸಾಮೂಹಿಕ ಶಿಷ್ಟಾಚಾರಗಳನ್ನು ಮತ್ತು ಅ
ಹಿಂದಿರುವ ಉದ್ದೇಶವನ್ನು ಗಮನದಲ್ಲಿಟ್ಟು ಈ ಆರಾಧನೆಯಲ್ಲಿ ಸಾಮೂಹಿಕತೆಯ ಚೈತ
ಎಷ್ಟೊಂದು ಆಳವಾಗಿ ಬೇರೂರಿಕೊಂಡಿದೆ ಮತ್ತು ಇಲ್ಲಿ ಸಾಮೂಹಿಕತೆಯು ಎಂತಹ
ಸ್ಥಾನ ಪಡೆದಿದೆ ಎಂಬುದನ್ನು ಊಹಿಸಿ. ಆದರೆ ನೀವು ನಮಾಝ್‌ನ ಮೂಲ ಉ
ಏನೆಂಬುದನ್ನು ಸರಿಯಾಗಿ ತಿಳಿಯುವ ತನಕ ಈ ವಿಷಯವನ್ನು ಪೂರ್ಣವಾಗಿ ಗ್ರಹಿ
ನಿಮಗೆ ಸಾಧ್ಯವಾಗದು.

ಅಲ್ಲಾಹನ ಸನ್ನಿಧಿಯಲ್ಲಿ ಹಾಜರಿ ಮತ್ತು ಅವನ ಸ್ಮರಣೆಯೇ ನಮಾಝ್‌ನ ಮ
ಉದ್ದೇಶವಾಗಿದೆ. ಸ್ಮರಣೆಯಲ್ಲಿ, ವಿನಯಪೂರ್ವಕವಾಗಿ ಮನವನ್ನು ಅರ್ಪಿಸುವುದೇ ಮ
ಇವು ಎಲ್ಲರಿಗೆ ತಿಳಿದಿರುವ ವಿಚಾರಗಳು. ನಮಾಝ್‌ನ ಈ ಉದ್ದೇಶವನ್ನು ಈಡೇರಿಸಲು
ಸಮರ್ಪಕವಾದ ಸ್ಥಳ ಯಾವುದು? ಏಕಾಂತವೋ ಅಥವಾ ಸಾರ್ವಜನಿಕವೋ? ದೇವ ಸ್ಮ
ಅಗತ್ಯವಿರುವುದು ಏಕಾಂತದ ನಿಶ್ಶಬ್ದವೋ ಅಥವಾ ಜನಜಂಗುಳಿಯ ಗದ್ದಲವೋ? ಮನ
ದೇವಭಕ್ತಿ ಹೆಚ್ಚು ಸುಲಭವಾಗಿ ಮೂಡುವುದು ನಿರ್ಜನ ವಾತಾವರಣದಲ್ಲೋ ಅ
ಜನಸ್ತೋಮವಿರುವಲ್ಲೋ? ಖಂಡಿತವಾಗಿ, ನೀವು ಈ ಪ್ರಶ್ನೆಗಳಿಗೆ ಉತ್ತರವಾಗಿ, ದೇವಸ್ಮ

ನಸ್ಸಿನ ಸಂಪೂರ್ಣ ಏಕಾಗ್ರತೆ ಅಗತ್ಯವೆಂದೂ ಅಂಥ ಏಕಾಗ್ರತೆ ಏಕಾಂತದಲ್ಲಿ ಮತ್ತು ನಿಶ್ಶಬ್ದ
ತಾವರಣದಲ್ಲಿ ಮಾತ್ರ ಸಿಗಬಲ್ಲುದೆಂದೂ ಉತ್ತರಿಸುವಿರಿ.

ಒಂದೆಡೆ ನಮಾಝ್‌ನ ಪ್ರಸ್ತುತ ಮೂಲ ಉದ್ದೇಶ ಮತ್ತು ಆ ಉದ್ದೇಶ ಸಾಧನೆಗೆ
ುವ ಈ ಸುಲಭವಾದ ಮಾರ್ಗವನ್ನು ಗಮನಿಸಿ. ಇನ್ನೊಂದೆಡೆ ಕಡ್ಡಾಯ ನಮಾಝ್
ನ್ನು ಸಾಮೂಹಿಕವಾಗಿಯೇ ನಿರ್ವಹಿಸಬೇಕು. ವಿನಾಕಾರಣ ಅವುಗಳನ್ನು ಒಬ್ಬಂಟಿಯಾಗಿ
ರ್ವಹಿಸುವುದು ಅಕ್ಷಮ್ಯ ತಪ್ಪು. ಸಾಮೂಹಿಕವೆಂದರೆ ಕೇವಲ ನಾಮ ಮಾತ್ರ
ಮೂಹಿಕತೆಯಲ್ಲ, ಬಹಳ ಕಟ್ಟುನಿಟ್ಟಾದ, ಶಿಸ್ತುಬದ್ಧ ಸಾಮೂಹಿಕತೆ ಸಾಲಾಗಿ ನಿಲ್ಲಬೇಕು.
ಲುಗಳು ಬಾಣದಂತೆ ನೇರವಾಗಿರಬೇಕು. ಜನರು ಒಬ್ಬರಿಗೊಬ್ಬರು ಅಂಟಿಕೊಂಡು ಬಹಳ
ಟವಾಗಿ ನಿಲ್ಲಬೇಕು. ಒಬ್ಬನು ನಾಯಕತ್ವ ವಹಿಸಿ ಉಳಿದವರು ಅವನನ್ನು ಅನುಸರಿಸಬೇಕು.
ನ ಸೂಚನೆಯಂತೆ ಎಲ್ಲರೂ ಏಕಕಾಲದಲ್ಲಿ ನಿಲ್ಲಬೇಕು, ಬಾಗಬೇಕು, ಸಾಷ್ಟಾಂಗವೆರಗಬೇಕು,
ತುಕೊಳ್ಳಬೇಕು ಮತ್ತು ಎಲ್ಲರೂ ಏಕಕಾಲದಲ್ಲಿ ನಮಾಝನ್ನು ಮುಗಿಸಬೇಕು ಎಂಬಿತ್ಯಾದಿ
ಅತ್‌ನ ಆದೇಶಗಳನ್ನು ಗಮನಿಸಿ.

ಬಾಹ್ಯ ನೋಟಕ್ಕೆ ಇದು ಬಹಳ ವಿಚಿತ್ರವಾಗಿ ತೋರುತ್ತದೆ. ನಮಾಝ್‌ನಂತಹ
ಧನೆಗೆ, ಮನುಷ್ಯನ ಏಕಾಗ್ರತೆ ಮತ್ತು ಆಂತರಿಕ ತನ್ಮಯತೆಗೆ ಆಗಾಗ ಭಂಗ ತರಬಹುದಾದ
ಂಧನೆಗಳನ್ನೊಡ್ಡಿರುವುದರ ಉದ್ದೇಶವಾದರೂ ಏನು? ನಮಾಝ್‌ನ ಮೂಲ ಉದ್ದೇಶಕ್ಕೆ
ಗ ತರಬಲ್ಲಂತಹ ಈ ಅಂಶಗಳನ್ನು ನಮಾಝ್‌ನಲ್ಲಿ ಕೇವಲ ಅನುಮತಿ ಸಿರುವುದು
ತ್ರವಲ್ಲ, ಅದನ್ನು ಕಡ್ಡಾಯಗೊಳಿಸಲಾಗಿರುವುದೇಕೆ? ಈ ಕುರಿತು ಚಿಂತಿಸುವಾಗ
ಗೆ ಒಂದು ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಅದೇನೆಂದರೆ ಇಸ್ಲಾಮೀ ಶರೀಅತ್‌ನ
ುಯಲ್ಲಿ ಮುಸಲ್ಮಾನರ ಸಾಮೂಹಿಕ ಪ್ರಜ್ಞೆಯನ್ನು ಜಾಗೃತವಾಗಿ ಸುಸ್ಥಿತಿಯಲ್ಲಿಡುವುದಕ್ಕೆ
ಷ ಮಹತ್ವವಿದ್ದು, ಈ ಉದ್ದೇಶಕ್ಕಾಗಿ ಅದು ನಮಾಝ್‌ನ ಮೂಲ ಉದ್ದೇಶಕ್ಕೆ ಭಂಗ
ಟಾಗಬಹುದಾದ ಪ್ರಾಯೋಗಿಕ ಸಾಧ್ಯತೆಗಳನ್ನೂ ಕಡೆಗಣಿಸಿದೆ.[10] ಹಾಗೆಯೇ ಮುಸ್ಲಿಮ್

---

ಒಂದು ವೇಳೆ ಒಬ್ಬ ವ್ಯಕ್ತಿಗೆ ಏಕಾಂತದಲ್ಲಿ ಒಬ್ಬಂಟಿಯಾಗಿ ನಮಾಝ್ ನಿರ್ವಹಿಸುವಾಗ
ಕ್ಷಿತ ಏಕಾಗ್ರತೆ ಪ್ರಾಪ್ತವಾಗುತ್ತಿದ್ದು, ಜಮಾಅತ್‌ನೊಂದಿಗೆ ನಮಾಝ್ ನಿರ್ವಹಿಸುವಾಗ ಅವನ
ೋಚನೆ ಅತ್ತಿತ್ತ ಹರಿದು ಹೋಗಿ ಅವನ ತಲ್ಲೀನತೆಗೆ ಭಂಗವಾಗುತ್ತದಾದರೆ ಆಗಲೂ ಅವನು
ಾಅತ್ ಜೊತೆಗೇ ನಮಾಝ್ ನಿರ್ವಹಿಸಬೇಕು. ಆ ಸ್ಥಿತಿಯಲ್ಲೂ ಅವನ ಮಟ್ಟಿಗೆ ಕಡ್ಡಾಯ
ಾಝನ್ನು ಏಕಾಂತದಲ್ಲಿ ನಿರ್ವಹಿಸುವುದು ತಪ್ಪು. ಈ ಕುರಿತು ಎಲ್ಲ ವಿದ್ವಾಂಸರು ಒಮ್ಮತಾಭಿಪ್ರಾಯ
ಟಿಸಿದ್ದಾರೆ. ಇಮಾಮ್ ಗಝ್ಝಾಲಿ ಅವರು ಮಾತ್ರ ಈ ಬಗ್ಗೆ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದ್ದರು.
ು ನಮಾಝ್‌ನಲ್ಲಿ ಜಮಾಅತ್‌ಗಿಂತ ಭಕ್ತಿ ಮತ್ತು ಏಕಾಗ್ರತೆಗೇ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವರು.
ೆ ಅವರ ಈ ಅಭಿಪ್ರಾಯಕ್ಕೆ ಯಾರೂ ಹೆಚ್ಚಿನ ಮಹತ್ವ ಕೊಟ್ಟಿಲ್ಲ.

ಸಮುದಾಯದಲ್ಲಿ ಶಿಸ್ತುಬದ್ಧ ಸಾಮೂಹಿಕತೆಯ ಪ್ರಜ್ಞೆಯನ್ನು ಜೀವಂತವಿರಿಸುವುದು ವಸ್ತು
ನಮಾಝ್‌ನ ಉದ್ದೇಶಗಳಲ್ಲಿ ಒಂದಾಗಿದೆ ಎಂಬುದಕ್ಕೂ ಇದೊಂದು ಸ್ಪಷ್ಟ ಪುರಾವೆಯಾಗಿದ

## (ಆ) ಝಕಾತ್‌ನಲ್ಲಿ ಸಾಮೂಹಿಕತೆ

ನಮಾಝ್‌ನ ಬಳಿಕ ಅತಿ ಹೆಚ್ಚು ಪ್ರಾಮುಖ್ಯತೆ ಇರುವ ಕಡ್ಡಾಯ ಕರ್ಮವೆಂ
ಝಕಾತ್. ಒಬ್ಬ ಮುಸ್ಲಿಮೇತರನು ಇಸ್ಲಾಮ್ ಧರ್ಮದ ವ್ಯಾಪ್ತಿಯೊಳಗೆ ಬಂದಿರುವನೆ

---

11. ಈ ಸಂದರ್ಭದಲ್ಲಿ ಇನ್ನೊಂದು ಅಂಶವು ಬಹಳ ಗಮನಾರ್ಹವಾಗಿದೆ. ಕಡ್ಡಾಯ ನಮಾಝ್‌ಗಳ
ಸಾಮೂಹಿಕವಾಗಿ ನಿರ್ವಹಿಸುವುದರಿಂದ ನಮಾಝ್‌ನ ಮೂಲೋದ್ದೇಶವಾಗಿರುವ ದೇವಸ್ಮರ
ಭಂಗ ಉಂಟಾಗುವ ಸಾಧ್ಯತೆಗಳಿಗೆ ಶರೀಅತ್ ಪರಿಹಾರ ಸೂಚಿಸದೆ ಬಿಟ್ಟಿಲ್ಲ. ಒಂದೆಡೆ ಕಡ್ಡಾ
ನಮಾಝ್‌ಗಳನ್ನು ಕಟ್ಟುನಿಟ್ಟಾದ ಸಂಘಟನಾ ನಿಯಮಗಳೊಂದಿಗೆ ನಿರ್ವಹಿಸಲು ಆದೇಶಿಸಿ
ಶರೀಅತ್, ಇನ್ನೊಂದೆಡೆ ಇತರ ನಮಾಝ್‌ಗಳನ್ನು ಮಸೀದಿಯ ಬದಲು ತಮ್ಮ ತಮ್ಮ ಮನೆಗಳ
ನಿರ್ವಹಿಸಲು ಪ್ರೋತ್ಸಾಹಿಸುತ್ತದೆ. ಪ್ರವಾದಿ ಮುಹಮ್ಮದ್(ಸ) ಈ ಕುರಿತು ಹೀಗೆ ಹೇಳಿರುವರು.

ಜನರೇ! ನಮಾಝ್‌ಗಳನ್ನು ನಿಮ್ಮ ಮನೆಗಳಲ್ಲೇ ನಿರ್ವಹಿಸಿ. ಮನುಷ್ಯನು ತನ್ನ ತನ್ನ ಮನೆಯ
ನಿರ್ವಹಿಸುವ ನಮಾಝೇ ಅವನ ಅತ್ಯುತ್ತಮ ನಮಾಝ್ ಆಗಿರುತ್ತದೆ ಕಡ್ಡಾಯ ನಮಾ
ಗಳ ಹೊರತು. (ಬುಖಾರಿ ಸಂಪುಟ- 1)

ಪ್ರವಾದಿ ಮುಹಮ್ಮದ್(ಸ) ಅವರು ಸ್ವತಃ ಹಾಗೆಯೇ ಮಾಡುತ್ತಿದ್ದು. ಅವರು ಕಡ್ಡಾ
ನಮಾಝ್‌ಗಳನ್ನು ಮಸೀದಿಯಲ್ಲಿ ನಿರ್ವಹಿಸಿ ಸುನ್ನತ್ ಮತ್ತು ನಫಿಲ್ (ಐಚ್ಛಿಕ) ನಮಾಝ್‌ಗಳ
ಸಾಮಾನ್ಯವಾಗಿ ತಮ್ಮ ಮನೆಯಲ್ಲೇ ನಿರ್ವಹಿಸುತ್ತಿದ್ದರು. ಮನೆಗಳಲ್ಲಿ ಏಕಾಂತದಲ್ಲಿ ತದೇಕಚಿತ್ತದ
ನಮಾಝ್ ನಿರ್ವಹಿಸಲು ಸಾಧ್ಯವಿದ್ದು ನಮಾಝ್‌ನ ನಿಜವಾದ ಇಂಗಿತ ಈಡೇರಲು ಮನೆ
ಪ್ರಶಸ್ತ ಸ್ಥಳವೆಂಬುದೇ ಪ್ರವಾದಿ(ಸ) ಅವರ ಪ್ರಸ್ತುತ ವಚನ ಮತ್ತು ಅವರ ಪ್ರಾಯೋಗಿಕ ಕ್ರ
ಉದ್ದೇಶ. ಈ ರೀತಿ ಕಡ್ಡಾಯ ನಮಾಝ್‌ಗಳನ್ನು ಸಾಮೂಹಿಕವಾಗಿ ನಿರ್ವಹಿಸುವುದರಿಂದ ಭಕ್ತಿ ವ
ಏಕಾಗ್ರತೆಯಲ್ಲಿ ಉಂಟಾಗಬಹುದಾದ ಕೊರತೆಯನ್ನು ನಫಿಲ್ ನಮಾಝ್‌ಗಳು ತುಂಬುತ್ತವೆ.

ನಮಾಝನ್ನು ಸೂಕ್ಷ್ಮವಾಗಿ ಅಭ್ಯಸಿದರೆ, ಅದು ಅಂತರಂಗದಲ್ಲೂ ಒಳಿತಿನ ಆಗರವಾ
ಅಂತರಂಗದಲ್ಲಿ ಅದು ದೇವ ಸಾನ್ನಿಧ್ಯವನ್ನು ಕೊಡುವ ಮಾಧ್ಯಮವಾಗಿದ್ದರೆ ಬಹಿರಂಗದಲ್ಲಿ ಅ
ಸಾಮೂಹಿಕ ಶಿಷ್ಟಾಚಾರಗಳನ್ನು, ಶಿಸ್ತು ಮತ್ತು ಸಂಘಟನೆಯ ಶ್ರೀಮಂತಿಕೆಯನ್ನು ಹೊಂದಿದೆ. ಇಂ
ಅನೇಕ ಮುಸ್ಲಿಮರು ನಮಾಝಿನ ಈ ಸಂಪನ್ನತೆಯ ಬಗ್ಗೆ ಅಜ್ಞರಾಗಿದ್ದಾರೆ, ಆದರೆ ಇಸ್ಲಾ
ಶತ್ರುಗಳು ಕೂಡಾ ಅದನ್ನು ಅರಿತಿದ್ದ ಒಂದು ಕಾಲವಿತ್ತು.

ರುಸ್ತುಮ್ (ಇರಾನ್‌ನ ಖ್ಯಾತ ದಂಡ ನಾಯಕ) ಯುದ್ಧರಂಗದಲ್ಲಿ ಮುಸ್ಲಿಮರು ಶಿಸ್ತುಬದ್ಧ
ನಮಾಝ್ ನಿರ್ವಹಿಸುವ ದೃಶ್ಯವನ್ನು ಕಂಡು ಈ ರೀತಿ ಗೊಣಗುತ್ತಿದ್ದನು. 'ಈ ಉಮರ್(ರ)
ಕರುಳನ್ನೇ ಕಿತ್ತು ಹಾಕುತ್ತಿದ್ದಾನೆ, ಅವನು ನಾಯಿಗಳಿಗೆ ಶಿಸ್ತು ಕಲಿಸುತ್ತಿದ್ದಾನೆ.'

(ಮುಕದ್ದಮಃ ಇಬ್ನು ಖಲ್ದೂನ್ ಪುಟ – 1

ಲ್ಲವೋ ಎಂಬುದನ್ನು ರಾಜಕೀಯವಾಗಿ ನಿರ್ಧರಿಸಲು ಇರುವ ಎರಡು ಮೂಲಭೂತ ಾನದಂಡಗಳ ಪೈಕಿ ಝಕಾತ್ ಕೂಡಾ ಒಂದು. ಈ ಕಡ್ಡಾಯ ಕರ್ಮದ ಕುರಿತು ಪ್ರವಾದಿ ುಹಮ್ಮದ್(ಸ) ಹೀಗೆ ಹೇಳಿರುವರು:

ಅಲ್ಲಾಹನು ಮುಸಲ್ಮಾನರ ಮೇಲೆ ಝಕಾತನ್ನು ಕಡ್ಡಾಯಗೊಳಿಸಿರುವನು. ಅದನ್ನು ವರ ಶ್ರೀಮಂತರಿಂದ ಸಂಗ್ರಹಿಸಿ ಬಡವರ ಮಧ್ಯೆ ವಿತರಿಸಲಾಗುತ್ತದೆ.

(ಮುಸ್ಲಿಮ್ ಭಾಗ- 1)

ಪ್ರವಾದಿವರ್ಯರ(ಸ) ಈ ವಚನದಿಂದ ಎರಡು ಮುಖ್ಯ ವಿಷಯಗಳು ತಿಳಿಯುತ್ತವೆ. ುದಲನೆಯದಾಗಿ ಈ ಪ್ರಾಮುಖ್ಯ ಆರಾಧನಾ ಕರ್ಮದ ಉದ್ದೇಶದ ಒಂದು ಮುಖ(ಹೊರ ುಖ)ವು ಇಸ್ಲಾಮೀ ಸಮಾಜದ ಆರ್ಥಿಕ ಹಿತಾಸಕ್ತಿಯ ಕಡೆಗಿದೆ. ಅಂದರೆ ಯಾವ ಉದ್ದೇಶಕ್ಕಾಗಿ ವನ್ನು ಕಡ್ಡಾಯಗೊಳಿಸಲಾಗಿದೆಯೋ ಅದರಲ್ಲಿ ಸಮುದಾಯದ ಬಡ ವ್ಯಕ್ತಿಗಳು ಆರ್ಥಿಕ ಂದರೆಗಳ ವಿರುದ್ಧ ತಮ್ಮ ಹೆಣಗಾಟದಲ್ಲಿ ಆಶ್ರಯ ರಹಿತರಾಗಿ ಉಳಿಯಬಾರದೆಂಬುದೂ ದು. ಎರಡನೆಯದಾಗಿ ಝಕಾತ್‌ನ ವಿಧಾನವೂ ಗಮನಾರ್ಹವಾಗಿದೆ. ಝಕಾತನ್ನು ುಸ್ಲಿಮ್ ಶ್ರೀಮಂತರಿಂದ ಸಂಗ್ರಹಿಸಿ ಮುಸ್ಲಿಮ್ ಬಡವರಿಗೆ ವಿತರಿಸುವ ವಿಧಾನವನ್ನು ುಚಯಿಸಲಾಗಿದೆಯೇ ಹೊರತು ಶ್ರೀಮಂತರು ಸ್ವತಃ ತಮ್ಮ ಝಕಾತನ್ನು ಬಡವರಿಗೆ ಕೊಡುವ ಾನವನ್ನಲ್ಲ. 'ಸಂಗ್ರಹಿಸುವ ಮತ್ತು ವಿತರಿಸುವ' ಕ್ರಿಯೆಯು ಒಂದು ಶಿಸ್ತುಬದ್ಧ ವ್ಯವಸ್ಥೆಯನ್ನು ುಸುತ್ತದೆ. ಆ ವ್ಯವಸ್ಥೆಯನ್ನು ಒಂದು ಸರಕಾರ ಮಾತ್ರವೇ ಒದಗಿಸಬಲ್ಲುದು. ಪವಿತ್ರ ಕುರ್ ್‌ನಲ್ಲಿ ಈ ಕುರಿತು ಸ್ಪಷ್ಟವಾಗಿ 'ವಲ್ ಆಮಿಲೀನ ಅಲೈಹಾ' (ಅದಕ್ಕಾಗಿ ನಿಯುಕ್ತರಾದ ುಕಾರಿಗಳು) ಎಂದು ಹೇಳಲಾಗಿದ್ದು ಇದರಿಂದ ಹಾಗೂ ಪ್ರವಾದಿ ಮುಹಮ್ಮದ್(ಸ) ತ್ತು ನಾಲ್ವರು ಖಲೀಫರ ಕಾಲದಲ್ಲಿ ಅನುಸರಿಸಲಾದ ನೀತಿಯನ್ನು ನೋಡಿದರೆ ಇದು ವಾಗುತ್ತದೆ.

ಹ. ಅಬೂಬಕರ್ ಸಿದ್ದೀಕ್(ರ) ಅವರ ಆಡಳಿತಾವಧಿಯಲ್ಲಿ ಕೆಲವರು ತಮ್ಮ ಝಕಾತನ್ನು ಕಾರಕ್ಕೆ ಒಪ್ಪಿಸಲು ನಿರಾಕರಿಸಿದಾಗ ಹ. ಅಬೂಬಕರ್(ರ) ಅವರು ಅಂಥವರ ವಿರುದ್ಧ ಖಡ್ಗ ದ್ದರಲ್ಲದೆ 'ಅಲ್ಲಾಹನಾಣೆ! ಪ್ರವಾದಿ(ಸ) ಅವರ ಕಾಲದಲ್ಲಿ ಝಕಾತ್‌ನ ರೂಪದಲ್ಲಿ ಅವರಿಗೆ ಸುತ್ತಿದ್ದ ಒಂಟೆಯನ್ನು ಕಟ್ಟುವ ಒಂದು ಹಗ್ಗವನ್ನಾದರೂ ನನಗೆ ಒಪ್ಪಿಸಲು ನಿರಾಕರಿಸಿದರೆ ು ಅಂಥವರ ವಿರುದ್ಧ ಯುದ್ಧ ಸಾರುತ್ತೇನೆ' ಎಂದು ಘೋಷಿಸಿದ್ದರು. (ಮುಸ್ಲಿಮ್ ಪುಟ- 1 ಕಿತಾಬುಲ್ ಈಮಾನ್)

ಅವರ ಈ ನಿಲುವು, ಒಬ್ಬ ಮುಸಲ್ಮಾನನು ಝಕಾತ್‌ನ ಮೊತ್ತವನ್ನು ಸರಕಾರಕ್ಕೆ ಸಬೇಕಾದುದು ಎಷ್ಟು ಅವಶ್ಯಕ ಎಂಬುದಕ್ಕೆ ಸಾಕ್ಷಿಯಾಗಿದೆ.

ಝಕಾತ್‌ನ ಕುರಿತು ಶರೀಅತ್‌ನ ಈ ಎರಡೂ ಆದೇಶಗಳನ್ನು ನೋಡಿದರೆ ಆರಾಧನೆಯನ್ನೂ ಅದು ಸಾಮೂಹಿಕತೆಯ ಸ್ಫೂರ್ತಿ ಬೆಳೆಸುವ ಮಾಧ್ಯಮವಾಗಿ

ಮಾಡಿರುವುದು ಮನವರಿಕೆಯಾಗುತ್ತದೆ. ಒಂದೆಡೆ ಇತರರೊಂದಿಗೆ ಅನುಕಂಪ ಮ
ಸಹಾನುಭೂತಿ ತೋರುವುದನ್ನು ಝುಕಾತ್‌ನ ಉದ್ದೇಶದಲ್ಲೇ ಸೇರಿಸಲಾಗಿದೆ. ಇ
ನಿಜವಾಗಿ ಒಂದು ಉತ್ತಮ ಸಾಮೂಹಿಕ ವ್ಯವಸ್ಥೆಯ ಪ್ರಧಾನ ಅಡಿಗಲ್ಲಾಗಿದೆ. ಇನ್ನೊಂ
ಝುಕಾತ್‌ನ ಸಂಗ್ರಹ ಮತ್ತು ವಿತರಣೆಯ ಹೊಣೆಯನ್ನು ಆಡಳಿತ ವ್ಯವಸ್ಥೆಯ ಮೆ
ಹೊರಿಸಲಾಗಿದ್ದು ಇದು ಸಾಮೂಹಿಕತೆಯ ಅತ್ಯಂತ ಪರಿಪೂರ್ಣ ರೂಪವಾಗಿದೆ. ಝುಕಾ
ನೈಜ ಉದ್ದೇಶ ಮತ್ತದರ ಮೂಲಭೂತ ಧ್ಯೇಯಕ್ಕೆ ಪ್ರತಿಕೂಲವಾಗಿದ್ದು ಯಾವ ರೀತಿಯ
ಅನುಕೂಲಕರವಾಗಿಲ್ಲವೆಂಬುದು ಈ ವಿಧಾನದ ವೈಶಿಷ್ಟ್ಯ. ಅದಾಗ್ಯೂ ಇಸ್ಲಾಮ್ ಈ ವಿಧಾ
ಪ್ರಾಶಸ್ತ್ಯ ಕೊಟ್ಟಿದೆ.

ಝುಕಾತ್‌ನ ನಿಜವಾದ ಉದ್ದೇಶ ಆತ್ಮಸಂಸ್ಕರಣೆ (ನೋಡಿರಿ: ಪವಿತ್ರ ಕುರ್‌ಆನ್ 9:1
ಮತ್ತು ದೇವಸಂಪ್ರೀತಿಯ ಸಂಪಾದನೆ (ನೋಡಿರಿ: ಪವಿತ್ರ ಕುರ್‌ಆನ್ 92:17–20)ಯಾಗಿ
ಈ ಉದ್ದೇಶಗಳು ಈಡೇರಲು ಶ್ರೀಮಂತರು ತಾವೇ ನೇರವಾಗಿ ಬಡವರಿಗೆ ಝುಕಾತ್ ಕೊಡ
ಮತ್ತು 'ಬಲಗೈಯಿಂದ ಕೊಟ್ಟದ್ದು ಎಡಗೈಗೂ ತಿಳಿಯದಂತೆ' ಗೌಪ್ಯವಾಗಿ ಝುಕಾತ್ ಕೊಡ
ವ್ಯವಸ್ಥೆ ಹೆಚ್ಚು ಸಮರ್ಪಕವಾಗಿರುತ್ತಿತ್ತಲ್ಲವೇ? ಸರಕಾರದ ಅಧಿಕಾರ ಮತ್ತು ವ್ಯವಸ್ಥೆಗ
ಬದ್ಧವಾಗಿ, ಬಹಿರಂಗವಾಗಿ ಝುಕಾತ್ ಕೊಡುವುದರಿಂದ ಅದನ್ನು ಕೊಡುವ ವ್ಯಕ್ತಿ
ಪ್ರಾಮಾಣಿಕತೆ ಮತ್ತು ಅವನ ನಿಸ್ವಾರ್ಥತೆಯು ಪ್ರಭಾವಿತವಾಗುವ ಸಾಧ್ಯತೆಗಳಿರುತ್ತದಲ್ಲವೆ

ಆದರೆ ಈ ಎಲ್ಲ ಸಾಧ್ಯತೆಗಳನ್ನೂ ಕಡೆಗಣಿಸಿ ಇಸ್ಲಾಮ್ ಧರ್ಮವು ಝುಕಾತ್‌ನ ಸಂ
ಮತ್ತು ವಿತರಣೆಯ ವ್ಯವಸ್ಥೆಯನ್ನು ಸಾಮೂಹಿಕ ಸ್ವರೂಪಕ್ಕೆ ಬದ್ಧಗೊಳಿಸಿದೆ. ಈ
ನಮಾಝ್‌ನಂತೆ ಝುಕಾತ್‌ನ ಮೂಲಕವೂ ಅದು ಸಾಮೂಹಿಕತೆಯ ಕಡೆಗಿನ ತನ್ನ ತಿ
ಒಲವನ್ನು ಪ್ರದರ್ಶಿಸಿದೆ. ಇಲ್ಲಿ ಕೂಡಾ ಅದು ಸಾಮೂಹಿಕ ಹಿತಾಸಕ್ತಿ ಮತ್ತು ಸಾಮೂಹಿಕತೆ
ನಿಯಮಗಳಿಗೆ, ಆರಾಧನಾ ಕರ್ಮಗಳ ಮೂಲ ಉದ್ದೇಶಕ್ಕೂ ಹಾನಿಯಾಗುವ ಸಾಧ್ಯತೆಗಳಿ
ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದೆ.

### (ಇ) ಉಪವಾಸಗಳಲ್ಲಿ ಸಾಮೂಹಿಕತೆ

ಇಸ್ಲಾಮ್ ಕಡ್ಡಾಯಗೊಳಿಸಿರುವ ಮೂರನೆಯ ಆರಾಧನಾ ಕರ್ಮ ಉಪವಾಸ
ಇದೊಂದು 'ನೆಗೆಟಿವ್' ಸ್ವರೂಪದ ಆರಾಧನೆ. ನಮಾಝ್, ಝುಕಾತ್ ಅಥವಾ ಹಜ್ಜ್
ಈ ಆರಾಧನೆಯಲ್ಲಿ ಜನರು ನೋಡುವಂತಹ ಯಾವುದೇ ಕ್ರಿಯೆಯನ್ನು ಮಾಡಲಿಕ್ಕಿರುವು
ಉಪವಾಸದಲ್ಲಿ ಕೆಲವು ಕ್ರಿಯೆಗಳನ್ನು ವರ್ಜಿಸಲಾಗುತ್ತದೆ ಅಷ್ಟೇ. ಈ ಬಗೆಯ ಕರ್ಮವೊಂ
ಸಾಮೂಹಿಕತೆ ಮತ್ತು ರೂಪ ಕೊಡುವುದು ಮತ್ತು ಅದನ್ನು ಜನರಲ್ಲಿ ಸಾಮೂಹಿಕತೆ
ಪ್ರಜ್ಞೆಯನ್ನು ಬಿತ್ತಿ ಬೆಳೆಸುವ ಮಾಧ್ಯಮವಾಗಿಸುವುದು ನಿಜಕ್ಕೂ ಒಂದು ಪ್ರಯಾಸದ ಕೆಲಸ.

ಆದರೆ, ಉಪವಾಸದಂತಹ ಒಂದು ನಕಾರಾತ್ಮಕ ಆರಾಧನೆಯನ್ನು ಕೂಡಾ ಇಸ್ಲಾ
ಧರ್ಮವು ಸಾಮೂಹಿಕತೆಯ 'ಮಾರ್ಗದರ್ಶಿ'ಯಾಗಿ ಮಾಡಿದೆ ಎಂಬುದು ಉಪವಾ

ತು ಶರೀಅತ್ ವಿಧಿಸಿರುವ ನಿಯಮಗಳಿಂದ ವ್ಯಕ್ತವಾಗುತ್ತದೆ. ಜಗತ್ತಿನ ಎಲ್ಲ ಮುಸಲ್ಮಾನರೂ ದು ನಿರ್ದಿಷ್ಟ ತಿಂಗಳಲ್ಲಿ ಉಪವಾಸ ಆಚರಿಸಬೇಕು. ಎಲ್ಲ ಮುಸ್ಲಿಮರೂ ಸರಿ ಸುಮಾರು ದೇ ನಿರ್ದಿಷ್ಟ ಸಮಯದಲ್ಲಿ ಉಪವಾಸ ಆರಂಭಿಸಬೇಕು ಮತ್ತು ಒಂದೇ ನಿರ್ದಿಷ್ಟ ಯದಲ್ಲಿ ಎಲ್ಲರೂ ಉಪವಾಸ ಮುರಿಯಬೇಕು. ಈ ಬಗೆಯ ನಿಯಮಗಳಿಂದಾಗಿ ಗತಿಕ ಮಟ್ಟದಲ್ಲಿ ಸಂಪೂರ್ಣ ಮುಸ್ಲಿಮ್ ಸಮಾಜವು ನಿರಂತರ ಒಂದು ತಿಂಗಳ ತನಕ ದು ಅತ್ಯಂತ ವ್ಯವಸ್ಥಿತ ತರಬೇತಿ ಶಿಬಿರದ ರೂಪ ತಾಳುತ್ತದೆ. ಪೂರ್ವದಿಂದ ಪಶ್ಚಿಮದ ಕ ಎಲ್ಲೆಡೆಯೂ ಸಮಾನ ಸ್ವರೂಪದ ಭಕ್ತಿಯ ವಾತಾವರಣವೊಂದು ನಿರ್ಮಾಣವಾಗುತ್ತದೆ. ಯೊಬ್ಬ ವ್ಯಕ್ತಿಯ ಮುಖದಲ್ಲೂ ಸಹನೆ ಮತ್ತು ಸ್ಥೈರ್ಯದ ಲಕ್ಷಣಗಳು ಗೋಚರಿಸುತ್ತವೆ.

ಹೀಗೆ ಒಂದು ಸಮಾಜವು ನಿರಂತರ ಒಂದು ತಿಂಗಳು ಏಕಕಾಲದಲ್ಲಿ ಒಂದು ವಿಶೇಷ ನಸಿಕ ಮತ್ತು ಆಧ್ಯಾತ್ಮಿಕ ಅನುಭವಕ್ಕೊಳಗಾಗಿ ಅದೇ ಸ್ಥಿತಿಯಲ್ಲಿ ಶಿಬಿರದ ರೂಪದಲ್ಲಿ ನಾಗ ಆ ಸಮಾಜದ ಪ್ರತಿಯೊಬ್ಬ ಸದಸ್ಯನಲ್ಲೂ ನಾವೆಲ್ಲರೂ ಒಂದೇ ಧ್ಯೇಯದ ವಾಹಕರು ತ್ತು ಒಂದೇ ಸೇನೆಯ ಯೋಧರೆಂಬ ಭಾವನೆ ಆಗಾಗ ಮೂಡದಿರಲು ಸಾಧ್ಯವೇ?

ಒಂದು ನಕಾರಾತ್ಮಕ ಸ್ವರೂಪದ ಆರಾಧನೆಯನ್ನೂ ಇಸ್ಲಾಮ್ ಧರ್ಮವು ಈ ರೀತಿ ಮೂಹಿಕತೆಯ ಪ್ರಾತಿನಿಧ್ಯಕ್ಕೆ ಬಳಸಿರುವುದು ನಿಸ್ಸಂದೇಹವಾಗಿಯೂ ಸಾಮೂಹಿಕತೆಯ ಇಸ್ಲಾಮಿನ ಒಲವಿನ ಪರಾಕಾಷ್ಠೆಯನ್ನು ಸೂಚಿಸುತ್ತದೆ.

## ) ಹಜ್ಜ್‌ನಲ್ಲಿ ಸಾಮೂಹಿಕತೆ

ಇಸ್ಲಾಮಿನ ಪ್ರಧಾನ ಆರಾಧನೆಗಳಲ್ಲಿ ಒಂದಾದ ಹಜ್ಜ್ ಅನ್ನು ತೆಗೆದುಕೊಳ್ಳಿ. ಏಕದೇವತ್ವದ ದ್ರವಾಗಿರುವ, ನಾಲ್ಕೂ ದಿಕ್ಕಿನಿಂದ ನೈಜ ದೇವಭಕ್ತಿಯನ್ನು ಸೂಚಿಸುವ ಸಂಕೇತಗಳಿಂದ ಸ್ತುವರಿಯಲ್ಪಟ್ಟ ಮತ್ತು ಮಹಾನ್ ಏಕದೇವ ವಿಶ್ವಾಸಿ ಹಝ್ರತ್ ಇಬ್ರಾಹೀಮ್ ಖಲೀಲು ಹ್(ಅ)ರ ಧರ್ಮ ಮತ್ತು ವಿಶ್ವಾಸದ ಸ್ಮಾರಕವಾಗಿರುವ ಆ ಪವಿತ್ರ ಗೃಹವನ್ನು ಏಕದೇವನ ರು ಮತ್ತು ಆ ನೈಜ ಆರಾಧ್ಯನ(ಅಲ್ಲಾಹ್)ನ ಆರಾಧಕರು ಸಂದರ್ಶಿಸಬೇಕೆಂಬುದೇ ಹಜ್ಜ್‌ನ ಗಿತ. ಅವನ ಕಣ್ಣುಗಳು ಪರಮೋಚ್ಚ ತ್ಯಾಗದ ಆ ಸಂಕೇತವನ್ನು ಹತ್ತಿರದಿಂದ ಕಂಡು ಇಲಾಹ ಇಲ್ಲಲ್ಲಾಹ್' ಎಂಬ ವಚನದ ತಾತ್ಪರ್ಯವೇನೆಂಬುದನ್ನು ಸ್ವತಃ ಅರಿತುಕೊಳ್ಳಬೇಕು ತ್ತು ದೇವಭಕ್ತಿಯ ನೈಜ ಸ್ಫೂರ್ತಿಯೊಂದಿಗೆ ಹೊಸ ಸಂಕಲ್ಪ ಹೊತ್ತು ದೇವದಾಸ್ಯದ ಜೀವನ ಕ್ಕೆ ಮರಳಬೇಕು ಎಂಬುದೇ ಇದರ ಉದ್ದೇಶವಾಗಿದೆ.

ಈ ಆರಾಧನೆಯ ಪ್ರಧಾನ ವಿಧಿಗಳ ಪೈಕಿ ಅರಫಾ ಮೈದಾನದಲ್ಲಿ ಉಪಸ್ಥಿತನಾಗುವುದೂ ದು. ಇಲ್ಲಿ ಲೋಕದ ಮೂಲೆ ಮೂಲೆಗಳಿಂದ ಬಂದ ವಿವಿಧ ವಂಶ, ವರ್ಣ, ಭಾಷೆ ತ್ತು ದೇಶಗಳಿಗೆ ಸೇರಿದ ಲಕ್ಷಗಟ್ಟಲೆ ಮುಸ್ಲಿಮರು ಒಟ್ಟುಗೂಡುತ್ತಾರೆ. ಅವರೆಲ್ಲರಿಗೆ ಮೀರೆ ಹಜ್ಜ್' ಎಂಬ ಸಮಾನ ನಾಯಕನಿರುತ್ತಾನೆ. ಅವನು ಅವರೆಲ್ಲರನ್ನುದ್ದೇಶಿಸಿ ಭಾಷಣ ಡುತ್ತಾನೆ. ಸತ್ಯವಿಶ್ವಾಸದ ತಿರುಳೇನು, ಇಸ್ಲಾಮ್‌ನ ಬೇಡಿಕೆಗಳೇನು ಮತ್ತು ದೇವದಾಸ್ಯದ

ನಿಯಮಗಳೇನು ಎಂಬುದನ್ನೆಲ್ಲಾ ನೆನಪಿಸಿ ಉಪದೇಶಿಸುತ್ತಾನೆ. ಒಬ್ಬ ವ್ಯಕ್ತಿ ಹಜ್ಜ್‌ನ ಬೇರೆ ವಿಧಿಗಳನ್ನು ಎಷ್ಟೇ ಭಯ ಭಕ್ತಿಯಿಂದ ನಿರ್ವಹಿಸಿದ್ದರೂ ಅರಫಾದಲ್ಲಿ ನಡೆಯುವ ಈ ಬೃಹ ಸಮಾವೇಶದಲ್ಲಿ ಪಾಲ್ಗೊಳ್ಳದಿದ್ದರೆ ಅವನ ಹಜ್ಜ್ ಪೂರ್ತಿಯಾಗುವುದಿಲ್ಲ.

ಹಜ್ಜ್‌ಗೆ ಕೂಡಾ ಬಹಳ ವ್ಯಕ್ತವಾಗಿ ಸಾಮೂಹಿಕ ಸ್ವರೂಪ ಕೊಡಲಾಗಿದ್ದು ಸಾಮ ಹಿಕತೆಯ ಪ್ರಜ್ಞೆಯನ್ನು ಬೆಳೆಸುವ ಒಂದು ಪ್ರಬಲ ಮಾಧ್ಯಮವಾಗಿ ಅದನ್ನು ಬಳಸಲಾ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಸ್ವಲ್ಪ ಆಳಕ್ಕೆ ಹೋಗಿ ನೋಡುವುದಾದರೆ, ಇತರೆಲ್ಲ ಕಡ್ಡಾಯ ಆರಾಧನೆಗಳಂತೆ ಹಜ ಉದ್ದೇಶವನ್ನು ಸಾಧಿಸಲಿಕ್ಕೂ ಸಾಮೂಹಿಕತೆಯು ಅನಗತ್ಯವೆಂಬಂತೆ ತೋರುತ್ತದೆ. ಹಾಗೆಯ ಕೆಲವು ಸಂದರ್ಭಗಳಲ್ಲಿ ಅದೊಂದು ಅನಾನುಕೂಲವಾಗಿಯೂ ಕಾಣಿಸುತ್ತದೆ. ಏಕೆಂ ಮನುಷ್ಯನು ಪವಿತ್ರ ಕಅಬಾ ಮತ್ತು ಅದರ ಪರಿಸರದ ಸಂಕೇತಗಳನ್ನು ನೋಡಿ ಅದರಿಂದ ವಿಶ್ವಾಸವನ್ನು ವೃದ್ಧಿಸಿಕೊಂಡು ಅದಕ್ಕೆ ಪುಷ್ಟಿ ಕೊಡಲು ಜನಸ್ತೋಮದ ಗದ್ದಲಕ್ಕಿಂತ ಏಕಾಂತದ ಸಿಗುವ ಏಕಾಗ್ರತೆ ಮತ್ತು ಶಾಂತ ವಾತಾವರಣವು ಹೆಚ್ಚು ಸೂಕ್ತವಾಗಿರುತ್ತದೆ. ಆದರೆ ಇ ತದ್ವಿರುದ್ಧವಾಗಿ ಜನರ ಸಮಾವೇಶ ಆಗದೆ ಹಜ್ಜ್ ಆಗುವುದಿಲ್ಲವೆಂದು ಶರೀಅತ್ ಹೇಳುತ್ತ ಅಂದರೆ ಸಾಮೂಹಿಕತೆಯ ಮಹತ್ವವನ್ನು ಮನಗಾಣಿಸುವಲ್ಲಿ ಹಜ್ಜ್ ಕರ್ಮವೂ ಇ ಯಾವುದೇ ಕಡ್ಡಾಯ ಆರಾಧನಾ ಕರ್ಮಕ್ಕಿಂತ ಹಿಂದಿಲ್ಲ. ಮಾತ್ರವಲ್ಲ ಕೆಲವೊಂದು ವಿಷಯದ ಅದು ಈ ನಿಟ್ಟಿನಲ್ಲಿ ಇತರ ಆರಾಧನೆಗಳಿಗಿಂತಲೂ ಮುಂದಿದೆ ಎಂದಾಯಿತು.

ಇಸ್ಲಾಮ್, ತನ್ನ ಆರಾಧನಾ ಕರ್ಮಗಳಲ್ಲಿ ಪಾಲಿಸಬೇಕೆಂದು ಆದೇಶಿಸಿರು ಸಾಮೂಹಿಕ ನಿಯಮಗಳು ಮತ್ತು ಆರಾಧನೆಗಳಲ್ಲಿ ಸಾಮೂಹಿಕತೆಗೆ ಇರುವ ಮ ಮುಂತಾದ ವಿಚಾರಗಳು ಈಗಾಗಲೇ ನಿಮ್ಮ ಮುಂದೆ ಬಂದವು. ಇಸ್ಲಾಮೀ ಆರಾಧನೆಗ ಸಾಮೂಹಿಕತೆಗೆ ಅತ್ಯಂತ ಗರಿಷ್ಠ ಮಹತ್ವ ಕೊಡಲಾಗಿದೆ ಎಂಬುದು ನಿಮಗೆ ಸ್ಪಷ್ಟವ ಮನವರಿಕೆ ಆಗಿರಬಹುದು.

ಈ ರೀತಿ ಸಾಮೂಹಿಕತೆಯ ದೃಷ್ಟಿಕೋನದಿಂದ ಇಸ್ಲಾಮ್ ಧರ್ಮದ ವಿವಿಧ ಶಾಖೆಗಳ ನಾವು ಅಭ್ಯಸಿಸಿದಂತಾಯಿತು. ಈ ಅಧ್ಯಯನದ ಬಳಿಕ ಸಾಮೂಹಿಕತೆಗೆ ಇಸ್ಲಾಮಿ ಇರುವಷ್ಟು ಉನ್ನತ ಸ್ಥಾನಮಾನ ಬೇರೆ ಯಾವುದೇ ಧರ್ಮಗಳಲ್ಲಿ ಮಾತ್ರವಲ್ಲ ಯಾವು ವ್ಯವಸ್ಥೆಯಲ್ಲೂ ಇಲ್ಲ ಎಂದು ನಿಸ್ಸಂದೇಹವಾಗಿ ಹೇಳಬಹುದು.

# ಸಂಘಟನಾ ಅವಶ್ಯಕತೆ

## ಸಂಘಟಿತ ಜೀವನದ ಭಯಾನಕ ಪರಿಣಾಮಗಳು

ಮೀನಿಗೆ ನೀರು ಅನಿವಾರ್ಯವಾಗಿರುವಂತೆ ಇಸ್ಲಾಮ್ ಧರ್ಮಕ್ಕೆ ಸಾಮೂಹಿಕತೆಯೂ ಅನಿವಾರ್ಯ ಎಂಬುದು ಈ ವರೆಗಿನ ಚರ್ಚೆಯಿಂದ ವ್ಯಕ್ತವಾದಂತಾಯಿತು.

ಆದರೆ ಯಾಕೆ ಹೀಗೆ? ಇಸ್ಲಾಮ್ ಸಾಮೂಹಿಕತೆಗೆ ಇಂತಹ ಅಸಾಮಾನ್ಯ ಮಹತ್ವ ನೀಡಲು ಕಾರಣವೇನು? ಅದು ತನ್ನ ಅನುಯಾಯಿಗಳನ್ನು ಸಮೂಹ ಜೀವನ ನಡೆಸುವಂತೆ ಅಷ್ಟು ಒತ್ತಾಯಿಸುವುದೇಕೆ? ಒಂದು ಸಂಘಟಿತ ಆಡಳಿತ ವ್ಯವಸ್ಥೆಯ ಸ್ಥಾಪನೆಗೆ ಅದು ಯಾಕಿಷ್ಟು ಒತ್ತು ಕೊಡುತ್ತದೆ? ಈ ವ್ಯವಸ್ಥೆಯ ನೇತೃತ್ವ ವಹಿಸಿದವನ ಅನುಸರಣೆ ಸಾಕ್ಷಾತ್ ಅಲ್ಲಾಹ್ ಮತ್ತವನ ಸಂದೇಶವಾಹಕರ ಅನುಸರಣೆಗೆ ಸಮಾನವೆಂದೂ ಅವನ ಆಜ್ಞೆಗಳ ಉಲ್ಲಂಘನೆ ಅಲ್ಲಾಹ್ ಮತ್ತವನ ಸಂದೇಶವಾಹಕರ ಆಜ್ಞೆಗಳ ಉಲ್ಲಂಘನೆ ಎಂದೂ ಅದು ಪರಿಗಣಿಸಿದ್ದೇಕೆ? ಒಬ್ಬನು ಅಲ್ ಜಮಾಅತ್‌ನಿಂದ ಒಂದು ಗೇಣು ದೂರ ಸರಿದರೂ ಅವನು ಇಸ್ಲಾಮಿನ ವೃತ್ತದಿಂದ ಹೊರ ನಡೆದಂತಾಗುತ್ತದೆಂದೂ ಸಾಮುದಾಯಿಕ ಐಕ್ಯಕ್ಕೆ ಕನ್ನ ಕೊರೆಯುವವನ ರಕ್ಷಣೆಯ ಹೊಣೆ ತನ್ನ ಮೇಲಿಲ್ಲವೆಂದೂ ಅದು ಘೋಷಿಸಿರುವುದೇಕೆ? 'ಖಿಲಾಫತ್'ನ ಜೊತೆ 'ಬೈಅತ್' ಮಾಡದೆ ಸತ್ತವನ ಮರಣ ಅಜ್ಞಾನದ ಮರಣವೆಂದು ಅದು ಪರಿಗಣಿಸಿದ್ದೇಕೆ? ಈ ವಿಷಯಗಳ ಬಗ್ಗೆ ನಾವೀಗ ಚಿಂತಿಸಬೇಕಾಗಿದೆ.

ಅಂತಹ ಚಿಂತನೆಯ ಅಗತ್ಯವೆಂತೂ ಎಲ್ಲರಿಗೆ ತಿಳಿದಿದೆ. ಅಂತಹ ಪ್ರಾಮುಖ್ಯ ವಿಚಾರಗಳಲ್ಲಿ ಕೇವಲ 'ಧರ್ಮ ಏನು ಹೇಳುತ್ತದೆ?' ಎಂಬುದನ್ನು ಮಾತ್ರ ತಿಳಿಸಿದರೆ ಜನಸಾಮಾನ್ಯ ತೃಪ್ತನಾಗುವುದಿಲ್ಲ, 'ಧರ್ಮವು ಯಾಕೆ ಹಾಗೆ ಹೇಳಿದೆ' ಎಂಬುದೂ ಮನವರಿಕೆಯಾದಾಗ ಮಾತ್ರ ಅವನಿಗೆ ಸಂತೃಪ್ತಿಯಾಗುತ್ತದೆ. ಆದ್ದರಿಂದ ಇಸ್ಲಾಮ್ ಸಾಮೂಹಿಕತೆಗೆ ಎಷ್ಟು ಮಹತ್ವ ಕೊಟ್ಟಿದೆ ಎಂಬುದು ಈಗಾಗಲೇ ಸ್ಪಷ್ಟವಾಗಿದ್ದರೂ ಅದಕ್ಕೆ ಅಂತಹ ಮಹತ್ವ ಕಲ್ಪಿಸಿರುವುದಕ್ಕೆ ಕಾರಣವೇನು ಮತ್ತು ಅದರಿಂದಾಗುವ ಪ್ರಯೋಜನಗಳೇನು ಎಂಬುದನ್ನೂ ಸರಿಯಾಗಿ ವಿವರಿಸಿದರೆ ಅದರಿಂದ ಜನಸಾಮಾನ್ಯನು ತೃಪ್ತನಾಗುವನಲ್ಲದೆ ಸಾಮೂಹಿಕತೆಗೆ ಅದರ ನೈಜ ಸ್ಥಾನವನ್ನು ಕೊಡಲು ಒಲವು ತೋರಬಹುದು.

ಈ ನಿಟ್ಟಿನಲ್ಲಿ ಮುಂದುವರಿಯುವುದಕ್ಕಿಂತ ಮುಂಚೆ ನಾವು ಖಚಿತವಾಗಿ ತಿಳಿದಿರಬೇಕಾದ ಪ್ರಥಮ ವಾಸ್ತವಿಕತೆ ಏನೆಂದರೆ ಇಸ್ಲಾಮಿನ ಧ್ಯೇಯೋದ್ದೇಶಗಳನ್ನು ಸಾಧಿಸುವಲ್ಲಿ ಮತ್ತು

ಧರ್ಮ ಹಾಗೂ ಸತ್ಯವಿಶ್ವಾಸದ ಬೇಡಿಕೆಗಳನ್ನು ಈಡೇರಿಸುವಲ್ಲಿ ಸಾಮೂಹಿಕತೆಯ
ಬಹಳ ವಿಶಿಷ್ಟವಾದ, ಅತ್ಯಂತ ಮಹತ್ವದ ಪಾತ್ರ ವಹಿಸುತ್ತದೆ. ಹಾಗಲ್ಲದಿರುತ್ತಿದ್ದರೆ ಇಸ್ಲಾಮ
ಧರ್ಮವು ಸಾಮೂಹಿಕತೆಗೆ ಖಂಡಿತ ಇಂತಹ ಅಸಾಮಾನ್ಯ ಮಹತ್ವ ಕಲ್ಪಿಸುತ್ತಿರಲಿಲ್ಲ. ಇದನ
ತಿಳಿದ ಬಳಿಕ, ಧರ್ಮದ ಗುರಿ ಸಾಧನೆಯಲ್ಲಿ ಸಾಮೂಹಿಕತೆಯ ಪಾತ್ರವೇನು ಮತ
ಸತ್ಯವಿಶ್ವಾಸದ ಬೇಡಿಕೆಗಳನ್ನು ಈಡೇರಿಸುವಲ್ಲಿ ಅದು ಸಲ್ಲಿಸುವ ಸೇವೆ ಏನು ಎಂಬುದನ
ಮಾತ್ರ ಅರಿತುಕೊಂಡರೆ ಸಾಕಾಗುತ್ತದೆ. ಈ ಕುರಿತು ಅಧ್ಯಯನಕ್ಕಾಗಿ ಸ್ವಾಭಾವಿಕವಾಗಿಯೆ
ನಾವು ಇಸ್ಲಾಮೀ ತತ್ವಾದರ್ಶಗಳನ್ನು ತಿಳಿಯುವ ಒಂದು ಪ್ರಧಾನ ಮೂಲವಾಗಿರುವ ಪ್ರವಾ
ವಚನಗಳನ್ನು ನೋಡುತ್ತೇವೆ. ಅಲ್ಲಿ ನಮಗೆ ಸಿಗುವ ಉತ್ತರ ಇದು.

ಜಮಾಅತ್‌ಗೆ ಅಂಟಿಕೊಂಡಿರಿ. ಗುಂಪಿನಿಂದ ಬೇರ್ಪಟ್ಟು ದೂರವುಳಿದ ಆಡ
ತೋಳವು ಹಿಡಿದು ತಿನ್ನುವುದು. (ಅಬೂದಾವುದ್)

ಆಡುಗಳ ಪಾಲಿಗೆ ತೋಳ ಹೇಗೋ ಹಾಗೆಯೇ ಮನುಷ್ಯನ ಪಾಲಿಗೆ ಶೈತಾನ
ತೋಳವಾಗಿದ್ದಾನೆ. ತೋಳವಾದರೋ, ಮಂದೆಯಿಂದ ಓಡಿ ಹೋದ, ದೂರವುಳಿದ ಮ
ಪ್ರತ್ಯೇಕವಾಗಿ ನಿಂತ ಆಡನ್ನೇ ಹಿಡಿಯುತ್ತದೆ. (ಮುಸ್ನದ್ ಅಹ್ಮದ್– ಮಿಶ್ಕಾತ್‌ನಿಂದ ಉದ್ಧರಿ

ಅಲ್ ಜಮಾಅತ್‌ನಿಂದ ದೂರ ಸರಿಯದಿರಿ. ವಿಚ್ಛಿದ್ರತೆಯ ಹತ್ತಿರ ಸುಳಿಯಬೇಡಿ
ಏಕೆಂದರೆ ಶೈತಾನನು ಒಬ್ಬಂಟಿಗನ ಜೊತೆಗಿರುತ್ತಾನೆ. ಇಬ್ಬರು ಜೊತೆಗಿರುವಲ್ಲಿಂದ ಅವ
ದೂರವಾಗುತ್ತಾನೆ. (ತಿರ್ಮಿದಿ ಭಾಗ– 2, ಬಾಬುಲ್ ಫಿತನ್)

ಅಂದರೆ ತನ್ನ ಈಮಾನ್ ಅರ್ಥಾತ್ ಧರ್ಮವಿಶ್ವಾಸವನ್ನು ಸುರಕ್ಷಿತವಾಗಿಡು
ದೃಷ್ಟಿಯಿಂದಲೂ ಸಾಮೂಹಿಕ ವ್ಯವಸ್ಥೆಗೆ ಬದ್ಧನಾಗಿರಬೇಕಾದುದು ಅವಶ್ಯಕ. ಇಂತ
ಸಾಮೂಹಿಕ ವ್ಯವಸ್ಥೆ ಇಲ್ಲದಿರುವಲ್ಲಿ ಒಬ್ಬ ಮುಸಲ್ಮಾನನ ಧರ್ಮವಾಗಲೀ, ವಿಶ್ವಾಸವಾಗ
ಸುರಕ್ಷಿತವಿರುವುದಿಲ್ಲ, ಏಕೆಂದರೆ ಅಂತಹ ಸ್ಥಿತಿಯಲ್ಲಿ ಅವನು ಶೈತಾನನ ಆಕ್ರಮ
ಪಕ್ವವಾಗಿರುತ್ತಾನೆ. ಶೈತಾನ್ ಬಹಳ ಸುಲಭವಾಗಿ ಅವನನ್ನು ಆಕ್ರಮಿಸುತ್ತಾನೆ. ಆದರೆ ಸಾ
ದಾಯಿಕ ಸಂಘಟನೆಯು ಒಂದು ಅಭೇದ್ಯ ಕೋಟೆಯಂತಿದ್ದು ಅದರೊಳಗೆ ಪ್ರವೇಶಿಸಿದ ಒ
ಧರ್ಮ ವಿಶ್ವಾಸಿಯನ್ನು ಬೇಟೆಯಾಡುವುದು ಶೈತಾನನಿಗೆ ಅಷ್ಟು ಸುಲಭವಾಗುವುದಿಲ್ಲ.

ಪ್ರವಾದಿ ವಚನಗಳಲ್ಲಿ ನಮಗೆ ಸಿಗುವ ಈ ಉತ್ತರವು ಸಾಮಾನ್ಯ ಸ್ವರೂಪದ್ದಾಗಿ
ಇದರಲ್ಲಿ ವಿಶದೀಕರಣವಿಲ್ಲದಿದ್ದರೂ ನಾವು ಚರ್ಚೆಗೆತ್ತಿಕೊಂಡಿರುವ ವಿಷಯದಲ್ಲಿ ಮಾ
ದರ್ಶನಕ್ಕೆ ಈ ವಚನಗಳೇ ಪರ್ಯಾಪ್ತವಾಗುತ್ತವೆ. ಪ್ರತ್ಯೇಕವಾಗಿ ಈ ವಚನಗಳನ್ನು ವಿಶ್ಲೇ
ಬೇಕಾದ ಯಾವ ಅಗತ್ಯವೂ ಇಲ್ಲ. ಧರ್ಮದ ತತ್ವಾದರ್ಶಗಳು, ಶರೀಅತ್‌ನ ಪೂರ್ಣ ವ್ಯ
ಮತ್ತು ಸಮುದಾಯದ ಈ ತನಕದ ಚರಿತ್ರೆಯೇ ಈ ವಚನಗಳ ಸಮಗ್ರ ವಿಶ್ಲೇಷಣೆಗಳಾಗಿ
ಈ ತತ್ವಾದರ್ಶಗಳು, ವ್ಯವಸ್ಥೆ ಮತ್ತು ಚರಿತ್ರೆಯನ್ನು ನೀವು ಅಭ್ಯಸಿಸಿದರೆ, ಸಾಮೂಹಿಕತೆ
ಅನುಪಸ್ಥಿತಿಯು ಮುಖ್ಯವಾಗಿ ಮೂರು ಸ್ತರಗಳಲ್ಲಿ ಮುಸಲ್ಮಾನರ ಧರ್ಮ ಮತ್ತು ವಿಶ್ವಾ
ಭೀಕರ ಅಪಾಯ ತಂದೊಡ್ಡುತ್ತದೆಂಬುದನ್ನು ತಿಳಿಯಬಹುದು.

## . ಪ್ರತಿಕೂಲ ವಾತಾವರಣದಲ್ಲಿ

ಮೊದಲನೆಯದಾಗಿ ಇಸ್ಲಾಮೀ ಸಾಮೂಹಿಕ ವ್ಯವಸ್ಥೆ ಇಲ್ಲದಂತಹ ವಾತಾವರಣವು ಯಾವಾಗಲೂ ದುರ್ವಿಚಾರ, ದುರಾಚಾರ ಮತ್ತು ದುಷ್ಟ ಮೌಲ್ಯಗಳಿಗೆ ಅನುಕೂಲಕರವಾಗಿರುತ್ತದೆ. ಅದೇ ವೇಳೆ ಅದು ಸದ್ವಿಚಾರ, ಸದಾಚಾರ ಮತ್ತು ಸದ್ಮೌಲ್ಯಗಳಿಗೆ ಬಹಳ ಪ್ರತಿಕೂಲವಾಗಿರುತ್ತದೆ. ಆದರಿಂದಾಗಿ 'ಸಾಧ್ಯ' ಮಿತಿಗಳ ಒಳಗೂ ದೇವಭಕ್ತಿ ಮತ್ತು ಧರ್ಮನಿಷ್ಠೆಯ ಮಾರ್ಗದಲ್ಲಿ ನಡೆಯುವುದು ಕಷ್ಟವಾಗುತ್ತದೆ.

ಇದೊಂದು ವ್ಯಕ್ತ ವಾಸ್ತವಿಕತೆಯಾಗಿದ್ದು ಇದಕ್ಕೆ ಯಾವುದೇ ವ್ಯಾಖ್ಯಾನ ಅಥವಾ ಪುರಾವೆಗಳ ಅಗತ್ಯವಿಲ್ಲ, ಅಪೇಕ್ಷಿತ ಇಸ್ಲಾಮೀ ಸಾಮೂಹಿಕ ವ್ಯವಸ್ಥೆಯ ಅನುಪಸ್ಥಿತಿಯಲ್ಲಿ ಇಸ್ಲಾಮ್ ಬಯಸುವಂತಹ ಆಚಾರ-ವಿಚಾರ, ನೀತಿ ಮತ್ತು ಮೌಲ್ಯಗಳಿಗೆ ಪ್ರತಿಕೂಲವಾದ ವಾತಾವರಣ ಇರುತ್ತದೆಂಬುದು ಸಾಮಾನ್ಯ ಚಿಂತನೆಯಿಂದಲೇ ತಿಳಿಯುತ್ತದೆ.

ಹಾಗಾದರೆ ಇಸ್ಲಾಮೀ ಸಾಮೂಹಿಕ ವ್ಯವಸ್ಥೆಯ ಅರ್ಥವಾದರೂ ಏನು? ದೇವಾದೇಶಗಳ ಆಧಾರದಲ್ಲಿ ನಿರ್ಮಾಣಗೊಂಡಿರುವ, 'ಒಳಿತಿನ ಆದೇಶ ಮತ್ತು ಕೆಡುಕಿನ ತಡೆ'ಯೇ ಪ್ರಧಾನ ವೈಶಿಷ್ಟ್ಯವಾಗಿರುವ, ಪ್ರತಿಯೊಬ್ಬನೂ ಕೇವಲ ತಾನೊಬ್ಬನೇ ಸಜ್ಜನನಾದರೆ ಸಾಲದು, ಇತರರೂ ಸಜ್ಜನರಾಗುವಂತೆ ಪ್ರಯತ್ನಿಸಬೇಕಾದುದು ತನ್ನ ಧಾರ್ಮಿಕ ಕರ್ತವ್ಯ ವೆಂದು ಭಾವಿಸುವಂತಹ ಪ್ರಜೆಗಳನ್ನು ಹೊಂದಿರುವ, ಸಾಮಾನ್ಯವಾಗಿ ದುಷ್ಟತೆ ಮತ್ತು ಪಥ ಭ್ರಷ್ಟತೆಗೆ ಪ್ರೇರಣೆ ಕೊಡುವ ಅಂಶಗಳಿಂದ ಮುಕ್ತವಾದ ವಾತಾವರಣವಿರುವ, ದೇವಭಕ್ತಿಯೇ ಪ್ರತಿಷ್ಠೆಯ ಮಾನದಂಡವಾಗಿರುವ ಮತ್ತು ಪ್ರತಿಯೊಬ್ಬರೂ ಸತ್ಕಾರ್ಯದಲ್ಲಿ ಸ್ಪರ್ಧಾತ್ಮಕವಾಗಿ ಪಾಲ್ಗೊಳ್ಳುತ್ತಾ ಪರಸ್ಪರರ ಜೊತೆ ಸಹಕರಿಸುವಂತಹ ವಿಶೇಷ ವಾತಾವರಣವಿರುವ ವ್ಯವಸ್ಥೆಯೇ ಇಸ್ಲಾಮೀ ಸಾಮೂಹಿಕ ವ್ಯವಸ್ಥೆಯಲ್ಲವೇ?

ಇಂತಹ ಸಮಾಜವೊಂದರಲ್ಲಿ ಒಬ್ಬ ಪ್ರಜ್ಞಾವಂತ ಮುಸಲ್ಮಾನನಿಗೆ ಸಜ್ಜನನಾಗಿ ರೂಪುಗೊಳ್ಳುವುದು ಬಹಳ ಸುಲಭವಾಗಿರುತ್ತದಲ್ಲದೆ ದುಷ್ಟತೆಗೆ ಇಳಿಯುವುದು ಅವನ ಪಾಲಿಗೆ ಪ್ರಯಾಸಕರ ವಾಗಿರುತ್ತದೆ. ಅಲ್ಲಿ ಮುಸಲ್ಮಾನನೊಬ್ಬನಿಗೆ ಸದಾಚಾರದ ಬಾಳುವೆ ನಡೆಸುವುದು ಸಮತಟ್ಟಾದ ನೆಲದ ಮೇಲೆ ನಡೆಯುವಷ್ಟೇ ಸುಲಭವಾಗಿರುತ್ತದೆ. ಎಷ್ಟೆಂದರೆ ಒಬ್ಬ ವ್ಯಕ್ತಿಯ ಧರ್ಮ ಪ್ರಜ್ಞೆ ಮತ್ತು ನೈತಿಕ ಪ್ರಜ್ಞೆಯು ಬಹಳ ದುರ್ಬಲವಾಗಿದ್ದರೂ ಅಂಥವನು ಕೂಡಾ ಒಟ್ಟಿನಲ್ಲಿ ಕೆಡುಕುಗಳಿಂದ ಸುರಕ್ಷಿತನಾಗಿರಬಲ್ಲನು. ಯಾಕೆಂದರೆ ಇಸ್ಲಾಮೀ ವಾತಾವರಣವು ಅವನನ್ನು ನಿರಂತರವಾಗಿ ಒಳಿತಿನೆಡೆಗೆ ಸೆಳೆಯುತ್ತಾ ಕೆಡುಕುಗಳ ವಿರುದ್ಧ ಅವನಲ್ಲಿ ಜಿಗುಪ್ಸೆ ಹುಟ್ಟಿಸುತ್ತಾ ಇರುತ್ತದೆ. ಇದರ ಸಹಜ ಪರಿಣಾಮವಾಗಿ ಅವನ ಆಚಾರ ವಿಚಾರಗಳ ಮೇಲೆ ಒಳಿತನ ಒಲವೇ ಮೇಲುಗೈ ಸಾಧಿಸುವುದು.

ಇದಕ್ಕೆ ತದ್ವಿರುದ್ಧವಾಗಿ ಇಸ್ಲಾಮೀ ಸಾಮೂಹಿಕತೆಯಿಂದ ಮುಕ್ತವಾದ ವಾತಾವರಣ ವೆಂದರೆ ಅಲ್ಲಿ ಮುಸಲ್ಮಾನರಿದ್ದರೂ ಅವರದ್ದೇ ಆದ ಯಾವುದೇ ಸಮಾಜವಿರುವುದಿಲ್ಲ,

ಸಮಾಜ ಇದ್ದರೂ ಅದಕ್ಕೊಂದು ಸಂಘಟನೆಯೋ ವ್ಯವಸ್ಥೆಯೋ ಇರುವುದಿಲ್ಲ. ಸಂಘಟ ಮತ್ತು ವ್ಯವಸ್ಥೆಗಳಿದ್ದರೂ ಅವು ಪವಿತ್ರ ಕುರ್‌ಆನ್ ಮತ್ತು ಇಸ್ಲಾಮ್ ಧರ್ಮದ ಇಂಗಿತಗಳಿ ಅನುಗುಣವಾಗಿರುವುದಿಲ್ಲ. ಇಂತಹ ವಾತಾವರಣವು ಖಂಡಿತವಾಗಿ, ಪೂರ್ಣವಾಗಿ ಯಥಾರ್ಥದಲ್ಲಿ 'ಒಳಿತನ್ನು ಪ್ರೀತಿಸುವ' ಮತ್ತು 'ಕೆಡುಕನ್ನು ದ್ವೇಷಿಸುವ' ವಾತಾವರಣವಾಗಿರ ವುದಿಲ್ಲ. ಅಲ್ಲಿ ಇಸ್ಲಾಮೀ ಮೌಲ್ಯಗಳು ಮೇಲುಗೈ ಸಾಧಿಸಿರುವುದೂ ಇಲ್ಲ. ಅಲ್ಲಿ ಎಲ್ಲೆಡೆಯ ಕೆಡುಕಿನ ಪ್ರೇರಕಗಳು ತುಂಬಿರುತ್ತವೆ.

ಇಂತಹ ಅವಸ್ಥೆಯಲ್ಲಿ ಒಬ್ಬ ಸಾಮಾನ್ಯ ಮುಸ್ಲಿಮನ ಪಾಲಿಗೆ ಸಜ್ಜನನಾಗಿ ಬಾಳುವುದ ಪ್ರಯಾಸಕರವಾಗುತ್ತದೆ ಮತ್ತು ದುಷ್ಟನಾಗುವುದು ಬಹಳ ಸುಲಭವಾಗುತ್ತದೆ. ಇ ಮುಸಲ್ಮಾನನಾಗಿ ಬಾಳುವುದು ಅವನ ಮಟ್ಟಿಗೆ ಸಮತಟ್ಟಾದ ನೆಲದಲ್ಲಿ ನಡೆಯುವಷ ಸರಳವಾಗಿರುವ ಬದಲು ಬಹಳ ಎತ್ತರವಾದ ಪರ್ವತವನ್ನು ಹತ್ತುವಷ್ಟು ಕಷ್ಟಕರವಾಗಿರುತ್ತದೆ.

ಇದರ ಪರಿಣಾಮವೇನೆಂದರೆ ಈ ಬಗೆಯ ಸಮಾಜದಲ್ಲಿ ಮುಸಲ್ಮಾನರು ಸಾಮಾನ್ಯವಾ ದೇವಭಕ್ತಿ ಮತ್ತು ಸತ್ಯಪರ ನಿಲುವಿನಿಂದ ದೂರವಾಗುತ್ತಾ ಹೋಗುತ್ತಾರೆ.

## 2. ಅಪೂರ್ಣ ಧರ್ಮಪಾಲನೆಯ ಅನಿವಾರ್ಯತೆ

ಎರಡನೆಯದಾಗಿ ಇಂಥ ವಾತಾವರಣ ಮತ್ತು ಇಂಥ ಸಮಾಜದಲ್ಲಿ ಒಬ್ಬ ಮುಸಲ್ಮಾನನ ಪ್ರಾಯೋಗಿಕವಾಗಿ ಗಣನೀಯ ಮಟ್ಟದಲ್ಲಿ ಇಸ್ಲಾಮಿನಿಂದ ದೂರ ಉಳಿಯುವುದ ಅನಿವಾರ್ಯವಾಗುತ್ತದೆ. ಇಸ್ಲಾಮ್ ಧರ್ಮ ಏನನ್ನು ಬಯಸುತ್ತದೆ ಮತ್ತು ಜಗತ್ತಿನ ಮುಸಲ್ಮಾನನ ಜೀವನೋದ್ದೇಶ ಏನು ಎಂಬುದನ್ನು ತಿಳಿದವರ ಮಟ್ಟಿಗೆ ಈ ವಾಸ್ತವಿಕತೆಯ ಗೌಪ್ಯವಾಗಿರುವುದಿಲ್ಲ. ಧರ್ಮದ ಸಂಪೂರ್ಣ ವ್ಯವಸ್ಥೆಯ ಮೇಲೊಮ್ಮೆ ಕಣ್ಣೋಡಿಸಿದಾ ಇಸ್ಲಾಮೀ ಸಾಮೂಹಿಕ ವ್ಯವಸ್ಥೆಯು ಅಸ್ತಿತ್ವದಲ್ಲಿ ಇಲ್ಲದಿರುವ ಸ್ಥಿತಿಯಲ್ಲಿ, ಪ್ರಾಯೋಗಿಕವಾಗಿ ಕ ಕೆಳಗಿನ ರಂಗಗಳಲ್ಲಿ ಇಸ್ಲಾಮಿನಿಂದ ದೂರವುಳಿಯುವುದು ಅನಿವಾರ್ಯವಾಗುತ್ತದೆಂಬುದ ಸ್ಪಷ್ಟವಾಗುತ್ತದೆ.

1. ಮುಖ್ಯವಾಗಿ ಅವನಿಗೆ ಅಲ್ಲಾಹನಿಗೆ ಸಂಬಂಧಿಸಿದ ತನ್ನ ಬಾಧ್ಯತೆಗಳನ್ನು ಸರಿಯಾ ಪಾಲಿಸಲು ಸಾಧ್ಯವಾಗುವುದಿಲ್ಲ. ಇನ್ನೊಂದರ್ಥದಲ್ಲಿ, ದೇವ ದಾಸ್ಯದ ಆದೇಶ್ಗೋ ಸಹ ಬೇಡಿಕೆಗಳನ್ನು ಈಡೇರಿಸುವಲ್ಲಿ ಅವನು ಅಸಮರ್ಥನಾಗುತ್ತಾನೆ. ಒಬ್ಬ ಮುಸಲ್ಮಾನ ಮಟ್ಟಿಗೆ ಸತ್ಯಸಾಕ್ಷ್ಯ ಮತ್ತು ಧರ್ಮಸಂಸ್ಥಾಪನೆ ಅತಿ ದೊಡ್ಡ ಧಾರ್ಮಿಕ ಕರ್ತವ್ಯ. ಅವ ಅಸ್ತಿತ್ವದ ಉದ್ದೇಶವೂ ಅದುವೇ. ಹಾಗೆಯೇ ಹದೀಸ್‌ಗಳಲ್ಲಿ ಅತ್ಯುತ್ತಮ ಕರ್ಮವೆಂದ ವರ್ಣಿಸಲ್ಪಟ್ಟಿರುವ ಹಾಗೂ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ನೆಚ್ಚಿನ ಕರ್ಮವಾಗಿರು ದೇವಮಾರ್ಗದ 'ಜಿಹಾದ್'. ಜಿಹಾದ್‌ನ ಉತ್ಸಾಹ ಇಲ್ಲದ ಹೃದಯ ಕಾಪಟ್ಯದ ರೋಗ ತುತ್ತಾದ ಹೃದಯವೆಂದೇ ಪರಿಗಣಿಸಲ್ಪಡುತ್ತದೆ. ಆದರೆ ಇಸ್ಲಾಮೀ ಸಾಮೂಹಿಕ ವ್ಯವಸ್ಥೆಯಿಂ

ವಂಚಿತವಾಗಿರುವ ಒಂದು ಸಮಾಜದಲ್ಲಿ ಈ ಕರ್ತವ್ಯವನ್ನು ನಿರ್ವಹಿಸುವ ಅವಕಾಶ ಯಾರಿಗಾದರೂ ಸಿಗುತ್ತದೆಯೇ? ಖಂಡಿತ ಇಲ್ಲ.

ಸರಿ. ಇವುಗಳನ್ನು ಬಿಟ್ಟು ಪಾರಿಭಾಷಿಕ(Terminology)ಗಳ ಮಟ್ಟಿಗೆ ಯಾವುದೇ ವಿವಾದವಿಲ್ಲದೆ 'ಇಬಾದತ್' (ಆರಾಧನೆ) ಮತ್ತು 'ಹುಕೂಕುಲ್ಲಾಹ್' (ಅಲ್ಲಾಹನಿಗೆ ಸಂಬಂಧಿಸಿದ ಬಾಧ್ಯತೆಗಳು) ಎಂದು ಕರೆಯಲ್ಪಡುವ ನಮಾಝ್, ಝಕಾತ್ ಮತ್ತು ಹಜ್ಜ್‌ನಂತಹ ಕರ್ಮಗಳನ್ನೇ ತೆಗೆದುಕೊಳ್ಳೋಣ. ಸಾಮೂಹಿಕ ವ್ಯವಸ್ಥೆಯ ಅನುಪಸ್ಥಿತಿಯಲ್ಲಿ ಈ ಆರಾಧನೆಗಳನ್ನು ಕೂಡಾ ಅಲ್ಲಾಹ್ ಮತ್ತವನ ಪ್ರವಾದಿವರ್ಯರು(ಸ) ಕಾಣಬಯಸಿದಂತಹ ಮಾದರೀ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಹೀಗಿರುವಾಗ, ಇಸ್ಲಾಮಿನ ಅಪೇಕ್ಷಿತ ಸಾಮೂಹಿಕತೆ ಇಲ್ಲದಲ್ಲಿಯೂ ಅಲ್ಲಾಹನಿಗೆ ಸಂಬಂಧಿಸಿದ ಬಾಧ್ಯತೆಗಳನ್ನು ಈಡೇರಿಸಬಹುದೆಂದು ಹೇಳಲು ಸಾಧ್ಯವೇ?

2. ಮನುಷ್ಯರಿಗೆ ಸಂಬಂಧಿಸಿದ ಬಾಧ್ಯತೆಗಳ ಅವಸ್ಥೆಯೂ ಅಷ್ಟೇ. ಒಬ್ಬ ನೊಂದವನ ನೋವು ನೀಗಿಸುವುದು, ದುರ್ಬಲನಿಗೆ ನೆರವಾಗುವುದು, ಮರ್ದಿತನಿಗೆ ಸಹಾಯ ಮಾಡುವುದು; ಒಬ್ಬ ರೋಗಿಯ ಶುಶ್ರೂಷೆಗೆ ಧಾವಿಸುವುದು, ಒಬ್ಬ ಮೃತ ವ್ಯಕ್ತಿಯ ಅಂತಿಮ ಸಂಸ್ಕಾರದಲ್ಲಿ ಪಾಲುಗೊಳ್ಳುವುದು ಈ ರೀತಿ ಒಬ್ಬ ಮುಸಲ್ಮಾನನ ಮೇಲೆ ತನ್ನ ಇತರ ಸಹಜೀವಿಗಳಿಗೆ ಸಂಬಂಧಿಸಿದಂತೆ ಇರುವ ಬಾಧ್ಯತೆಗಳನ್ನು ಪೂರ್ಣ ರೂಪದಲ್ಲಿ ಈಡೇರಿಸಲು ಕೂಡಾ ಸಾಮೂಹಿಕತೆ ಇಲ್ಲದಲ್ಲಿ ಸಾಧ್ಯವಾಗುವುದಿಲ್ಲ. ಒಬ್ಬನು ಸಾಮೂಹಿಕತೆಯಿಂದ ಎಷ್ಟು ದೂರ ಉಳಿಯುವನೋ ಪ್ರಸ್ತುತ ಕ್ಷೇತ್ರಗಳಲ್ಲಿ ಅವನ ಸಹಭಾಗಿತ್ವಕ್ಕಿರುವ ಅವಕಾಶಗಳು ಅಷ್ಟೇ ಕಡಿಮೆಯಾಗುತ್ತಾ ಹೋಗುತ್ತದೆ. ಸಾಮೂಹಿಕತೆಯಿಂದ ಅವನ ಅಂತರವು ಸಂಪೂರ್ಣ ಏಕಾಂತ ಅಥವಾ ಪೂರ್ತಿ ಅಗಲಿಕೆಯ ಹಂತಕ್ಕೆ ಮುಂದುವರಿದಿದ್ದರೆ ಆಗಂತೂ ಈ ಅವಕಾಶಗಳು ಅವನಿಗೆ ಸುತರಾಮ್ ಸಿಗುವುದಿಲ್ಲ.

3. ನೈತಿಕತೆಯ ಅವಸ್ಥೆಯೂ ಇದಕ್ಕಿಂತ ಭಿನ್ನವಲ್ಲ. ಧರ್ಮದಲ್ಲಿ ನೈತಿಕತೆ ಮತ್ತು ಸದಾಚಾರಕ್ಕೆ ಇರುವ ಮಹತ್ವ ಗುಪ್ತವಲ್ಲ. ಅದುವೇ ಧರ್ಮದ ನೈಜಫಲವಾಗಿದೆ. ಪ್ರವಾದಿ ಮುಹಮ್ಮದ್(ಸ) 'ನನ್ನನ್ನು ಕಳಿಸಲಾಗಿರುವುದೇ ಸದಾಚಾರದ ಪರಿಪೂರ್ಣತೆಗಾಗಿ' ಎಂದು ಹೇಳಿದ್ದರು. ಆದರೆ ಇಷ್ಟು ಮಹತ್ವವುಳ್ಳ ಒಂದು ಅಂಶವೂ ಸಾಮೂಹಿಕತೆಯ ರೂಪ ತಳೆಯದ ಸಮಾಜದಲ್ಲಿ ಮೂಲೆ ಗುಂಪಾಗಿಯೇ ಉಳಿಯುತ್ತದೆ. ಎಷ್ಟೆಂದರೆ ಸಾಮೂಹಿಕತೆಯಿಂದ ಮುಕ್ತವಾದ ಬದುಕು ತನ್ನ ಅಂತಿಮ ರೂಪವಾಗಿರುವ ಪೂರ್ಣ ಏಕಾಂತಕ್ಕೆ ತಲುಪಿದಾಗ, ಅಲ್ಲಿ ಪ್ರಾಮಾಣಿಕತೆ, ಸತ್ಯನಿಷ್ಠೆ, ಸಚ್ಚಾರಿತ್ರ್ಯ, ವಚನ ಪಾಲನೆ, ಲಜ್ಜೆ, ಕರುಣೆ, ವಾತ್ಸಲ್ಯ, ಸದಾಕಾಂಕ್ಷೆ, ತ್ಯಾಗ, ತಾಳ್ಮೆ, ಸ್ಥಿತಪ್ರಜ್ಞೆ, ಗಾಂಭೀರ್ಯ, ಮೃದುತ್ವ, ಸೌಜನ್ಯ, ಔದಾರ್ಯ, ಸವಿನುಡಿ ಮುಂತಾದ ಅಸಂಖ್ಯ ಮಾನವೀಯ ವೈಶಿಷ್ಟ್ಯಗಳು, ಇಸ್ಲಾಮೀ ಸದಾಚಾರಗಳು ಮತ್ತು ಸತ್ಯವಿಶ್ವಾಸದ ಲಕ್ಷಣಗಳು ಕೇವಲ ಕಲ್ಪನೆಗಳಾಗಿ ಮಾತ್ರ ಉಳಿದು ಬಿಡುತ್ತವೆ. ಏಕೆಂದರೆ ಇವೆಲ್ಲಾ ಮನುಷ್ಯರು ಪರಸ್ಪರರೊಂದಿಗೆ ವ್ಯವಹರಿಸುವಾಗ ಮಾತ್ರ ಅಭಿವ್ಯಕ್ತಗೊಳ್ಳಬಹುದಾದಂತಹ ವೈಶಿಷ್ಟ್ಯಗಳು.

ವಾಸ್ತವದಲ್ಲಿ ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನೊಂದಿಗೆ ಅಥವಾ ಒಂದು ಗುಂಪು ಇನ್ನೊಂದು ಗುಂಪಿನೊಂದಿಗೆ ವ್ಯವಹರಿಸುವಾಗ ಪಾಲಿಸಬೇಕಾದ ನೀತಿಯೇ ಸದಾಚಾರ. ಒಬ್ಬ ವ್ಯಕ್ತಿ ಬೇರೆ ಯಾರೊಂದಿಗೂ ಸಂಪರ್ಕವೇ ಇಲ್ಲದಂತಹ ಏಕಾಂತವನ್ನು ಅರಸಿ ಹೋದರೆ ಅವನಿಗೆ ಅಲ್ಲಿ ತನ್ನ ಧರ್ಮದ ಈ ಎಲ್ಲ ಅಪೇಕ್ಷಿತ ಗುಣಗಳನ್ನು ವ್ಯಾವಹಾರಿಕವಾಗಿ ಅನುಷ್ಠಾನಿಸುವ ಅವಕಾಶವೇ ಎಲ್ಲಿ ಸಿಗುತ್ತದೆ? ಅದೇ ರೀತಿ, ಒಂದು ಸಂಘಟಿತ ಸಮಾಜವಾಗಲೀ, ಒಂದು ಸಮಗ್ರ ಸಾಮೂಹಿಕ ವ್ಯವಸ್ಥೆಯಾಗಲೀ ಇಲ್ಲದಲ್ಲಿ ಒಬ್ಬ ಮುಸಲ್ಮಾನನಿಗೆ ಇಸ್ಲಾಮ್ ತನಗೆ ಕಲಿಸುವಂತಹ ಸಾಮಾಜಿಕ ಮತ್ತು ಅಂತಾರಾಷ್ಟ್ರೀಯ ನೈತಿಕ ನಿಯಮಗಳನ್ನು ಪ್ರದರ್ಶಿಸುವ ಅವಕಾಶವೇ ಎಲ್ಲಿ ಸಿಗುತ್ತದೆ?

4. ಸಾಮೂಹಿಕತೆಯ ಅನುಪಸ್ಥಿತಿಯು, ಒಬ್ಬ ಮುಸಲ್ಮಾನನ ಸಾಮಾಜಿಕ ಮತ್ತು ನಾಗರಿಕ ಬದುಕಿನ ಮೇಲಂತೂ ಅತ್ಯಂತ ಗಾಢವಾದ ದುಷ್ಪರಿಣಾಮ ಬೀರುತ್ತದೆ. ಇಂಥ ಸ್ಥಿತಿಯಲ್ಲಿ ಅವನ ಬದುಕಿನ ವಿವಿಧ ಕ್ಷೇತ್ರಗಳಿಂದ ಇಸ್ಲಾಮಿನ ವಿದಾಯ ಆಗುವುದರ ಜೊತೆಗೇ ಅಲ್ಲಿ ಕುಫ್ರ್ (ಸತ್ಯ ಧಿಕ್ಕಾರ)ನ ಆಗಮನವೂ ಆಗುತ್ತದೆ. ಇದೊಂದು ಸುವ್ಯಕ್ತ ಮಾತ್ರವಲ್ಲ ಅನುಭವಸಿದ್ಧ ವಾಸ್ತವಿಕತೆ. ಒಬ್ಬ ಮುಸಲ್ಮಾನನು ಯಾವುದಾದರೂ ಗುಹೆಗೆ ಹೋಗಿ ಸನ್ಯಾಸ ಮಾಡದೆ, ಜನವಾಸವಿರುವಲ್ಲೇ ಬದುಕುತ್ತಿದ್ದಾನೆಂದಾದರೆ ಆಗಲೂ ಅಲ್ಲಿ ಇಸ್ಲಾಮಿನ ಅಪೇಕ್ಷಿತ ಸಾಮೂಹಿಕ ವ್ಯವಸ್ಥೆ ಇಲ್ಲದಿದ್ದರೆ ಅವನು ಅನಿವಾರ್ಯವಾಗಿ ಒಂದು ಇಸ್ಲಾಮೇತರ ವ್ಯವಸ್ಥೆಯಡಿಯಲ್ಲಿ ಬದುಕುವ ಮುಸಲ್ಮಾನನ ಕನಿಷ್ಠ ಪಕ್ಷ ದೊಡ್ಡ ಸಾಮೂಹಿಕ ವ್ಯವಹಾರಗಳು ಖಂಡಿತವಾಗಿಯೂ ಇಸ್ಲಾಮೇತರ ವಿಧಿ ವಿಧಾನಗಳಲ್ಲೇ ನಡೆಯುವುವು. ಇಷ್ಟು ಮಾತ್ರವಲ್ಲ, ಅಂಥ ಸ್ಥಿತಿಯಲ್ಲಿ ಅವನ ವೈಯಕ್ತಿಕ ನಿಯಮಗಳು (Personal Law) ಕೂಡಾ ತನ್ನ ನಿಜರೂಪದಲ್ಲಿ ಉಳಿಯಲಾರವು ಎಂದು ಹೇಳಿದರೂ ಅತಿಶಯವೆನಿಸದು.

ಈ ಎಲ್ಲ ಕ್ಷೇತ್ರಗಳಲ್ಲಿ ಇಷ್ಟರ ಮಟ್ಟಿಗೆ ಒಬ್ಬ ವ್ಯಕ್ತಿಯ ಬದುಕು ಇಸ್ಲಾಮಿನಿಂದ ಸಂಪರ್ಕ ಕಡಿದುಕೊಳ್ಳುವುದು ಎಂದರೆ ಅದೇನೂ ಸಾಮಾನ್ಯ ಸಂಗತಿಯಲ್ಲ. ಈ ಅವಸ್ಥೆಯನ್ನು 'ಆ ಮಟ್ಟಿಗೆ ಇಸ್ಲಾಮಿನಿಂದ ದೂರವಾಗಿರುವುದು' ಎಂದೋ 'ಧರ್ಮಾನುಸರಣೆಯಲ್ಲಿ ಘೋರ ಲೋಪ' ಎಂದೋ ಕರೆದರೆ ಅವೆಲ್ಲಾ ಗಂಭೀರ ಆರೋಪಗಳೆಂದು ದೂಷಿಸುವಂತಿಲ್ಲ. ಪ್ರವಾದಿವರ್ಯರು(ಸ) ಮಹಿಳೆಯರನ್ನು 'ನಾಕಿಸಾತು ದೀನಿನ್' (ಅಪೂರ್ಣ ಧರ್ಮದವರು) ಎಂದು ಕರೆದಿದ್ದರು. ಇದಕ್ಕೆ ಕಾರಣ ಕೊಡುತ್ತಾ 'ಆಕೆ ಋತುಮತಿಯಾದಾಗ ಆಕೆಗೆ ನಮಾಝ್ ನಿರ್ವಹಿಸಲಿಕ್ಕಾಗಲೀ, ಉಪವಾಸ ಆಚರಿಸಲಿಕ್ಕಾಗಲೀ ಸಾಧ್ಯವಾಗುವುದಿಲ್ಲ' ಎಂದು ಹೇಳಿದ್ದರು. (ಬುಖಾರಿ, ಕಿತಾಬುಲ್ ಹೈಝ್) ಪ್ರತಿ ತಿಂಗಳು ಕೇವಲ ಕೆಲವು ದಿನ ಮಹಿಳೆ ನಮಾಝ್ ನಿರ್ವಹಿಸುವ ಮತ್ತು ಉಪವಾಸ ಆಚರಿಸುವ ಸ್ಥಿತಿಯಲ್ಲಿರುವುದಿಲ್ಲ ಎಂಬ ಕಾರಣಕ್ಕಾಗಿ ಅವಳ ಧರ್ಮ 'ಅಪೂರ್ಣ' ಎಂದು ವರ್ಣಿಸಲ್ಪಡುತ್ತದೆಂದಾದರೆ, ಸಂಪೂರ್ಣ ಜೀವನದಲ್ಲಿ ಒಬ್ಬ ಮುಸಲ್ಮಾನನು ಧರ್ಮದ ಇಷ್ಟು ಮಹತ್ವದ ಹಲವಾರು ಆದೇಶಗಳನ್ನು

ಲಿಸಲಾಗದ ಸ್ಥಿತಿಯಲ್ಲಿದ್ದರೆ ಅವನ ಧರ್ಮವನ್ನು ಯಾವ ದರ್ಜೆಗೆ ಸೇರಿಸಬೇಕು?
ೇಷತಃ ಮಹಿಳೆಯ ಪ್ರಸ್ತುತ ಪರಿಸ್ಥಿತಿ ಒಂದು ಶುದ್ಧ ನೈಸರ್ಗಿಕ, ಶಾರೀರಿಕ, ಜನ್ಮಸಿದ್ಧ ಮತ್ತು
ಪೂರ್ಣ ಅನಿವಾರ್ಯತೆಯ ಅವಸ್ಥೆಯಾಗಿದ್ದು, ಅದನ್ನು ತಡೆಯುವುದಾಗಲೀ ಅಥವಾ
ವ್ಯವಸ್ಥೆಯಿಂದ ಪ್ರಯತ್ನಪೂರ್ವಕ ಹೊರಬರುವುದಾಗಲೀ ಅವಳ ಅಧಿಕಾರದಲ್ಲಿಲ್ಲ ಮತ್ತು
ಕಾರಣಕ್ಕಾಗಿ ಆ ಅವಸ್ಥೆಗೆ ಯಾವ ರೀತಿಯಲ್ಲೂ ಅವಳು ಸ್ವತಃ ಜವಾಬ್ದಾರಳಲ್ಲ ಎಂಬ
ಸ್ತವಿಕತೆಯನ್ನು ಗಮನದಲ್ಲಿಟ್ಟುಕೊಂಡು ಆಲೋಚಿಸಿ! ಇದಕ್ಕೆ ಹೋಲಿಸಿದರೆ ಸಾಮೂಹಿಕ
ುಕಿನಿಂದ ದೂರವಿರುವ ಅಥವಾ ಅದರಿಂದ ವಂಚಿತರಾಗಿರುವ ಮುಸಲ್ಮಾನರ ಮಟ್ಟಿಗೆ
ರ ಆ ಅವಸ್ಥೆಯು ಇಂತಹ ನೈಸರ್ಗಿಕ ಅಥವಾ ಜನ್ಮ ಸಿದ್ಧ ಪ್ರಕ್ರಿಯೆ ಆಗಿರುವುದಂತಿರಲಿ,
ು ಅದರ ಮಟ್ಟಿಗೆ ಅನಿವಾರ್ಯವೂ ಆಗಿರುವುದಿಲ್ಲ, ಕೆಲವೊಂದು ಸಂದರ್ಭದಲ್ಲಿ ಅಂತಹ
ಸ್ಥೆ ಹುಟ್ಟಿಕೊಳ್ಳುವುದಕ್ಕೆ ಸ್ವತಃ ಅವರೇ ಜವಾಬ್ದಾರರಾಗಿರುತ್ತಾರೆ.

ಹೀಗಿರುವಾಗ ಆ ಅವಸ್ಥೆಯಲ್ಲಿನ ಅವರ ಧರ್ಮವನ್ನು 'ಅಪೂರ್ಣ'ವೆಂದು
ಕಲಾಗದೇ? ಕೇವಲ ತಾವು ಬದುಕುತ್ತಿರುವುದು ಸಾಮೂಹಿಕ ವ್ಯವಸ್ಥೆ ಇಲ್ಲದ ಅಸಂಘಟಿತ
ಾಜದಲ್ಲಿ ಎಂಬ ಕಾರಣಕ್ಕಾಗಿ ಅವರು ಧರ್ಮದ ಯಾವೆಲ್ಲಾ ಆದೇಶಗಳನ್ನು ಪಾಲಿಸದೆ
ುತ್ತಾರೋ ಆ ಮಟ್ಟಿಗಾದರೂ ಅವರನ್ನು 'ಧರ್ಮದಿಂದ ವಿಮುಕ್ತರು' ಎಂದು ಪರಿಗಣಿಸಿದರೆ
ುದೀತೇ? ನ್ಯಾಯವಾಗಿ ಹೇಳಬೇಕೆಂದರೆ, ಅವರ ಧರ್ಮವನ್ನು ಅದು ಸಾಮಾನ್ಯ
ಟ್ಟದಲ್ಲಿ ಮಾತ್ರ 'ಅಪೂರ್ಣ' ಎನ್ನದೆ ಅದು 'ಅಸಾಮಾನ್ಯ ಮಟ್ಟದಲ್ಲಿ ಅಪೂರ್ಣವಾಗಿದೆ'
ನೂ ಅವರು ಕೇವಲ 'ಒಂದು ವಿಶಿಷ್ಟ ಮಿತಿಯಲ್ಲಿ ಧರ್ಮದಿಂದ ಬೇರ್ಪಟ್ಟಿದ್ದಾರೆ' ಎನ್ನದೆ
ರ ಬದುಕಿನ ಹೆಚ್ಚಿನ ಭಾಗವು ಧರ್ಮಕ್ಕೆ ಸಂಬಂಧಿಸಿದಂತೆ ವಿವಾದಾಸ್ಪದವಾಗಿದೆ ಎಂದು
ಕಬೇಕಾಗುತ್ತದೆ.

## ಧಾರ್ಮಿಕ ಪ್ರಜ್ಞೆಯ ನಿರಂತರ ಅವನತಿ

ಇಸ್ಲಾಮೀ ಸಮಾಜ ವ್ಯವಸ್ಥೆಯಿಂದ ವಿಮುಕ್ತವಾದ ಜೀವನಕ್ಕೆ ಇರುವ ತೃತೀಯ ಅತಿ
ಷ್ಟ ವಿಪತ್ತೆಂದರೆ, ಅಂಥ ವಾತಾವರಣದಲ್ಲಿ ಮಿಥ್ಯ ಶಕ್ತಿಗಳು ಸತ್ಯವಿಶ್ವಾಸಿಯ ವಿಶ್ವಾಸ ಮತ್ತು
ರ್ಮಪ್ರಜ್ಞೆಯನ್ನು ತಮ್ಮ ನಿರಂತರ ದಾಳಿಗೆ ಒಳಪಡಿಸುತ್ತವೆ. ಇದರಿಂದ ಕೊನೆಗೊಮ್ಮೆ
ಿಶ್ವಾಸಿಯ ಧಾರ್ಮಿಕ ಪ್ರಜ್ಞೆಯೇ ನಿಸ್ತೇಜಗೊಳ್ಳುವ ಸಾಧ್ಯತೆ ಇರುತ್ತದೆ. 'ಅಧಿಕಾರ'ವು
ಥ್ಯ ಶಕ್ತಿಗಳಿಗೆ, ತಮ್ಮದಾದ ವ್ಯವಸ್ಥೆಯಿಂದ ವಂಚಿತ ಮುಸಲ್ಮಾನರ ಮೇಲೆ ಪ್ರಸ್ತುತ ಆಕ್ರಮಣ
ಸಲು ಮುಕ್ತ ಅವಕಾಶವನ್ನು ಒದಗಿಸಿಕೊಡುತ್ತದೆ.

ಈಗಾಗಲೇ ಹೇಳಿರುವಂತೆ, ಅಪೇಕ್ಷಿತ ಇಸ್ಲಾಮೀ ಸಾಮೂಹಿಕತೆ ಅಥವಾ ಸಮಾಜ
ಸ್ಥೆಯು ಅನುಷ್ಠಾನದಲ್ಲಿಲ್ಲದ ಒಂದು ನಾಡಿನಲ್ಲಿ ಒಬ್ಬ ಮುಸಲ್ಮಾನ ಬದುಕುತ್ತಿದ್ದರೆ ಅವನು
ಾಗಿ ಒಂದು ಇಸ್ಲಾಮೇತರ ವ್ಯವಸ್ಥೆಯಡಿ ಬದುಕುತ್ತಿದ್ದಾನೆಂದೇ ಅರ್ಥ. ಏಕೆಂದರೆ

ಆ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಸಾಮಾಜಿಕ ವ್ಯವಹಾರಗಳೆಲ್ಲಾ 'ಮಿಥ್ಯ'(ಬಾತಿಲ್
ಬುನಾದಿಗಳಲ್ಲೇ ನಡೆಯುತ್ತವೆ. ಅಲ್ಲಿ ಅಲ್ಲಾಹನನ್ನು ಬಿಟ್ಟು ಇತರರನ್ನು ಪರಮೋ
ಅಧಿಕಾರಿಯೆಂದೂ, ನೈಜ ಕಾನೂನುದಾತನೆಂದೂ ಅಂಗೀಕರಿಸಲಾಗುತ್ತದೆ. ಅಲ್ಲಿ ನೈತಿಕತೆ
ಸಾಮಾಜಿಕ ಮೌಲ್ಯಗಳನ್ನು ದೇವ ಗ್ರಂಥ ಮತ್ತು ಪ್ರವಾದಿ ನಿಯಮದ ಬದಲು ಬೇರಾವುದ
ಆಧಾರದಲ್ಲಿ ನಿರ್ಧರಿಸಲಾಗುತ್ತದೆ. ಅಲ್ಲಿ ಮನುಷ್ಯ ಪ್ರಾತಿನಿಧ್ಯ(ಖಿಲಾಫತ್)ದ ಕಲ್ಪನೆ
ಒಂದು ಅಸಾಂವಿಧಾನಿಕ ಕಲ್ಪನೆಯಾಗಿರುತ್ತದೆ. ಅಲ್ಲಿ ಮುಸಲ್ಮಾನರಿಗೆ ತಮ್ಮ ವಿಶಾಲ ಸಾಮಾ
ವ್ಯವಹಾರಗಳಲ್ಲೂ ಇಸ್ಲಾಮೀ ನಿಯಮಗಳನ್ನು ಪಾಲಿಸಲು ಅವಕಾಶವಿರುವುದಿಲ್ಲ.
ಒಳಿತು (ಮಅ್‌ರೂಫ್) ಮತ್ತು ಕೆಡುಕು(ಮುನ್‌ಕರ್)ಗಳನ್ನು ನಿಶ್ಚಯಿಸುವಲ್ಲಿ ಶರೀಅ
ತೀರ್ಮಾನವೇ ಅಂತಿಮವಾಗಿರುವುದಿಲ್ಲ. 'ಒಳಿತು' ಎಂದು ಇಸ್ಲಾಮ್ ಪ್ರತಿಪಾದಿಸುವ ಎಷ
ಅಂಶಗಳು ಅಲ್ಲಿ ಕೆಡುಕು ಎಂದೂ, 'ಕೆಡುಕು' ಎಂದು ಗುರುತಿಸುವ ಎಷ್ಟೋ ಅಂಶ
'ಒಳಿತು' ಎಂದೂ ಪರಿಗಣಿಸಲ್ಪಡುತ್ತದೆ. ಅಲ್ಲಿ ಪರಸ್ಪರ ಮಾನವೀಯ ಸಂಬಂಧಗಳಾಗ
ಅಂತಾರಾಷ್ಟ್ರೀಯ ಸಂಬಂಧಗಳಾಗಲೀ ಇಸ್ಲಾಮ್ ಪ್ರತಿಪಾದಿಸುವಂತಹ ನ್ಯಾಯ ಮ
'ಒಳಿತಿಗೆ ಸಹಕಾರ' ಎಂಬ ನೀತಿಗಳ ಬದಲು ಯಾವುದಾದರೂ ಕುಲ, ವರ್ಗ, ದೇ
ಪ್ರಾಂತ್ಯ, ಪಂಗಡ ಅಥವಾ 'ಇಸ್ಲಾಮ್'ನ ಭೌತಿಕ ಹಿತಾಸಕ್ತಿಗಳ ಆಧಾರದಲ್ಲಿ ರೂಪಿಸಲ್ಪಡುತ್ತ
ಅಲ್ಲಿ ನ್ಯಾಯಾಲಯಗಳು ಶರೀಅತ್ ನಿಯಮಗಳ ಪ್ರಕಾರ ತೀರ್ಪು ಕೊಡುವ ಹೊ
ಹೊತ್ತಿರುವುದಿಲ್ಲ, ಮಾತ್ರವಲ್ಲ, ಆ ವ್ಯವಸ್ಥೆಯಲ್ಲಿ ಮುಸಲ್ಮಾನರು ತಮ್ಮ ವೈಯಕ್ತಿಕ ಜೀವ
ಸಂಬಂಧಿಸಿದ ವಿಷಯಗಳಲ್ಲೂ ಇಸ್ಲಾಮೀ ಕಾನೂನಿನ ಪ್ರಕಾರ ನಡೆದುಕೊಳ್ಳಲು ಪೂರ್ಣವ
ಸ್ವತಂತ್ರರಾಗಿರುವುದಿಲ್ಲ.

ಇಂಥ ವ್ಯವಸ್ಥೆಯೊಂದರ ಅಡಿಯಲ್ಲಿ ಬದುಕುವ ಒಬ್ಬ ಮುಸ್ಲಿಮನ ಮನೋ
ಏನಾಗಬಹುದು? ಅವನ ಮನೋಸ್ಥಿತಿ ಆರಂಭದಲ್ಲಿ ಹೇಗಿದ್ದೀತು? ಮತ್ತು ಕೊನೆಗೆ ಅ
ಯಾವ ರೂಪ ತಾಳೀತು? ಎಂಬುದನ್ನು ಊಹಿಸಿ ನೋಡಿ.

ಖಂಡಿತವಾಗಿಯೂ ಮೊದ ಮೊದಲು ತನ್ನನ್ನು ಇಂಥ ವ್ಯವಸ್ಥೆಯೊಂದು ಸುತ್ತುವರಿದ
ವುದನ್ನು ಕಂಡು ಒಬ್ಬ ಮುಸಲ್ಮಾನನ ಧಾರ್ಮಿಕ ಸ್ಫೂರ್ತಿಯು ಚಡಪಡಿಸಬಹುದು.
ವಾತಾವರಣದಲ್ಲಿ ಅವನಿಗೆ ಉಸಿರುಗಟ್ಟಿದಂತಾಗಬಹುದು. ತನ್ನನ್ನು ಕೆಸರಿನ ಚರಂ
ಎಸೆಯಲಾಗಿದೆ ಎಂಬಂತೆ ಅನಿಸಬಹುದು. ಆದರೆ ಒಬ್ಬ ವ್ಯಕ್ತಿ ಎಷ್ಟೇ ಮಡಿವಂತನಾಗಿದ್ದ
ಅವನನ್ನು ಕೊಳಕು ಮತ್ತು ದುರ್ನಾತ ತುಂಬಿರುವ ಒಂದು ಕೊಠಡಿಯಲ್ಲಿ ಕೂಡಿ ಹಾಕಿ
ಆ ದುರ್ನಾತ ಮತ್ತು ಕೊಳಕಿನ ಬಗ್ಗೆ ಅವನ ಅಸಹನೆ ಕೆಲವು ದಿನ ಮಾತ್ರ ಉಳಿದೀ
ಕ್ರಮೇಣ ಅವನ ಅತೃಪ್ತಿ, ಕಸಿವಿಸಿಗಳೆಲ್ಲಾ ತಣಿಯುತ್ತಾ ಹೋಗುವುವು. ಕೊನೆಗೋ
ಅವನ ಘ್ರಾಣೇಂದ್ರಿಯಕ್ಕೆ ಆ ದುರ್ನಾತವೆಲ್ಲಾ ಒಗ್ಗಿ ಹೋಗುವುದು. ಆಗ ಅವನು ಕೇ
ವೈಚಾರಿಕವಾಗಿ ಮಾತ್ರ ಕೊಳಕನ್ನು ಕೊಳಕೆಂದು ಗುರುತಿಸುವನೇ ಹೊರತು ಹಿಂದಿನಂತೆ ಆ
ಅತೃಪ್ತಿ ತೋರುತ್ತಾ ಇರಲಾರನು. ಮನುಷ್ಯ ಮನಃಶಾಸ್ತ್ರವನ್ನು ಅಭ್ಯಸಿಸಿದವರಿಗೆ ಈ ಪ್ರ

ಕಳ ಸ್ವಾಭಾವಿಕ ವೆನಿಸುತ್ತದೆ. ಏಕೆಂದರೆ ಇದು ಮನಃಶಾಸ್ತ್ರದ ಪ್ರಾಥಮಿಕ ಪಾಠಗಳಲ್ಲೊಂದು. ನಿಯಮ ಧರ್ಮದ ವಿಷಯದಲ್ಲೂ ಬದಲಾಗುವುದಿಲ್ಲ. ಬೇಕಿದ್ದರೆ ನೀವು ಲಕ್ಷದಲ್ಲಿ ಬ್ಬರನ್ನು ಈ ನಿಯಮದಿಂದ ಹೊರತುಪಡಿಸಬಹುದು. ಆದರೆ ತರ್ಕ ಮತ್ತು ಅನುಭವದ ಾರದಲ್ಲಿ ನೋಡಿದರೆ 99%ಕ್ಕಿಂತ ಹೆಚ್ಚಿನ ಜನರಿಗೆ ಈ ನಿಯಮ ಅನ್ವಯಿಸುತ್ತದೆ.

ಅಂದರೆ, ಮುಸ್ಲಿಮ್ ಸಮುದಾಯವು ತನ್ನ ಸಂಘಟಿತ ವ್ಯವಸ್ಥೆಯನ್ನು ಕಳಕೊಂಡಾಗ ಥವಾ ಅದನ್ನು ಉದುರಲು ಬಿಟ್ಟು ಯಾವುದಾದರೂ ಇಸ್ಲಾಮೇತರ ವ್ಯವಸ್ಥೆಯನ್ನು ಟ್ಟ ಮೇಲೆ ಹೇರಿಕೊಂಡಾಗ ಸತ್ಯವಿಶ್ವಾಸಿಗಳ ಪಾಲಿಗೆ ಅವರ ವಾಸ ಸ್ಥಾನಗಳು ಮುಳ್ಳಿನ ಂಚಗಳಾಗಿ ಬಿಡುವವು. ತಮ್ಮ ಹಿಂದೆ ಮುಂದೆ, ಸುತ್ತ-ಮುತ್ತಲೆಲ್ಲಾ ಮೈಸುಟ್ಟು ಬಿಡುವ ಸಾಯನಿಕ ಬಾಂಬುಗಳು ಮೇಲಿಂದ ಮೇಲೆ ಸಿಡಿಯುತ್ತಿವೆಯೋ ಎಂಬಂತೆ ಅವರಿಗೆ ಸವಾಗುವುದು. ಇಂಥ ಅವಸ್ಥೆಯಲ್ಲಿ ಅವರು ಸಹಜವಾಗಿಯೇ ಗಲಿಬಿಲಿಗೊಂಡು, ಲ್ಲಿಂದ ತಪ್ಪಿಸಿಕೊಂಡು ದೂರ ಓಡಲು ತಮ್ಮ ಸುತ್ತಲಿನ ನಾಲ್ಕು ದಿಕ್ಕುಗಳೆಡೆಗೆ ಕಣ್ಣೋಡಿಸು ು. ಗಾಬರಿಯಲ್ಲಿ ಮೈಪರಚಿಕೊಳ್ಳುವರು. ಆದರೆ ಆಗಲೇ ಬದುಕಿನ ಸಾಮೂಹಿಕ ಕ್ರವನ್ನು ಸಾದ್ಯಂತ ಆವರಿಸಿಕೊಂಡ ವ್ಯವಸ್ಥೆಯು ಕೇವಲ ಈ ಮಾನಸಿಕ ಕ್ಷೋಭೆಯನ್ನು ನೆಗೆ ತೆಗೆದುಕೊಂಡು ಅಲ್ಲಿಂದ ಜಾಗ ಖಾಲಿ ಮಾಡುವುದಿಲ್ಲ ಎಂಬುದು ವ್ಯಕ್ತ. ಅದಂತೂ ಕಳ ಧೈರ್ಯ-ಸ್ಥೈರ್ಯಗಳಿಂದ, ಅಧಿಕಾರದ ಮೇಲಿನ ತನ್ನ ಹಿಡಿತವನ್ನು ಬಲಪಡಿಸುತ್ತಲೇ ಗುವುದು. ಆಳಲ್ಪಡುತ್ತಿರುವುದು ಮುಸ್ಲಿಮ್ ಸಮುದಾಯವೇ ಆಗಿದ್ದರೂ ಆಳುವ ವಸ್ಥೆಯು ತನ್ನ ಇಸ್ಲಾಮೇತರ ಗುಣ-ಸ್ವಭಾವ ಮತ್ತು ಸ್ವರೂಪಕ್ಕೆ ತಕ್ಕಂತೆ ತನ್ನದೇ ಆದ ಾರ-ವಿಚಾರ, ಸಂಸ್ಕೃತಿ ಮತ್ತು ಕಾನೂನುಗಳ ಪ್ರಕಾರ ಆಡಳಿತ ನಡೆಸುವುದು.

ಕಾಲಕ್ರಮೇಣ ಜನರು ಈ ಬಗೆಯ ಆಡಳಿತಗಳಿಗೆ ಪರಿಚಿತರಾಗಿ ಬಿಡುವರು. ಮಾನಸಿಕ ೀಭೆ, ಅತೃಪ್ತಿ, ಅಸಹನೆಗಳ ಮೇಲೆಲ್ಲಾ ಕ್ರಮೇಣ ದಣಿವು ಮತ್ತು ಬೇಸರವು ಆವರಿಸುವುದು. ಮಾಧಾನವು ದುಃಖದ ಸ್ತರಕ್ಕೆ, ಬಂಡಾಯದ ಬೆಂಕಿಯು ನಿರಾಶೆಯ ಬೂದಿಯ ರೂಪಕ್ಕೆ ದುಬಿಡುವುದು. ಈ ಹಂತವೂ ಕಳೆದ ಬಳಿಕ ಜನಮನಗಳು ಮೆಲ್ಲಮೆಲ್ಲನೆ ಧಾರ್ಮಿಕ ಕ್ಷೆಯಿಂದಲೇ ಮುಕ್ತವಾಗ ತೊಡಗುವುವು. ಮನಸ್ಸು 'ಇಸ್ಲಾಮೇತರ' ವ್ಯವಸ್ಥೆಗೆ ಒಗ್ಗಿಕೊಳ್ಳ ಡಗುವುದು. ಕಾಲಕ್ರಮೇಣ ಮಾನಸಿಕ ಮತ್ತು ಭಾವನಾತ್ಮಕ ಸಂಘರ್ಷದ ಸ್ಥಾನವನ್ನು ಪೂರ್ಣ 'ಸಹಿಷ್ಣುತೆ ಮತ್ತು ಹೊಂದಾಣಿಕೆ'ಗಳು ಆವರಿಸಿಕೊಳ್ಳುವವು. 'ಇಸ್ಲಾಮೇತರ' ವಸ್ಥೆಗೆ ಮುಸಲ್ಮಾನರ ಸಕ್ರಿಯ ವಿರೋಧ ಮೆಲ್ಲ ಮೆಲ್ಲನೆ ಮಾಯವಾಗಿ ಬಿಡುವುದು.

ಇದು ಮೂರನೆಯ ಹಂತವಾದರೆ ನಾಲ್ಕನೆಯ ಮತ್ತು ಅಂತಿಮ ಹಂತವೂ ಇದರ ಗೇ ಬಂದು ಬಿಡುತ್ತದೆ. ಆ ಹಂತದಲ್ಲಿ ಮುಸಲ್ಮಾನರು ಒಂದೊಮ್ಮೆ 'ಅನುಚಿತ'ವೆಂದು ಗಣಿಸಿದ್ದು ಮಿಥ್ಯ ವ್ಯವಸ್ಥೆಯನ್ನೇ 'ಉಚಿತ'ವೆಂದು ಪರಿಗಣಿಸಲಾರಂಭಿಸುವರು. ತನ್ನ ರ್ಮವನ್ನು ದೇಶಭ್ರಷ್ಟಗೊಳಿಸಿದ ಅಥವಾ ಕನಿಷ್ಠ ಪಕ್ಷ ಗೃಹ ಬಂಧನಕ್ಕೆ ಒಳಪಡಿಸಿದ ವ್ಯವಸ್ಥೆಗೇ

ಮುಸಲ್ಮಾನನು ಡೊಗ್ಗುಸಲಾಮು ಹಾಕ ತೊಡಗುವನು. ಆ ವ್ಯವಸ್ಥೆಯಲ್ಲೇ ತನಗಾಗಿ ಗೌರವ ಸ್ಥಾನ ಹುಡಕಲಾರಂಭಿಸುವನು. ಅದರ ಚಾಕರಿ ಮಾಡುವುದರಲ್ಲೇ ಧನ್ಯತೆ ಕಾಣುವನು. ವ್ಯವಸ್ಥೆಯ ಪಲ್ಲಕ್ಕಿ ಹೊರುವುದಕ್ಕಾಗಿ ಅವನೂ ಸ್ಪರ್ಧೆ ನಡೆಸುವನು. ಅವನು ಮುಸಲ್ಮಾನ ಆಗಿರುವನಾದರೂ ಇಸ್ಲಾಮೇತರ ವ್ಯವಸ್ಥೆಯ ವಿರುದ್ಧ ಅವನು ಅಸಮಾಧಾನದ ಒಂ ಮಾತನ್ನೂ ಹೇಳಲಾರನು.

ಮನುಷ್ಯ ಈ ಭೂಮಿಯಲ್ಲಿ ಅಲ್ಲಾಹನ ಪ್ರತಿನಿಧಿ. ಅವನ ಆದೇಶ ಮ ಇಚ್ಛೆಯ ಪ್ರಕಾರ ಲೋಕ ವ್ಯವಸ್ಥೆಯನ್ನು ನಡೆಸುವುದು ಅವನ ಕರ್ತವ್ಯ. ಅಲ್ಲಾಹ ಪರಮಾಧಿಕಾರಿಯಾಗಿದ್ದು ಅವನೇ ಕಾನೂನುದಾತನಾಗಿದ್ದಾನೆ. ಇಸ್ಲಾಮ್ ಒಂದು ಸಂಪೂರ ಜೀವನ ವ್ಯವಸ್ಥೆ. ಮನುಕುಲದ ಇಹ-ಪರ ವಿಮೋಚನೆಯೂ ಆ ವ್ಯವಸ್ಥೆಯ ಅನುಸ ಯನ್ನೇ ಅವಲಂಬಿಸಿದೆ ಇತ್ಯಾದಿ ಉನ್ನತೋನ್ನತ ಸತ್ಯಗಳನ್ನು ಧಾರ್ಮಿಕ ಸಭೆ ಸಮಾರಂಭಗ ಮಾತ್ರ ಅಭಿಮಾನಪೂರ್ವಕವಾಗಿ ಹೇಳಲಾಗುವುದು. ಆದರೆ ಜಗತ್ತಿನ ವಿಶಾಲ ಕಾಯ ಕ್ಷೇತ್ರದಲ್ಲಿ ಮುಸ್ಲಿಮ್ ಸಮಾಜವು, ಅವರುಳ್ಳ ನಾಡನ್ನು ಆಳುತ್ತಿರುವ ಇಸ್ಲಾಮೇತರ ಮ ಮಿಥ್ಯ ವ್ಯವಸ್ಥೆಯನ್ನು ತಿಳಿದುಕೊಂಡು ತಮ್ಮ ಬದುಕಿನ ಬಂಡಿಯನ್ನು ಸಾಗಿಸುವುದು.

ಇದೆಲ್ಲದಕ್ಕೆ ಜೀವಂತ ಸಾಕ್ಷಿಯಾಗಿರುವ ಮುಸ್ಲಿಮ್ ಸಮಾಜ ಇಂದು ನ ಕಣ್ಮುಂದೆಯೇ ಇರುವಾಗ ಈ ಕುರಿತು ಇನ್ನಷ್ಟು ವೈಚಾರಿಕ ಮತ್ತು ಸೈದ್ಧಾಂತಿಕ ತರ್ಕಗಳ ಮಂಡಿಸಬೇಕಾಗಿಲ್ಲ. ಪರಿಸ್ಥಿತಿಯ ಈ ಸ್ಪಷ್ಟ ಸ್ವರೂಪವನ್ನು ಚೆನ್ನಾಗಿ ಗ್ರಹಿಸಿಕೊಂಡು, ಮಿ ಆಡಳಿತ ಮತ್ತು ಇಸ್ಲಾಮೇತರ ವ್ಯವಸ್ಥೆಯು, ಸತ್ಯವಿಶ್ವಾಸಿಯ ಸೈದ್ಧಾಂತಿಕ ಸ್ಫೂರ್ತಿ ಮ ಧರ್ಮ ಪ್ರಜ್ಞೆಯನ್ನು ಯಾವ ರೀತಿ ಘಾಸಿಗೊಳಿಸಬಲ್ಲುದೆಂಬುದನ್ನು ಮತ್ತು ಅದರ ನಿರಂ ಪ್ರಹಾರಗಳು ಯಾವ ರೀತಿ ಮುಸಲ್ಮಾನನ ಧರ್ಮ ಪ್ರಜ್ಞೆಯನ್ನು ಮೊದಲು ಮೂರ್ಛಾವ ಮತ್ತು ಕೊನೆಗೆ ನಿರ್ಜೀವಾವಸ್ಥೆಗೆ ಒಯ್ಯಬಲ್ಲವು ಎಂಬುದನ್ನು ಊಹಿಸಿ ನೋಡಿ.

ಒಬ್ಬ ಮುಸಲ್ಮಾನನ ಧರ್ಮ ಮತ್ತು ವಿಶ್ವಾಸವು ಇಸ್ಲಾಮೀ ಸಾಮೂಹಿಕ ವ್ಯವಸ್ಥೆಯಿ ವಂಚಿತವಾಗಿ ಈ ರೀತಿಯ ಭೀಕರ ಆಕ್ರಮಣಕ್ಕೊಳಗಾಗುತ್ತಿದ್ದರೆ ಅಂಥ ಮುಸಲ್ಮಾನನು ಎ ಕಾಲ ಮತ್ತು ಎಷ್ಟರ ಮಟ್ಟಿಗೆ ನೈಜ ಮುಸ್ಲಿಮನಾಗಿ ಉಳಿಯಲು ಸಾಧ್ಯ? ಆದ್ದರಿಂದಲೇ ಶೈತಾ ಇತರ ಸಹಸ್ರ ಸಂಚುಗಳಿಗಿಂತ, ಮುಸಲ್ಮಾನರನ್ನು ಸಾಮೂಹಿಕ ಬದುಕಿನಿಂದ ವಂಚಿಸ ಸಂಚು ಹೆಚ್ಚು ಅಪಾಯಕಾರಿ ಎಂದು ಹೇಳಬೇಕಾಗುತ್ತದೆ. ಅವನು ಪ್ರತ್ಯಪ್ರತ್ಯೇಕವಾಗಿ ಒಬ್ಬೊ ಮುಸಲ್ಮಾನನ್ನು ಬೇಟೆಯಾಡಲು ಹೊರಡುವುದಾದರೆ ಪ್ರತಿಯೊಬ್ಬರಿಗಾಗಿ ಒಂದೊಂ ಪ್ರತ್ಯೇಕ ಹೊಂಡ ನಿರ್ಮಿಸಬೇಕಾಗುತ್ತಿತ್ತು. ಇದಕ್ಕೆ ಬದಲು ವಿಚ್ಛಿದ್ರತೆ ಮತ್ತು ಪ್ರತ್ಯೇಕತೆ ಎ ಒಂದು ದೊಡ್ಡ ಹೊಂಡ ತೋಡಿದ್ದರೆ ಆ ಒಂದೇ ಹೊಂಡವು ಭಾರೀ ಸಂಖ್ಯೆಯಲ್ಲಿ ಹೆಚ್ಚಿನ ಮುಸ್ಲಿಮರನ್ನು ಬೀಳಿಸಿ ಬಿಡಲು ಸಾಕಾಗುವುದು. ಆದ್ದರಿಂದಲೇ ಪ್ರವಾದಿ ಮುಹಮ್ಮದ್

ವರು, 'ಜಮಾಅತ್'(ಸಾಮೂಹಿಕತೆ)ನಿಂದ ವಂಚಿತರು ಅಥವಾ ಅದರಿಂದ ದೂರವುಳಿಯು ವರನ್ನು ಶೈತಾನನಿಗೆ ಬೇಗ ಎರೆಯಾಗುವ ಸುಲಭದ ಬಲಿಗಳೆಂದು ಬಣ್ಣಿಸಿದ್ದಾರೆ. ಈ ವಸ್ತು ಿಯನ್ನು ವಿವರಿಸಲು ಇದಕ್ಕಿಂತ ಉತ್ತಮ ವಿಶ್ಲೇಷಣೆ ಬೇರೆ ಅಗತ್ಯವಿಲ್ಲ.

## ಂಘಟಿತ ಬದುಕಿನ ಸತ್ಫಲಗಳು

ಅಸಂಘಟಿತ ಬದುಕು ಒಬ್ಬ ಮುಸಲ್ಮಾನನ ಧರ್ಮ ಮತ್ತು ನಿಷ್ಠೆಗಳಿಗೆ ಯಾವ ಬಗೆಯ ವ್ರ ಅಪಾಯಗಳನ್ನು ತಂದೊಡ್ಡಬಲ್ಲುದು ಮತ್ತು ಆವನನ್ನು ಶೈತಾನ್ ಯಾವ ರೀತಿ ತನ್ನ ತದಾಳಾಗಿ ಮಾಡುತ್ತದೆಂಬುದನ್ನು ನೋಡಿದೆವು. ಇನ್ನು ನಾವು ಸಂಘಟಿತ ಬದುಕು ುಸಲ್ಮಾನನಿಗೆ ಏನನ್ನು ಕೊಡುತ್ತದೆ ಎಂಬುದನ್ನು ನೋಡೋಣ. ಈ ಕುರಿತು ಪ್ರವಾದಿ ುಹಮ್ಮದ್(ಸ) ಹೇಳುತ್ತಾರೆ;

'ಸಂಘಟನೆಯ ಮೇಲೆ ಅಲ್ಲಾಹನ ಹಸ್ತವಿದೆ.' (ತಿರ್ಮಿದಿ ಭಾಗ – 2)

ಅರ್ಥಾತ್ ಸಂಘಟಿತ ಬದುಕು ಸಾಗಿಸುವ ಮುಸ್ಲಿಮರು ಅಲ್ಲಾಹನ ವಿಶೇಷ ಅನುಗ್ರಹ ತ್ತು ನೆರವಿಗೆ ಪಾತ್ರರಾಗುತ್ತಾರೆ.

ಇಲ್ಲಿ ಮತ್ತೊಮ್ಮೆ 'ಹಾಗೇಕೆ?' ಎಂದು ಕೇಳಿದರೆ ಅದೊಂದು ಅನಗತ್ಯ ಪ್ರಶ್ನೆ ಸಿಕೊಳ್ಳುವುದು. ಏಕೆಂದರೆ ಅಸಂಘಟಿತ ಬದುಕಿನಲ್ಲಿ ಈ ಮೊದಲು ಹೇಳಲಾದ ಷ್ಪರಿಣಾಮಗಳು ಹಾಗೂ ಗಂಡಾಂತರಗಳು ಇರುವುದಾದಲ್ಲಿ, ಸಂಘಟಿತ ಬದುಕಿನ ಣಾಮ ಅವೆಲ್ಲದಕ್ಕೆ ತದ್ವಿರುದ್ಧವಾಗಿರುತ್ತದೆ.

ಮೊದಲನೆಯದಾಗಿ ಇಸ್ಲಾಮಿನ ಅಪೇಕ್ಷಿತ ಸಾಮೂಹಿಕ ವ್ಯವಸ್ಥೆಯಿಂದ ವಂಚಿತ ಮಾಜವು ದುರ್ವಿಚಾರ ಮತ್ತು ದುರಾಚಾರಗಳನ್ನು ಪೋಷಿಸುತ್ತಾ ಸದ್ವಿಚಾರ ಮತ್ತು ಾಚಾರಗಳಿಗೆ ಕಂಟಕಪ್ರಾಯವಾಗಿರುತ್ತದೆ. ಇದರ ಪರಿಣಾಮವಾಗಿ ಮುಸಲ್ಮಾನರ ಲಿಗೆ ಸತ್ಯ ಮತ್ತು ದೇವಭಕ್ತಿಯ ಮಾರ್ಗದಲ್ಲಿ ನಡೆಯುವುದು ಅತ್ಯಂತ ದುಸ್ತರವಾಗುತ್ತಾ ೀಗುತ್ತದೆ. ಅತ್ತ, ಇಸ್ಲಾಮೀ ಸಾಮೂಹಿಕ ವ್ಯವಸ್ಥೆ ಉಳ್ಳಂತಹ ಸಮಾಜವು ಸಂಪೂರ್ಣವಾಗಿ ನಕ್ಕೆ ತದ್ವಿರುದ್ಧವಾದ ವಿದ್ಯಮಾನವನ್ನು ಸೃಷ್ಟಿಸುತ್ತದೆ. ಅದು ಸದ್ವಿಚಾರ ಮತ್ತು ಸದಾಚಾರ ನ್ನು ಪೋಷಿಸುವುದಲ್ಲದೆ ದುಷ್ಟವಿಚಾರ ಮತ್ತು ದುರಾಚಾರಗಳು ಬೆಳೆಯದಂತೆ ಿಗಟ್ಟುವುದು ಹಾಗೂ ಜನರನ್ನು ಸತ್ಕಾರ್ಯಕ್ಕೆ ಪ್ರೇರೇಪಿಸುವುದು. ಇದರ ಪರಿಣಾಮವಾಗಿ ರು ಸ್ವಾಭಾವಿಕವಾಗಿಯೇ ಒಳಿತಿನ ಮಾರ್ಗದಲ್ಲಿ ನಡೆಯುವಂತಾಗುವುದು.

ಎರಡನೆಯದಾಗಿ ಅಸಂಘಟಿತ ಸಮಾಜದಲ್ಲಿ ಮುಸಲ್ಮಾನನು ತನ್ನ ಧರ್ಮವನ್ನು ಶಿಕವಾಗಿ ಮಾತ್ರ ಪಾಲಿಸಲು ನಿರ್ಬಂಧಿತನಾಗುವನು. ಆದರೆ ಇಸ್ಲಾಮೀ ಸಂಘಟಿತ ವ್ಯವಸ್ಥೆ ುವಲ್ಲಿ ಇಂಥ ಅನಿವಾರ್ಯತೆ ತೀರಾ ಇರುವುದಿಲ್ಲ.

ಮೂರನೆಯದಾಗಿ ಇಸ್ಲಾಮೇತರ ವ್ಯವಸ್ಥೆಯುಳ್ಳ ಸಮಾಜದಲ್ಲಿ ಒಬ್ಬ ವ್ಯಕ್ತಿಯ ಧಾರ್ಮಿ ಪ್ರಜ್ಞೆ ಮತ್ತು ಅವನ ಸ್ವಾಭಿಮಾನಗಳ ಮೇಲೆ ನಿರಂತರ ಆಕ್ರಮಣ ನಡೆಯುತ್ತಿರುತ್ತದೆ. ಆದ ಇಸ್ಲಾಮೀ ಸಂಘಟಿತ ವ್ಯವಸ್ಥೆ ಇರುವಲ್ಲಿ ಅವನ ಧರ್ಮ ಪ್ರಜ್ಞೆ ಮತ್ತು ಸ್ವಾಭಿಮಾನಕ್ಕೆ ಅ ಅಪಾಯ ಇರುವುದಿಲ್ಲ.

ಸಂಕ್ಷಿಪ್ತದಲ್ಲಿ, **ಸಾಮೂಹಿಕ ಬದುಕಿನಲ್ಲಿ ಮಾತ್ರವೇ ಒಬ್ಬ ಮುಸಲ್ಮಾನನಿಗೆ ತನ್ನೊಡೆಯ ಎಲ್ಲ ಆಜ್ಞೆಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾ ಸಂಪೂರ್ಣ ದೇವನಿಷ್ಠನಾಗಿ ಬದುಕಲು ಸಾ ಅಲ್ಲಾಹನು ತನ್ನ ದಾಸರಿಂದ ಆಪೇಕ್ಷಿಸುವುದೂ ಇಂಥ ಆಜ್ಞಾಪಾಲನೆ ಮತ್ತು ನಿಷ್ಠೆಯ** ಇದುವೇ ಅವನ ಬೇಡಿಕೆ. ಅವನ ಸಂಪ್ರೀತಿ ಅಡಗಿರುವುದೂ ಇದರಲ್ಲೇ. ಈ ರೀತಿ ಅ ಮೆಚ್ಚುಗೆಯ ಪ್ರಾಪ್ತಿಯು ಸೂಕ್ತ ಸಂಘಟಿತ ವ್ಯವಸ್ಥೆಯಡಿಯಲ್ಲಿ ಬದುಕುವುದರಿಂದ ಮ ಸಾಧ್ಯ ಎಂಬುದು ಸಂಶಯಾತೀತವಾಗಿ ಶ್ರುತವಾಗುತ್ತದೆ. ಹೀಗಿರುವಾಗ ಇಂಥ ಇಸ್ಲಾ ಸಾಮೂಹಿಕ ವ್ಯವಸ್ಥೆಯನ್ನು ಅವನು ಮೆಚ್ಚದಿರುತ್ತಾನೆಯೇ? ಅವನು ಮೆಚ್ಚುವ ವ್ಯ ಎಂದ ಮೇಲೆ ಆ ವ್ಯವಸ್ಥೆ ಅವರ ವಿಶೇಷ ಕೃಪೆ, ಅನುಗ್ರಹ ಮತ್ತು ಬೆಂಬಲಕ್ಕೆ ಪಾತ್ರವಾಗು ಎಂಬುದು ವ್ಯಕ್ತ.

ಒಂದು ಸರಿಯಾದ ಸಾಮೂಹಿಕ ವ್ಯವಸ್ಥೆಯಡಿಯಲ್ಲಿ ಮಾತ್ರ ಮುಸ್ಲಿಮರ ಧರ ವಿಶ್ವಾಸಗಳು ಸುರಕ್ಷಿತವಾಗಿರುತ್ತವೆ ಮತ್ತು ಅಲ್ಲಿ ಮಾತ್ರವೇ ಅದು ನಿರಂತರ ಬೆಳೆಯುತ್ತಿರು ಹಾಗೂ ಅಂಥ ವ್ಯವಸ್ಥೆಯಡಿಯಲ್ಲಿ ಮಾತ್ರ ಮುಸ್ಲಿಮರು ತಮ್ಮ ಇಹಪರಗಳ ಪೂರ್ಣ ಯಶ ಬಗ್ಗೆ ಭರವಸೆಯಿಂದಿರಬಹುದು ಎಂಬುದು ಇದರಿಂದ ತಿಳಿದಂತಾಯಿತು. ಹೀಗಿರುವಾ ಸಾಮೂಹಿಕ ಬದುಕು ಮತ್ತು ಅದರ ಪರಿಣಾಮಗಳು ಎಷ್ಟು ಅಮೂಲ್ಯ ಹಾಗೂ ಇಸ್ಲಾ ಧರ್ಮ ಮತ್ತು ಮುಸ್ಲಿಮರ ಪಾಲಿಗೆ ಅದು ಎಷ್ಟೊಂದು ಆವಶ್ಯಕ ಎಂದು ಚಿಂತಿಸಿ ನೋಡಿ!

## ಏಕಾಂತದಲ್ಲಿ ಬದುಕಿದ ಮಹಾ ಪುರುಷರು

ಈ ಸಂದರ್ಭದಲ್ಲಿ ಕೆಲವು ಐತಿಹಾಸಿಕ ಘಟನೆಗಳು ಮೇಲೆ ಹೇಳಿದಂತಹ ವಿಷ ವ್ಯತಿರಿಕ್ತವಾಗಿ ಕಾಣಿಸುವುದರಿಂದ ಆ ಬಗ್ಗೆ ಕೆಲವು ಸಂದೇಹಗಳು ಮನದಲ್ಲಿ ಮೂಡಬಹು ಆ ಸಂಶಯಗಳನ್ನು ನಿವಾರಿಸಿಕೊಳ್ಳಬೇಕಾದುದು ಅಗತ್ಯ.

ಅಂಥ ಒಂದು ಮುಖ್ಯ ಸಂದೇಹ ಏನೆಂದರೆ ಕೆಲವಾರು ಧಾರ್ಮಿಕ ಮಹಾ ಪುರುಷ ಪ್ರಸ್ತುತ ತತ್ವಗಳಿಗಿಂತ ಭಿನ್ನವಾಗಿ ಬದುಕಿರುವುದನ್ನು ಮತ್ತು ಸಾಮೂಹಿಕತೆಯಿಂದ ಮುಕ್ತವ ಬದುಕಿಯೂ ದೇವಭಕ್ತಿಯ ಉನ್ನತೋನ್ನತ ಮಟ್ಟಗಳನ್ನು ತಲುಪಿರುವುದನ್ನು ನ ಕಾಣುತ್ತೇವೆ. ಅವರು ಏಕಾಂತದ ಬದುಕನ್ನೇ ಸಾಗಿಸಿದ್ದರೂ ಶೈತಾನ್ ಅವರನ್ನು ತನ್ನ ಬ ಬೀಳಿಸುವುದಂತಿರಲಿ, ಅವರ ಹತ್ತಿರ ಹೋಗಲಿಕ್ಕೂ ಧೈರ್ಯ ಮಾಡಲಿಲ್ಲ. ಹೀಗಿರುವ ಸಾಮೂಹಿಕತೆಯ ಅಗತ್ಯದ ಬಗ್ಗೆ ಸಂದೇಹವೇಳುವುದು ಸ್ವಾಭಾವಿಕ.

ಆದರೆ ಇಲ್ಲಿ ಒಂದು ಮುಖ್ಯ ಅಂಶವನ್ನು ನಾವು ಗಮನಿಸಬೇಕಾಗಿದೆ. ಜಗತ್ತಿನ ಾವುದೇ ನಿಯಮಕ್ಕೂ ಒಂದಲ್ಲೊಂದು ಅಪವಾದ (Exception) ಇದ್ದೇ ಇರುತ್ತದೆ. ಥ ಕ್ರಿಯೆಯು ಇಂಥ ಪರಿಣಾಮ ಉಂಟುಮಾಡುತ್ತದೆ ಎಂದು ನಾವು ಹೇಳುವಾಗ ಮಾನ್ಯವಾಗಿ ಆ ಕ್ರಿಯೆಯು ಆ ಪರಿಣಾಮವನ್ನೇ ಉಂಟುಮಾಡುತ್ತದೆ ಎನ್ನುವುದೇ ನಮ್ಮ ಗಿತವಾಗಿರುತ್ತದೆಯೇ ಹೊರತು ಆ ಕ್ರಿಯೆಯಿಂದ ಅದಕ್ಕಿಂತ ಭಿನ್ನವಾದ ಪರಿಣಾಮ ಂಟಾಗಲು ಎಂದೂ ಸಾಧ್ಯವೇ ಇಲ್ಲ ಎಂಬುದು ಅದರ ಅರ್ಥವಲ್ಲ. ನಾವು ಸಾಮಾನ್ಯ ಸ್ಥಿತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಹಾಗೆ ಹೇಳುತ್ತೇವೆ. ಅಲ್ಲದೆ ಹಾಗೆ ಹೇಳುವಾಗ ನಮ್ಮ ಗಿತ ಇದುವೇ ಸರ್ವೇ ಸಾಮಾನ್ಯ ನಿಯಮ ಎಂದಾಗಿರುತ್ತದೆ.

'ಸಾಮೂಹಿಕ ಬದುಕಿನಿಂದ ಬೇರ್ಪಟ್ಟು ಜೀವಿಸುವವನನ್ನು ಶೈತಾನ್ ಬಹುಬೇಗನೇ ಟೆಯಾಡಿ ಬಿಡುತ್ತಾನೆ' ಎಂಬ ಮಾತನ್ನೂ ಇದೇ ಸಾಮಾನ್ಯ ಮತ್ತು ಪರಿಚಿತ ಅರ್ಥದಲ್ಲಿ ಳಲಾಗಿದೆ. ಸಾಮಾನ್ಯವಾಗಿ ಹೀಗೇ ಆಗುತ್ತದೆ ಎಂಬುದಷ್ಟೇ ಇದರ ಅರ್ಥ.

ಇದೇ ರೀತಿ, ಕೆಲವು ವ್ಯಕ್ತಿಗಳು ಸಂಘಟಿತ ಬದುಕಿನಿಂದ ದೂರವುಳಿದೂ ಮಹಾ ವಭಕ್ತರಾಗಿ, ಸತ್ಯಸಂಧರಾಗಿ ಬಾಳಿದ್ದುಂಟು ಎಂಬುದನ್ನು ಕೆಲವು ಘಟನೆಗಳು ಸಾಧಿಸುವಾಗ 'ಕೆಲವು' ಮಂದಿಗೆ ತದ್ವಿರುದ್ಧವಾಗಿ 'ಅಸಂಖ್ಯ' ಜನರು ಸಾಮೂಹಿಕ ಬದುಕಿನಿಂದ ರ್ಪಟ್ಟ ಪರಿಣಾಮವಾಗಿ ತಮ್ಮ ಧರ್ಮನಿಷ್ಠೆಯನ್ನು ಅತ್ಯವಶ್ಯಕ ಪ್ರಮಾಣದಲ್ಲೂ ಉಳಿಸಿ ಳ್ಳಲಾಗದೆ ದೇವನಿಂದ ದೂರವಾಗಿ ಶೈತಾನ್‌ನಿಗೆ ನಿಕಟರಾಗಿದ್ದಾರೆ ಎಂಬುದಕ್ಕೆ ಅದೆಷ್ಟೋ ಟನೆಗಳು ಸಾಕ್ಷಿಯಾಗಿವೆ.

ಈಗ ಈ ಎರಡೂ ಅಂಶಗಳನ್ನು ತುಲನಾತ್ಮಕವಾಗಿ ನೋಡಿದರೆ ಹೆಚ್ಚು ಸಮರ್ಥನೀಯ ದು ತೋರುವ ವಾದ ಯಾವುದು? ಮುಸ್ಲಿಮ್ ಸಮುದಾಯದ ಪಾಲಿಗೆ ಸಾಮೂಹಿಕ ವಸ್ಥೆಯ ಅಸ್ತಿತ್ವ ಮತ್ತು ನಾಸ್ತಿತ್ವಗಳ ಪೈಕಿ ಯಾವುದು ಲಾಭದಾಯಕವೆಂದು ತೋರುತ್ತದೆ ತ್ತು ಯಾವುದು ಮಾರಕವಾಗಿ ತೋರುತ್ತದೆ?

ಧರ್ಮದ ಆದೇಶ-ಉಪದೇಶಗಳ ಬಗ್ಗೆ ಹೇಳುವುದಾದರೆ ಅವುಗಳನ್ನು ಸಾಮಾನ್ಯ ಸ್ಥಿತಿ, ಜನಸಾಮಾನ್ಯರು ಮತ್ತು ಸರ್ವೇ ಸಾಮಾನ್ಯ ವಾಸ್ತವಿಕತೆಗಳನ್ನು ದೃಷ್ಟಿಯಲ್ಲಿಟ್ಟು ಂಡು ಕೊಡಲಾಗುತ್ತದೆಯೇ ಹೊರತು ವಿಶೇಷ ಪರಿಸ್ಥಿತಿ ಮತ್ತು ಅಪರೂಪದ ವ್ಯಕ್ತಿ ನ್ನುದ್ದೇಶಿಸಿ ಆ ಆದೇಶಗಳನ್ನು ಕೊಡಲಾಗುವುದಿಲ್ಲ. ಇಸ್ಲಾಮ್ ಸಾಮೂಹಿಕ ಬದುಕು ಸಬೇಕೆಂದು ಆದೇಶಿಸಿರುವುದು ಜನಸಾಮಾನ್ಯರನ್ನೇ ಉದ್ದೇಶಿಸಿ. ಹಾಗೆಯೇ ಈ ಕುರಿತು ು ಕೊಟ್ಟಿರುವ ಎಲ್ಲ ಉಪದೇಶಗಳೂ ಸಾಮಾನ್ಯ ಪರಿಸ್ಥಿತಿಯನ್ನು ದೃಷ್ಟಿಯಲ್ಲಿಟ್ಟು ಕೊಟ್ಟ ಪದೇಶಗಳೇ ಆಗಿವೆ. ಇನ್ನು ಇಸ್ಲಾಮ್ ಯಾವುದೇ ವಿಷಯದ ಬಗ್ಗೆ ಒಂದು ಆದೇಶ ಟ್ಟ ಬಳಿಕ ಆ ಆದೇಶವು ಸಾಮಾನ್ಯರು ಮತ್ತು ಗಣ್ಯರೆಂಬ ಭೇದವಿಲ್ಲದೆ ಎಲ್ಲರಿಗೂ ಾನವಾಗಿ ಅನ್ವಯಿಸುತ್ತವೆ. ಎಲ್ಲರೂ ಅದನ್ನು ಕಡ್ಡಾಯವಾಗಿ ಅನುಸರಿಸಬೇಕಾಗುತ್ತದೆ.

ಶರೀಅತ್‌ನ ಎಲ್ಲ ಆದೇಶಗಳು ನಿಷ್ಪಕ್ಷವಾಗಿ ಎಲ್ಲರಿಗೆ ಅನ್ವಯಿಸುತ್ತವೆ. ಒಬ್ಬ ವ್ಯಕ್ತಿ ಎಂಥ ವಿಶ ಸಾಮರ್ಥ್ಯವುಳ್ಳವನಾಗಿದ್ದರೂ ಎಂಥ ವಿಶಿಷ್ಟ್ಯ ಒಲವುಗಳುಳ್ಳವನಾಗಿದ್ದರೂ ಈ ಆದೇಶ ಪಾಲನೆಯ ವಿಷಯದಲ್ಲಿ ಅವನಿಗೆ ಯಾವುದೇ ರಿಯಾಯಿತಿ ಇರುವುದಿಲ್ಲ.

ವಸ್ತುತಃ ಈ ಸಂದೇಹ ಅಥವಾ ಆಕ್ಷೇಪವು ಸರಿಯಲ್ಲವೆಂದೇ ಹೇಳಬೇಕಾಗುತ್ತ ಸಾಮೂಹಿಕ ಬದುಕಿನಿಂದ ಬೇರ್ಪಟ್ಟು ಕೂಡಾ ಕೆಲವರು ಆಧ್ಯಾತ್ಮಿಕ ರಂಗದಲ್ಲಿ ಉ ಸಾಧನೆಗಳನ್ನು ಮಾಡಿದ್ದರೆಂಬುದು ನಿಜ. ಆದರೆ ಇದು ಸಾಮೂಹಿಕ ಬದುಕಿನ ಮಹತ್ವ ಅಥ ಅದರ ಪ್ರಯೋಜನಗಳಿಗೆ ವಿರುದ್ಧ ಒಂದು ಗಣನೀಯ ಪುರಾವೆಯಲ್ಲ. ಏಕೆಂದರೆ ಈ ಮ ಸಾಮೂಹಿಕತೆಯಿಂದ ಬೇರ್ಪಟ್ಟು ಆಧ್ಯಾತ್ಮಿಕತೆಯ ಯಾವ ಉನ್ನತ ಸ್ತರವನ್ನು ಸಾಧಿಸಿದ್ದರ ಅದಕ್ಕಿಂತ ಉನ್ನತ ಸ್ತರವನ್ನು ಸಾಮೂಹಿಕ ಬದುಕಿಗೆ ಬದ್ಧವಾಗಿದ್ದುಕೊಂಡು ಸಾಧಿಸಲು ಅವ ಅಸಾಧ್ಯವಾಗಿತ್ತು ಎಂಬುದು ಈ ವಾದದಿಂದ ಸಾಬೀತಾಗುವುದಿಲ್ಲ. ವಾಸ್ತವದಲ್ಲಿ ಪ್ರ ಮಹಾ ಪುರುಷರಿಗೆ ಸಾಮೂಹಿಕ ಬದುಕಿನ ಬೆಂಬಲ ಮತ್ತು ಅದರ ಸತ್ಫಲಗಳೂ ದೊರಕಿ ಅವರು ಇಸ್ಲಾಮೀ ಕ್ಷೇತ್ರದಲ್ಲಿ ಇನ್ನಷ್ಟು ಉನ್ನತ ಮಟ್ಟವನ್ನು ತಲುಪಲು ಖಂಡಿತಾ ಸಾಧ್ಯವಿ ಏಕಾಂತದಲ್ಲಿ ಅವರು ಹೆಚ್ಚೆಂದರೆ ದೇವಚರರ ಮಟ್ಟಕ್ಕೆ ತಲಪಿರಬಹುದು. ಆದರೆ ಇಸ್ಲಾ ಸಾಮೂಹಿಕ ವ್ಯವಸ್ಥೆಗೆ ಬದ್ಧವಾಗಿ ಬದುಕಿದ್ದರೆ ಅವರು ಆ 'ಜನಸಂದಣಿ'ಯಲ್ಲೂ ಅಬೂಬ (ರ) ಉಮರ್(ರ)ರಂಥ ಔನ್ನತ್ಯವನ್ನು ಪಡೆಯಬಹುದಿತ್ತು.

ಒಟ್ಟಿನಲ್ಲಿ ಸಾಮೂಹಿಕ ಬದುಕಿನಿಂದ ದೂರವುಳಿದು ಒಬ್ಬ ವ್ಯಕ್ತಿ ಏನೇನು ಸಾ ಮಾಡಿದರೂ, ಭೂಮಿಯ ಮೇಲೆ ಅಲ್ಲಾಹನ ಪ್ರತಿನಿಧಿಯೆಂಬ ಕಿರೀಟ ಧರಿಸಿದ ದೇವಚ ಸಾಷ್ಟಾಂಗಕ್ಕೆ ಪಾತ್ರನಾದ ಆದರ್ಶ ಮನುಷ್ಯನಾಗಲು ಅವನಿಗೆ ಸಾಧ್ಯವಿಲ್ಲ.

# ಇಸ್ಲಾಮಿನ ಸಾಮೂಹಿಕತೆ

## ಸಾಮೂಹಿಕ ವ್ಯವಸ್ಥೆಯ ಉದ್ದೇಶ

ಜಗತ್ತಿನ ಪ್ರತಿಯೊಂದು ಸಾಮೂಹಿಕ ವ್ಯವಸ್ಥೆಗೂ ಒಂದು ನಿರ್ದಿಷ್ಟ ಉದ್ದೇಶವಿರುತ್ತದೆ. ಮಾತ್ರವಲ್ಲ, ನಿರ್ದಿಷ್ಟ ಉದ್ದೇಶಗಳೇ ಸಾಮೂಹಿಕ ವ್ಯವಸ್ಥೆ ಅಥವಾ ಸಂಘಟನೆಗಳ ಉಗಮಕ್ಕೆ ಕಾರಣವಾಗುತ್ತವೆ ಎಂದೇ ಹೇಳಬಹುದು. ವಾಸ್ತವದಲ್ಲಿ ಸಂಘಟನೆ ಸಾಮೂಹಿಕತೆ ಇವೆಲ್ಲಾ ವಸ್ತುತಃ ಉದ್ದೇಶಗಳಲ್ಲ, ಅವು ನಿರ್ದಿಷ್ಟ ಉದ್ದೇಶಗಳ ಸಾಧನೆಗಿರುವ ಉಪಾಧಿಗಳು ಮಾತ್ರ. ಅವುಗಳಿಗೆ ಇರುವ ಮಹತ್ವಕ್ಕೆ, ಅವುಗಳ ಹಿಂದಿನ ಉದ್ದೇಶವೇ ಬುನಾದಿಯಾಗಿವೆ. ಒಂದು ಸಂಘಟನೆ, ಒಂದು ನಿರ್ದಿಷ್ಟ ಉದ್ದೇಶದ ಪ್ರಾಪ್ತಿಗೆ ಸಹಾಯಕವಾಗುವುದು ಎಂದಾದರೆ ಆ ಸಂಘಟನೆಗೆ ಎಷ್ಟು ಮಹತ್ವ ಕೊಟ್ಟರೂ ಕಡಿಮೆಯೇ. ಇದಕ್ಕೆ ತದ್ವಿರುದ್ಧವಾಗಿ, ಆ ಸಂಘಟನೆಯು ಉದ್ದೇಶಕ್ಕೆ ಪೂರಕವಾಗಿಲ್ಲದಿದ್ದರೆ, ಅದು ಎಷ್ಟೇ ಬಲಾಢ್ಯ ಸಂಘಟನೆಯಾಗಿದ್ದರೂ ಅದಕ್ಕೆ ಚಿಕ್ಕಾಸಿನ ಬೆಲೆಯೂ ಇರುವುದಿಲ್ಲ.

ಈ ಮಾತು ಬೇರೆಲ್ಲ ಸಾಮೂಹಿಕ ವ್ಯವಸ್ಥೆ ಮತ್ತು ಸಂಘಟನೆಗಳಿಗೆ ಅನ್ವಯಿಸುವಂತೆಯೇ ಇಸ್ಲಾಮಿನ ಅಪೇಕ್ಷಿತ ಸಾಮೂಹಿಕತೆಗೂ ಅಕ್ಷರಶಃ ಅನ್ವಯಿಸುತ್ತದೆ. ಈ ನೀತಿಯನ್ನು ಇತರೆಲ್ಲ ವ್ಯವಸ್ಥೆಗಳಿಗೆ ಅನ್ವಯಿಸಿ ಇಸ್ಲಾಮೀ ಸಾಮೂಹಿಕತೆಯ ವಿಷಯದಲ್ಲಿ ಮಾತ್ರ ಈ ನೀತಿಯ ಬಗ್ಗೆ ತಕರಾರು ಮಾಡಲು ಯಾವ ಕಾರಣವೂ ಇಲ್ಲ. ಆದ್ದರಿಂದ ಸಹಜವಾಗಿಯೇ ಇಸ್ಲಾಮ್ ತನ್ನ ಅನುಯಾಯಿಗಳಿಂದ ಅಪೇಕ್ಷಿಸುವ ಸಾಮೂಹಿಕತೆ, ಏಕತೆ ಮತ್ತು ಸಂಘಟನೆ ಕೂಡಾ ನಿರಂಕುಶ, ಸರ್ವಾಧಿಕಾರಿ ಅಥವಾ ನಾಮಮಾತ್ರ ಸ್ವರೂಪದ ಸಾಮೂಹಿಕತೆಯಾಗಲೀ, ಏಕತೆಯಾಗಲೀ, ಸಂಘಟನೆಯಾಗಲೀ ಖಂಡಿತ ಅಲ್ಲ. ಅದು ಒಂದು ವಿಶಿಷ್ಟ ಬಗೆಯ ಸಾಮೂಹಿಕತೆ, ಅರ್ಥಪೂರ್ಣ ಏಕತೆ ಮತ್ತು ಉದ್ದೇಶಪೂರ್ಣ ಸಂಘಟನೆಯನ್ನೇ ಬಯಸುತ್ತದೆ ಎಂದಾಯಿತು. ಅದು ತನ್ನ ಅನುಯಾಯಿಗಳಿಗೆ, ಒಗ್ಗಟ್ಟಾಗಿ ಸಂಘಟಿತ ಬದುಕು ಸಾಗಿಸಬೇಕೆಂದು ಆದೇಶಿಸಿರುವುದರ ಹಿಂದೆಯೂ ಒಂದು ನಿರ್ದಿಷ್ಟ ಉದ್ದೇಶ ಇರಲೇಬೇಕು. ಒಂದು ಸಂಘಟನೆಯ ಬಗ್ಗೆ ಅದು ನಿಜವಾಗಿ ಇಸ್ಲಾಮೀ ಸಂಘಟನೆ ಹೌದೋ ಅಲ್ಲವೋ ಎಂಬುದನ್ನು ಜನರು ನಿರ್ಧರಿಸಬೇಕಾದುದು ಕೂಡಾ ಈ ಉದ್ದೇಶದ ಆಧಾರದಲ್ಲೇ. ಪ್ರಸ್ತುತ ಸಂಘಟನೆಗೆ, ಆ ಉದ್ದೇಶವನ್ನು ಈಡೇರಿಸುವ ಉಪಾಧಿಯಾಗಲು ಸಾಧ್ಯವಿದ್ದರೆ

ಮಾತ್ರ ಅದು ಇಸ್ಲಾಮೀ ಸಂಘಟನೆಯೆಂದೂ ಅಲ್ಲಾಹ್ ಮತ್ತವನ ಪ್ರವಾದಿಯ(ಸ) ನೆಚ್ಚಿನ ಸಂಘಟನೆಯೆಂದೂ ಕರೆಯಲ್ಪಡಲು ಅರ್ಹವಾಗುವುದು. ಅಂಥ ಸಂಘಟನೆ ಮಾತ್ರ ಧಾರ್ಮಿಕವಾಗಿ ಅಪೇಕ್ಷಿತ ಮಹತ್ವವನ್ನು ಪಡೆಯಲು ಸಾಧ್ಯ. ಆ ಮಹತ್ವದ ಸ್ವರೂಪವನ್ನು ಮುಂದೆ ವಿವರಿಸಲಾಗುವುದು.

ಇದಕ್ಕೆ ತದ್ವಿರುದ್ಧವಾಗಿ ಮುಸ್ಲಿಮರ ಒಂದು ಸಂಘಟನೆಯು ಉದ್ದೇಶಿತ ದಿಕ್ಕಿನೆಡೆಗೆ ನಡೆಯುತ್ತಿಲ್ಲವಾದರೆ ಮತ್ತೆ ಅದು ಇಸ್ಲಾಮೀ ಸಂಘಟನೆ ಅಥವಾ ಇಸ್ಲಾಮೀ ಸಮೂಹವೆಂದು ಕರೆಯಲ್ಪಡಲು ಅರ್ಹವಾಗಿರುವುದಿಲ್ಲ. ಅಲ್ಲದೆ ಸಾಮುದಾಯಿಕ ಸಂಘಟನೆ ಮತ್ತು ಸಮೂಹ ವ್ಯವಸ್ಥೆಗೆ ಸಂಬಂಧಿಸಿದಂತೆ ಇಸ್ಲಾಮ್ ಆದೇಶಿಸುವ ಆಜ್ಞಾಪಾಲನೆ ಮತ್ತು ಅನುಸರಣೆಯ ಹೊಣೆಗಾರಿಕೆಯು ಇಂಥ ಸಂಘಟನೆಗಳ ಮಟ್ಟಿಗೆ ಅನ್ವಯಿಸುವುದಿಲ್ಲ.

ಇನ್ನು ಒಂದು ವೇಳೆ ಪರಿಸ್ಥಿತಿಯು ಇದಕ್ಕಿಂತಲೂ ಹದಗೆಟ್ಟಿದ್ದು, ಮುಸಲ್ಮಾನರ ಈ ಸಂಘಟನೆಯ ಮೂಲಭೂತ ತತ್ವಾದರ್ಶ ಮತ್ತು ಸ್ವಭಾವವೇ ನೈಜ ಇಸ್ಲಾಮೀ ಸಾಮೂಹಿಕತೆಯ ಉದ್ದೇಶಗಳಿಗೆ ಮಾರಕವಾಗಿದ್ದು, ಅದು ಇಸ್ಲಾಮಿಗಿಂತ ಭಿನ್ನವಾದ ಧ್ಯೇಯಗಳನ್ನು ಹೊಂದಿದ್ದರೆ, ಅದು ಹೆಸರಿಗೆ 'ಮುಸಲ್ಮಾನರ' ಸಂಘಟನೆಯೇ ಆಗಿದ್ದರೂ ಇಸ್ಲಾಮಿನ ಪಾಲಿಗೆ ಅದೊಂದು ಶಾಪವೆಂದೇ ಪರಿಗಣಿಸಲಾಗುವುದು. ಅಂಥ ಸಂಘಟನೆಯನ್ನು ಕೆಡವಿ, ಅದರ ಪ್ರಚಲಿತ ಬುನಾದಿಗಳನ್ನೆಲ್ಲಾ ಬುಡಮೇಲುಗೊಳಿಸಿ ಅದರ ಸ್ಥಾನದಲ್ಲಿ ತನ್ನ ನೈಜ ಉದ್ದೇಶವನ್ನು ಈಡೇರಿಸಬಲ್ಲ ಸಂಘಟನೆಯನ್ನು ಸ್ಥಾಪಿಸಬೇಕೆಂಬುದೇ ಇಸ್ಲಾಮಿನ ಅಪೇಕ್ಷೆಯಾಗಿದೆ.

ಇಸ್ಲಾಮ್ ತನ್ನ ಅನುಯಾಯಿಗಳಿಗೆ ಸಂಘಟಿತ ಸಾಮೂಹಿಕ ಬದುಕು ಸಾಗಿಸಬೇಕೆಂದು ಆದೇಶಿಸಿರುವುದರ ಉದ್ದೇಶ ಏನು? ಇದೇ ಪ್ರಶ್ನೆಯನ್ನು 'ಒಂದು ಸಮುದಾಯವೆಂಬ ನೆಲೆಯಲ್ಲಿ ಮುಸ್ಲಿಮರ ಅಸ್ತಿತ್ವದ ಉದ್ದೇಶವೇನು ಮತ್ತು ಅವರ ಅಧಿಕೃತ ಕರ್ತವ್ಯವೇನು?' ಎಂಬ ಶಬ್ದಗಳಲ್ಲೂ ಕೇಳಬಹುದು. ಏಕೆಂದರೆ ಒಂದು ಸಮುದಾಯವು ಸಮುದಾಯವಾಗಿ ರೂಪುಗೊಳ್ಳುವುದರ ಮತ್ತು ಸಂಘಟಿತವಾಗುವುದರ ಹಿಂದಿನ ಉದ್ದೇಶವೂ ಆ ಸಮುದಾಯದ ಅಸ್ತಿತ್ವದ ಉದ್ದೇಶ ಮತ್ತು ಅಧಿಕೃತ ಕರ್ತವ್ಯವೂ ಒಂದೇ ಆಗಿರುತ್ತದೆ. ಆದ್ದರಿಂದ ಮುಸ್ಲಿಮ್ ಸಮುದಾಯದ ಜೀವನೋದ್ದೇಶ ಮತ್ತು ಅಧಿಕೃತ ಕರ್ತವ್ಯ ಏನೆಂಬುದನ್ನು ತಿಳಿದುಕೊಂಡರೆ ಇಸ್ಲಾಮ್ ಪ್ರತಿಪಾದಿಸುವಂತಹ ಸಾಮೂಹಿಕತೆಯ ಉದ್ದೇಶವು ಸ್ಪಷ್ಟವಾಗುತ್ತದೆ. ಈ ಕುರಿತು ಬೇರೆ ಬೇರೆ ಸಂದರ್ಭಗಳಲ್ಲಿ ಪವಿತ್ರ ಕುರ್‌ಆನ್ ಹೇಳಿರುವ ಮಾತುಗಳು ಹೀಗಿವೆ:

''ಈ ರೀತಿ ನಾವು ನಿಮ್ಮನ್ನು ಒಂದು ಉತ್ತಮ ಸಮುದಾಯವಾಗಿ ರೂಪಿಸಿರುವೆವು. ನೀವು ಮಾನವ ಕುಲಕ್ಕೆ ಸಾಕ್ಷಿಗಳಾಗಬೇಕೆಂದು.'' (ಸೂರಃ ಅಲ್‌ಬಕರಃ)

''ನೀವೊಂದು ಅತ್ಯುತ್ತಮ ಸಮುದಾಯವಾಗಿದ್ದು ಮಾನವ ಕುಲಕ್ಕಾಗಿ ನಿಮ್ಮನ್ನು ನಿಯೋಜಿಸಲಾಗಿದೆ. ನೀವು ಒಳಿತನ್ನು ಆದೇಶಿಸುವವರೂ ಕೆಡುಕಿನಿಂದ ತಡೆಯುವವರೂ ಆಗಿರುವಿರಿ.'' (ಸೂರಃ ಆಲಿ ಇಮ್ರಾನ್)

''ಅವನು ನೂಹ್(ಅ)ರಿಗೆ ಉಪದೇಶಿಸಿದ ಧರ್ಮವನ್ನೇ ನಿಮಗೂ ನಿಶ್ಚಯಿಸಿರುತ್ತಾನೆ.

ಅದೇ ಧರ್ಮವನ್ನು ನಿಮಗೆ ದೇವವಾಣಿಯ ರೂಪದಲ್ಲಿ ಕೊಡಲಾಗಿದೆ. (ಈ ಹಿಂದೆ) ಇಬ್ರಾಹೀಮ್(ಅ), ಮೂಸಾ(ಅ) ಮತ್ತು ಈಸಾ(ಅ)ರಿಗೂ ನಾವು ಇದೇ ಧರ್ಮವನ್ನು ಉಪದೇಶಿಸಿದ್ದೆವು. ಧರ್ಮವನ್ನು ಸಂಸ್ಥಾಪಿಸಿರಿ. ಭಿನ್ನರಾಗದಿರಿ ಎಂಬ ಸೂಚನೆಯೊಂದಿಗೆ.''

(ಸೂರಃ ಅಶ್ಶೂರಾ)

ಈ ಮೂರು ವಾಕ್ಯಗಳಲ್ಲಿ ಪ್ರಸ್ತಾಪಿಸಲಾಗಿರುವ ಸತ್ಯಸಾಕ್ಷ್ಯ, ಒಳಿತಿನ ಸಂಸ್ಥಾಪನೆ ಹಾಗೂ ಕೆಡುಕಿನ ತಡೆ ಮತ್ತು ಧರ್ಮ ಸಂಸ್ಥಾಪನೆ ಎಂಬ ಮೂರು ವಿಭಿನ್ನ ಶಬ್ದಗಳು ಮೂಲತಃ ಒಂದೇ ಅರ್ಥ ಮತ್ತು ತಾತ್ಪರ್ಯವನ್ನು ಪ್ರತಿಬಿಂಬಿಸುತ್ತವೆ. ಶಬ್ದಗಳ ಈ ವ್ಯತ್ಯಾಸವು ಒಂದೇ ಅರ್ಥದ ಮೂರು ವಿಭಿನ್ನ ಮುಖಗಳ ಮೇಲೆ ಬೆಳಕು ಚೆಲ್ಲುತ್ತವೆ.

ಒಂದು ಸಮುದಾಯ ಅಥವಾ ಸಮೂಹವೆಂಬ ನೆಲೆಯಲ್ಲಿ ಮುಸ್ಲಿಮರ ಜೀವನೋದ್ದೇಶವು ಧರ್ಮ ಸಂಸ್ಥಾಪನೆ ಮತ್ತು ಸತ್ಯಸಾಕ್ಷವೇ ಆಗಿದೆ ಎಂಬುದು ಪ್ರಸ್ತುತ ಕುರ್‌ಆನ್ ವಾಕ್ಯಗಳಿಂದ ವ್ಯಕ್ತವಾಗುತ್ತದೆ. ಅಲ್ಲದೆ ಇಸ್ಲಾಮೀ ಸಾಮೂಹಿಕತೆಯ ಉದ್ದೇಶವೂ ಧರ್ಮ ಸಂಸ್ಥಾಪನೆ, ಒಳಿತಿನ ಅನುಷ್ಠಾನ ಮತ್ತು ಸತ್ಯಸಾಕ್ಷ್ಯವೇ ಆಗಿದೆ ಎಂಬುದೂ ಇದರಿಂದ ಸ್ಪಷ್ಟವಾಗುತ್ತದೆ. ಇಸ್ಲಾಮ್ ತನ್ನ ಅನುಯಾಯಿಗಳು ಸಂಘಟಿತ ಸ್ವರೂಪದ ಸಾಮೂಹಿಕ ಬದುಕು ಸಾಗಿಸಬೇಕೆಂದು ಇಷ್ಟು ಒತ್ತುಕೊಟ್ಟು ಆದೇಶಿಸಿರುವುದು ಮತ್ತು ಸಾಮೂಹಿಕತೆಯ ಪ್ರಜ್ಞೆಯನ್ನು ಅವರಲ್ಲಿ ಸದಾ ಜಾಗೃತವಾಗಿಡಲಿಕ್ಕಾಗಿ ಇಷ್ಟೆಲ್ಲಾ ಏರ್ಪಾಡುಗಳನ್ನು ಮಾಡಿರುವುದು ಇದೇ ಉದ್ದೇಶಕ್ಕಾಗಿ. ಹೀಗಿರುವಾಗ ಮುಸಲ್ಮಾನರು ಇದಕ್ಕೆ ಹೊರತಾದ ಬೇರಾವುದೇ ಉದ್ದೇಶಕ್ಕಾಗಿ ಸಂಘಟಿತರಾಗಲು ಸಾಧ್ಯವಿಲ್ಲ. ಅಲ್ಲದೆ ಯಾವುದೇ ಅನ್ಯ ಉದ್ದೇಶವು ತನ್ನ ಸುತ್ತ ಮುಸ್ಲಿಮರನ್ನು ಸಂಘಟಿಸುವ ಅರ್ಹತೆ ಹೊಂದಿರುವುದಿಲ್ಲ. ಹಾಗೆಯೇ ಮುಸ್ಲಿಮರ ಸಂಘಟನೆಯೊಂದು ಇದರ ಹೊರತು ಬೇರಾವುದೇ ಉದ್ದೇಶದೆಡೆಗೆ ಚಲಿಸುವುದೂ ತಪ್ಪು.

ಮುಸ್ಲಿಮರು ವಿಚ್ಛಿದ್ರರಾಗಿ ಅರಾಜಕತೆಯಲ್ಲಿ ಬದುಕಿದರೆ ಅವರ ಬದುಕನ್ನು ಇಸ್ಲಾಮೇತರ ಬದುಕೆಂದೂ ಅಜ್ಞಾನದ ಬದುಕೆಂದೂ ಪರಿಗಣಿಸಲಾಗುವಂತೆಯೇ, ಮುಸ್ಲಿಮರು ಸದ್ಧರ್ಮ ಸಂಸ್ಥಾಪನೆಯ ಹೊರತಾದ ಬೇರೆ ಯಾವುದೇ ಉದ್ದೇಶಕ್ಕಾಗಿ ಸಂಘಟಿತರಾದರೆ ಅದನ್ನು ಕೂಡಾ ಅಜ್ಞಾನದ ಅವಸ್ಥೆಯೆಂದೇ ಪರಿಗಣಿಸಲಾಗುವುದು. ಮುಸ್ಲಿಮರ ಒಂದು ಗುಂಪು ಅಥವಾ ಸಂಘಟನೆಯು ಈ ಉದ್ದೇಶಕ್ಕೆ ಎಷ್ಟು ನಿಕಟವಾಗಿರುವುದೋ ಅಷ್ಟೇ ಪ್ರಮಾಣದಲ್ಲಿ ಅದು ಇಸ್ಲಾಮೀ ಸಂಘಟನೆ ಎನಿಸಿಕೊಳ್ಳುತ್ತದೆ. ಈ ಉದ್ದೇಶದಿಂದ ಆ ಸಂಘಟನೆ ಎಷ್ಟು ದೂರವುಳಿಯುವುದೋ ಅಷ್ಟೇ ಪ್ರಮಾಣದಲ್ಲಿ ಅದು ಇಸ್ಲಾಮೀ ಸಂಘಟನೆಯೆಂಬ ಸ್ವರೂಪವನ್ನು ಕಳೆದುಕೊಳ್ಳುವುದು. ಅದು ಈ ರೀತಿ ನೈಜ ಉದ್ದೇಶದಿಂದ ದೂರವುಳಿಯುವುದಕ್ಕೆ ಮೂಲಭೂತ ಸ್ವರೂಪ ತಾತ್ವಿಕ ಕಾರಣಗಳಿದ್ದರೆ ಆಗಂತೂ ಅದು ಒಂದು ಸಂಪೂರ್ಣ ಇಸ್ಲಾಮೇತರ ಹಾಗೂ ಅಪ್ಪಟ ಅಜ್ಞಾನಜನ್ಯ ಸಂಘಟನೆ

ಎಂದು ಕರೆಯಲ್ಪಡುವುದು. ಮಾತ್ರವಲ್ಲ ನಿಜವಾಗಿ ಅದು ಮುಸಲ್ಮಾನರ ಒಂದು ಧರ್ಮಾಧಿಕ್ಕಾರಿ ಸಂಘಟನೆಯೆನಿಸಿಕೊಳ್ಳುವುದು. ಇಂಥ ಗುಂಪಿಗೆ ಅಲ್ಲಾಹನ ಸಹಾಯಹಸ್ತ ಖಂಡಿತ ಸಿಗಲಾರದು.

## ಇಸ್ಲಾಮೀ ಸಂಘಟನೆಯ ಬುನಾದಿ:

ಇಸ್ಲಾಮೀ ಸಾಮೂಹಿಕತೆಯ ಉದ್ದೇಶವೇನೆಂಬುದನ್ನು ನಿರ್ಧರಿಸಿದ ಬಳಿಕ ಅದರ ಬುನಾದಿ ಏನೆಂಬುದನ್ನು ನಿಶ್ಚಯಿಸುವುದು ಸುಲಭವಾಗುತ್ತದೆ. ಈ ವ್ಯವಸ್ಥೆಯ ಉದ್ದೇಶ ಕೇವಲ ಅಲ್ಲಾಹನ ಧರ್ಮದ ಸ್ಥಾಪನೆ ಮತ್ತು ಘೋಷಣೆ ಎಂದಾದರೆ ಸಹಜವಾಗಿ ಅಲ್ಲಾಹನ ಧರ್ಮ ಮಾತ್ರವೇ ಅದರ ಬುನಾದಿಯಾಗಿರಲು ಸಾಧ್ಯ. ಆದ್ದರಿಂದಲೇ ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಗಳು ಒಂದು ಸಂಘಟಿತ ಹಾಗೂ ವ್ಯವಸ್ಥಿತ ಗುಂಪಾಗಿ ಜೀವಿಸಬೇಕು ಎಂದು ಆದೇಶಿಸಲು ಈ ಕೆಳಗಿನ ಶಬ್ದಗಳನ್ನು ಬಳಸಿದೆ:

**''ಎಲ್ಲರೂ ಒಂದಾಗಿ ಅಲ್ಲಾಹನ ಪಾಶವನ್ನು ಭದ್ರವಾಗಿ ಹಿಡಿಯಿರಿ ಮತ್ತು ವಿಚ್ಛಿದ್ರರಾಗದಿರಿ.'' (ಸೂರಃ ಆಲಿ ಇಮ್ರಾನ್)**

ಈ ದೇವ ವಾಕ್ಯದಲ್ಲಿ ಮುಸಲ್ಮಾನರೆಲ್ಲಾ ಪರಸ್ಪರ ಜೊತೆಗೂಡಿ ಒಗ್ಗಟ್ಟಿನಿಂದ ಇರಬೇಕು ಎಂದು ಹೇಳಿರುವಷ್ಟೇ ಸ್ಪಷ್ಟವಾಗಿ ಅಲ್ಲಾಹನ ಪಾಶ ಮಾತ್ರವೇ ಅವರ ಒಗ್ಗಟ್ಟಿನ ಬುನಾದಿ ಎಂಬುದನ್ನೂ ಸಾರುತ್ತದೆ. ಪವಿತ್ರ ಕುರ್‌ಆನ್ ತನ್ನ ಅನುಯಾಯಿಗಳಿಗೆ ಆದೇಶಿಸುವಂತಹ ಒಗ್ಗಟ್ಟು ಮತ್ತು ಸಂಘಟನೆಯ ಪ್ರತಿಯೊಂದು ಅಂಗವೂ ಕೇವಲ ಅಲ್ಲಾಹನ ಗ್ರಂಥದ ಆಧಾರದಲ್ಲಿ ಮತ್ತು ಅವನ ಧರ್ಮಕ್ಕಾಗಿ ಮಾತ್ರ ತನ್ನ ಮೂಲದ ಜೊತೆ ಸೇರಿಕೊಂಡಿರಬೇಕು ಮತ್ತು ಆ ಸಂಘಟನೆಗಾಗಲೀ ಅದರ ಯಾವುದೇ ಅಂಗ ಅಂಶಕ್ಕಾಗಲೀ ಬೇರೆ ಯಾವುದೇ ಉದ್ದೇಶ ಇರಬಾರದು. ಹಾಗೆಯೇ ಬೇರೆ ಯಾವುದೇ ಆಧಾರದಲ್ಲಿ ಅವು ಸಂಘಟಿತವಾಗಿರಬಾರದು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಈ ಮೂಲ ದೇವ ವಾಕ್ಯದ ವ್ಯಾಖ್ಯಾನ ತಿಳಿಯಲು ನಾವು ಪ್ರವಾದಿ ಮುಹಮ್ಮದ್(ಸ) ಅವರ ಕಾರ್ಯ ನೀತಿಯನ್ನೊಮ್ಮೆ ನೋಡಬೇಕು. ಎಲ್ಲರಿಗೂ ತಿಳಿದಿರುವಂತೆ ಪ್ರವಾದಿ ಮುಹಮ್ಮದ್(ಸ) ಜನರ ಮುಂದೆ ಅಲ್ಲಾಹನ ಧರ್ಮದ ಸಂದೇಶವನ್ನಿಟ್ಟರು. ಪರಲೋಕವನ್ನು ಅವರಿಗೆ ನೆನಪಿಸಿದರು. ಏಕದೇವನ ಆರಾಧನೆಗೆ ಕರೆಕೊಟ್ಟರು. ಜೀವನಾದ್ಯಂತ ಅವರು ಇವನ್ನೇ ಮಾಡಿದರು. ಈ ಕರೆಯನ್ನು ಒಪ್ಪಿದ ಪ್ರತಿಯೊಬ್ಬನೂ ಇಸ್ಲಾಮೀ ಸಂಘಟನೆ ಮತ್ತು ಇಸ್ಲಾಮೀ ಸಮೂಹದ ಸದಸ್ಯನಾಗಿ ಬಿಡುತ್ತಿದ್ದನು. ಅವನು ಯಾವ ಕುಲದವನು, ಯಾವ ರಾಷ್ಟ್ರದವನು ಅವನ ವರ್ಣವೇನು, ಭಾಷೆ ಯಾವುದು ಇವಾವುದನ್ನೂ ಪರಿಗಣಿಸಲಾಗುತ್ತಿರಲಿಲ್ಲ. ಇನ್ನು ಒಬ್ಬ ವ್ಯಕ್ತಿ ಕುರೈಶೀ ಅಥವಾ ಹಾಶಿಮೀ ಎಂಬ 'ಶ್ರೇಷ್ಠ' ಕುಲಗಳಿಗೆ ಸೇರಿದವನಾಗಿದ್ದರೂ ಅವನು ಈ ಕರೆಯನ್ನು ಒಪ್ಪದಿದ್ದರೆ ಅವನು ಈ ಸಂಘಟನೆಯ ಹತ್ತಿರವೂ ಸುಳಿಯುವಂತಿರಲಿಲ್ಲ. ಪ್ರವಾದಿ ಮುಹಮ್ಮದ್(ಸ)ರು ಯಾವ ರೀತಿ ಈ ಸಂದೇಶದ ಹೊರತು ಬೇರಾವುದೆ

ದೇಶದೆಡೆಗೆ ಜನರನ್ನು ಆಹ್ವಾನಿಸಲಿಲ್ಲವೋ ಹಾಗೆಯೇ ಈ ಸಂದೇಶದೊಂದಿಗಿನ ಬಂಧದ ಆಧಾರದಲ್ಲಿ ಹೊರತು ಬೇರಾವುದೇ ಆಧಾರದಲ್ಲಿ ಈ ಸಮುದಾಯಕ್ಕೆ ಸೇರಲು ರು ಯಾರಿಗೂ ಆಸ್ಪದ ಕೊಟ್ಟಿರಲಿಲ್ಲ, ಅಂಥ ಅವಕಾಶ ಕೊಡುವುದು ಹಾಗಿರಲಿ, ಬೇರೆ ಾರಗಳಲ್ಲಿ ಜನರು ಸಂಘಟಿತರಾಗುವುದನ್ನು ಮತ್ತು ಬೇರಾವುದೇ ಆಧಾರದಲ್ಲಿ ಂಟಾಗುವ ಗುಂಪುಗಾರಿಕೆಯನ್ನು ಅವರು ಉಗ್ರವಾಗಿ ವಿರೋಧಿಸಿದ್ದರು. ಅಂತೆಯೇ ನೈಜ ಾಮೀ ಸಮೂಹದೊಂದಿಗೆ ಬೆಸೆದುಕೊಂಡಿರಬೇಕೆಂದು ಆದೇಶಿಸಿದ ಬೆನ್ನಿಗೇ ಅವರು ಹೇಗೆ ಳಿರುವರು:

'ಜಾಹಿಲಿಯ್ಯಾದ ಕರೆಗಳ ಆಧಾರದಲ್ಲಿ ಜನರನ್ನು ಕರೆಯುವವನು ಉಪವಾಸವನ್ನು ಚರಿಸುತ್ತಿರುವ, ನಮಾಝ್ ನಿರ್ವಹಿಸುತ್ತಿರುವ ಮತ್ತು ತಾನು ಮುಸ್ಲಿಮ್ ಎಂದು ಹೇಳಿ ಂಡಿರುವ ವ್ಯಕ್ತಿಯೇ ಆಗಿದ್ದರೂ ಅವನ ನೆಲೆ ನರಕವೇ ಆಗಿದೆ.'

(ಅಹ್ಮದ್ ಮತ್ತು ತಿರ್ಮಿದಿ, ಆಧಾರ: ಮಿಶ್ಕಾತ್, ಕಿತಾಬುಲ್ ಇಮಾರಃ)

'ಜಾಹಿಲಿಯ್ಯಾ' ಎಂದರೆ ಇಸ್ಲಾಮಿಗೆ ತದ್ವಿರುದ್ಧವಾದುದು ಎಂದರ್ಥ. ಇದು, ಹುದೇವತ್ವವು ಏಕದೇವತ್ವಕ್ಕೆ ತದ್ವಿರುದ್ಧವಾದುದು ಎಂಬಷ್ಟೇ ವ್ಯಕ್ತವಾಗಿರುವ ಒಂದು ವಾಸ್ತವ. ದ್ದರಿಂದ 'ಇಸ್ಲಾಮಿನ ಕರೆ'ಯ ಹೊರತು ಇತರೆಲ್ಲ ಕರೆ, ಆಹ್ವಾನಗಳು ಜಾಹಿಲಿಯ್ಯಾದ ಗಳೆಂದೇ ಪರಿಗಣಿಸಲ್ಪಡುತ್ತವೆ. ಹಾಗೆಯೇ ಪವಿತ್ರ ಕುರ್‌ಆನ್ ಅಂಗೀಕರಿಸದಂಥ, ವಾದಿ ಮುಹಮ್ಮದ್(ಸ) ಸ್ವತಃ ಕೊಡದಂತಹ ಮತ್ತು ಇಸ್ಲಾಮಿನಿಂದ ಅಂಗೀಕಾರದ ಮುದ್ರೆ ತೆಯದಂತಹ ಎಲ್ಲ ಕರೆಗಳೂ ಜಾಹಿಲಿಯ್ಯಾದ ಕರೆಗಳೆನಿಸುತ್ತವೆ. ಇಸ್ಲಾಮ್ ಒಂದು ಘಟಿತ, ಸಾಮೂಹಿಕ ಬದುಕು ಸಾಗಿಸಬೇಕೆಂದು ಆದೇಶಿಸಿರುವ ಜೊತೆಗೆ ಅಸಂಘಟಿತ, ಛಿದ್ರ ಬದುಕನ್ನು ಖಂಡಿಸಿದೆ. ಹೀಗಿರುವಾಗ ಯಾರಾದರೂ ಈ ಸಂಘಟಿತ ಬದುಕನ್ನು ರೆದು ಸ್ವತಂತ್ರರಾಗಬೇಕೆಂದು ಕರೆಕೊಟ್ಟರೆ ಆ ಕರೆಯು ಪ್ರತ್ಯಕ್ಷ ಜಾಹಿಲೀ ಕರೆಯೆಂದು ಗಣಿಸಲ್ಪಡುವುದು.

ಇದೇ ರೀತಿ ಪವಿತ್ರ ಕುರ್‌ಆನ್ 'ಅಲ್ಲಾಹನ ಪಾಶ'ಕ್ಕೆ ಬೆಸೆದುಕೊಂಡಿರಬೇಕು ಎಂದು ೀಧಿಸಿದೆ. ಹೀಗಿರುತ್ತಾ ಯಾರಾದರೂ, 'ಅಲ್ಲಾಹನ ಪಾಶ'ದ ಹೊರತು ಬೇರಾವುದಾದರೂ ಧಾರದಲ್ಲಿ ಜನರು ಸಂಘಟಿತರಾಗಬೇಕೆಂದು ಕರೆಕೊಟ್ಟರೆ ಅದು ಕೂಡಾ ಸ್ಪಷ್ಟ ಜಾಹಿಲಿಯ್ಯಾದ ೆ ಎನಿಸಿಕೊಳ್ಳುತ್ತದೆ. ಆ ಕರೆ ವಂಶ, ವರ್ಣ, ಭಾಷೆ, ದೇಶ, ಕುಲ ಇತ್ಯಾದಿ ಯಾವ ಧಾರದಲ್ಲಿದ್ದರೂ ಸರಿಯೇ.

ಆದ್ದರಿಂದಲೇ ಪ್ರಸ್ತುತ ಪ್ರವಾದಿ ವಚನದಲ್ಲಿ ಕೊಡಲಾಗಿರುವಂತಹ ಗಂಭೀರ ಚ್ಚರಿಕೆಯು ಬಹಳ ವ್ಯಾಪಕವಾಗಿದ್ದು ಜಾಹಿಲಿಯ್ಯಾದ ಎಲ್ಲ ವ್ಯಾಪ್ತಿಯನ್ನೂ ಅದು ಒಳಗೊಳ್ಳು ವೆ. ಅದರ ವ್ಯಾಪ್ತಿ ಎಷ್ಟು ವಿಶಾಲವೆಂದರೆ ಇಸ್ಲಾಮ್ ಅಲ್ಲದ ಇತರ ಯಾವುದೇ ಆಧಾರದಲ್ಲಿ ಗ್ಗೂಡಲು ಅಥವಾ ಇಸ್ಲಾಮ್ ಅಲ್ಲದ ಇತರ ಯಾವುದೇ ಆಧಾರದಲ್ಲಿ ಸಂಬಂಧ ಸ್ಥಾಪನೆ ಾಡಲು ಅಥವಾ ಇಸ್ಲಾಮ್ ಅಲ್ಲದ ಇತರ ಏನನ್ನೇ ಆಗಲೀ ಕೇಂದ್ರವಾಗಿಟ್ಟು ಅದರ ಸುತ್ತ

ಸೇರಲು ಮುಸಲ್ಮಾನರಿಗೆ ಕರೆ ಕೊಡುವುದು ತಪ್ಪು ಎನಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಇಸ್ಲಾಮಿ ದೃಷ್ಟಿಯಲ್ಲಿ ಧರ್ಮ ಮಾತ್ರವೇ ಮನುಷ್ಯನಿಗೆ ಔನ್ನತ್ಯ ಕಲ್ಪಿಸುವ ಮಾನದಂಡವಾಗಿದ್ದು ಅ ಹೊರತು ಬೇರಾವುದೇ ಆಧಾರದಲ್ಲಿ ಜನರನ್ನು ಸಂಘಟಿಸುವುದು ತಪ್ಪು.

ಇದೇ ವಾಸ್ತವಿಕತೆಯನ್ನು ವಿಶದ ಪಡಿಸಲು ಪ್ರವಾದಿ ಮುಹಮ್ಮದ್(ಸ) ಒಂ ಸಂದರ್ಭದಲ್ಲಿ ಹೀಗೆಂದರು:

'ಅಸಬಿಯ್ಯ' (ಸಂಕುಚಿತತೆ, ಕುಲ ಗೋತ್ರವೇ ಮೊದಲಾದ ಪೂರ್ವಗ್ರಹ)ಗಳ ಜನರನ್ನು ಆಹ್ವಾನಿಸುವವನು ನಮ್ಮವನಲ್ಲ. (ಅಬೂದಾವೂದ್, ಕಿತಾಬುಲ್ ಅದಬ್)

ಇಲ್ಲಿ 'ಅಸಬಿಯ್ಯ'ದೆಡೆಗೆ ಆಹ್ವಾನಿಸುವುದೆಂದರೆ, ಇಸ್ಲಾಮಿನ ಅಪ್ಪಟ ಬೌದ್ಧಿಕ ವ ವಿಶ್ವಾಸಾತ್ಮಕ ಸಂಘಟನಾ ಅಸ್ತಿವಾರವನ್ನು ಬಿಟ್ಟು ಮುಸ್ಲಿಮರನ್ನು ಅವರ ವಂಶ, ಜನಾ ದೇಶ, ಭಾಷೆ ಅಥವಾ ವರ್ಣದಂತಹ ಸಂಕುಚಿತ ಆಧಾರದಲ್ಲಿ ಒಂದೂಗೂಡಿಸುವ ಎಂದರ್ಥ. ಸಾಮಾನ್ಯವಾಗಿ ದೇವನನ್ನು ಮರೆತು ಭೌತಿಕತೆಯ ದಾಸ್ಯಕ್ಕೊಳ ಸಮುದಾಯಗಳು ಒಗ್ಗಟ್ಟಿಗೆ ಈ ಮಾನದಂಡಗಳನ್ನು ಬಳಸುತ್ತವೆ. ಆದರೆ ಹಾಗೆ ಮಾಡುವ ನಮ್ಮವರಲ್ಲ ಎಂದು ಈ ವಚನದಲ್ಲಿ ಸ್ಪಷ್ಟಪಡಿಸಲಾಗಿದೆ.

ಇಸ್ಲಾಮ್ ಮತ್ತು ಸಂಕುಚಿತ ಆಹ್ವಾನಗಳು ಎರಡೂ ಒಂದು ಕಡೆ ಸೇರಲು ಎಂದಿ ಸಾಧ್ಯವೇ ಇಲ್ಲ ಎಂಬುದಕ್ಕೆ ಈ ಹದೀಸ್ ಕೂಡಾ ಸಾಕ್ಷಿಯಾಗಿದೆ.

ಒಟ್ಟಿನಲ್ಲಿ ಅಜ್ಞಾನದ ಕರೆಗಳು ಮತ್ತು ಸಂಕುಚಿತತೆಯ ಕರೆಗಳೆಲ್ಲಾ ಮಾಲಿನ್ಯಗಳಾ ಇಸ್ಲಾಮಿನ ಸ್ವಚ್ಛ ಗುಣವು ಅವುಗಳನ್ನು ಕ್ಷಣ ಮಾತ್ರಕ್ಕೂ ಸಹಿಸುವುದಿಲ್ಲ. ಆದ್ದರಿಂದ ಎಂದಾದರೊಮ್ಮೆ ಅಪ್ಪಿ-ತಪ್ಪಿ ಶೈತಾನನ ಪ್ರಚೋದನೆಯಿಂದ ಯಾರಾದರೂ ಅಂಥ ಮಾ ಉಚ್ಚರಿಸಿದರೆ ಪ್ರವಾದಿ ಮುಹಮ್ಮದ್(ಸ) ತಕ್ಷಣವೇ ಅದನ್ನು ಗುರುತಿಸಿ ಸ್ಪಷ್ಟವಾಗಿ ಖಂ ಬಿಡುತ್ತಿದ್ದರು. ಜನರ ಮನಸ್ಸನ್ನು ಆ ಮಾಲಿನ್ಯಗಳಿಂದ ಮುಕ್ತಗೊಳಿಸುವಲ್ಲಿ ಅವರು ಸ್ವಲ್ಪ ವಿಳಂಬ ಮಾಡುತ್ತಿರಲಿಲ್ಲ.

ಬನೀ ಮುಸ್ತಲಿಕ್ ಯುದ್ಧದ ಸಂದರ್ಭದಲ್ಲಿ ಮದೀನಾದ ಓರ್ವ ಸಹಾಬಿ ಮ ಮಕ್ಕಾದ ಓರ್ವ ಸಹಾಬಿಯ ನಡುವೆ ಜಗಳವಾಯಿತು. ಮಕ್ಕಾದ ವ್ಯಕ್ತಿ ಮದೀನಾದ ವ್ಯಕ್ತಿ ಬೆನ್ನಿಗೆ ಒದ್ದರು. ತಕ್ಷಣವೇ ಮದೀನಾದ ಆ ವ್ಯಕ್ತಿ 'ಯಾಅಲ್ ಅನ್ಸಾರ್!' (ಮದೀನ ಮುಸ್ಲಿಮರೇ! ಬನ್ನಿ!) ಎಂದು ಕೂಗಿದರು. ಇದಕ್ಕುತ್ತರವಾಗಿ ಮಕ್ಕಾದ ವ್ಯಕ್ತಿ 'ಯಾ ಮುಹಾಜಿರೀನ್' (ಮದೀನಾಗೆ ವಲಸೆ ಬಂದ ಮಕ್ಕಾದ ಮುಸ್ಲಿಮರೇ ಬನ್ನಿ!) ಎಂದು ತ ಸಂಗಡಿಗರನ್ನು ಕರೆದರು.

ಆ ಕೂಗು ಪ್ರವಾದಿ ಮುಹಮ್ಮದ್(ಸ)ರ ಕಿವಿಗೆ ಬಿದ್ದೊಡನೆ ಅವರು ಹೇಳಿದರು: ಇದ ಅಜ್ಞಾನದ ಕೂಗು! ಇದನ್ನೆಲ್ಲಾ ತೊರೆಯಿರಿ, ಇದು ಅತ್ಯಂತ ಮಲಿನ ಕೂಗು.

(ಬುಖಾರಿ, ಭಾಗ-2, ಕಿತಾಬುತ್ತಫ್ಸೀ

ಇಲ್ಲಿ 'ಯಾಅಲ್ ಅನ್ಸಾರ್' ಮತ್ತು 'ಯಾಅಲ್ ಮುಹಾಜಿರೀನ್' ಎಂಬ ಈ
ಂಗೀಯ ಅಥವಾ ಪ್ರಾದೇಶಿಕತೆಯ ಘೋಷಣೆಗಳು ಕೇವಲ ಒಂದು ತಾತ್ಕಾಲಿಕ
ಕದ ಸಂದರ್ಭದಲ್ಲಷ್ಟೇ ಕೇಳಿಸಿದ್ದುವು. ಅದು ಒಂದು ಯೋಜಿತ ಸಿದ್ಧಾಂತದ ಆಧಾರದಲ್ಲಿ
ತಲಾದ ಗುಂಪುಗಾರಿಕೆಯ ಕರೆ ಆಗಿರಲಿಲ್ಲ. ಆದರೂ ಕೂಡಾ ಪ್ರವಾದಿ ಮುಹಮ್ಮದ್(ಸ)
ಈ ಶಬ್ದಗಳು ಎಷ್ಟು ಅಪ್ರಿಯವೆನಿಸಿತೆಂದರೆ ಅವರು, ಇವು ಮಾತುಗಳೇ ಅಲ್ಲ ಇವೆಲ್ಲಾ
ಲಿನ್ಯಗಳು, ಮುಸ್ಲಿಮರ ಬಾಯಿಂದ ಇಂಥ ಮಾಲಿನ್ಯ ಎಂದೂ ಹೊರಡಲೇ ಬಾರದು
ದರು. ಈ ಮೂಲಕ ಅವರು ನೈಜ ಸತ್ಯವಿಶ್ವಾಸದ ಸ್ವಚ್ಛ ಪ್ರವೃತ್ತಿಯು ಇಂಥ ಮಾಲಿನ್ಯವನ್ನು
ತ್ತೂ ಸಹಿಸಲಾರದೆಂಬುದನ್ನು ಸ್ಪಷ್ಟಪಡಿಸಿದರು.

ಹೀಗೆ, 'ಅಜ್ಞಾನ' ಮತ್ತು 'ಸಂಕುಚಿತತೆ'ಯ ಕಡೆಗೆ ಜನರನ್ನು ಆಹ್ವಾನಿಸುವವನು
್ಲಮೀ ಸಮಾಜದಲ್ಲಿ ನೀಚನೆಂದೂ, ನರಕದ ಇಂಧನವೆಂದೂ ಪರಿಗಣಿಸಲ್ಪಡುವಾಗ,
ನ ಆಹ್ವಾನಕ್ಕೆ ಓಗೊಡುವ ವ್ಯಕ್ತಿ ಮಾತ್ರ ಸ್ವರ್ಗಕ್ಕೆ ಅರ್ಹನೆಂದೂ, ಸಮುದಾಯದ
ವಾನ್ವಿತ ಅಂಗವೆಂದೂ ಪರಿಗಣಿತನಾಗುವುದಿಲ್ಲ. ಸ್ವಾಭಾವಿಕವಾಗಿಯೇ,
್ಞಾನದ ಕರೆಕೊಡುವವನಿಗೆ ಸಿಗುವ ಸ್ಥಾನಮಾನವೇ, ಆ ಕರೆಗೆ ಓಗೊಡುವವನಿಗೂ
ತ್ತದೆ. ಆದ್ದರಿಂದಲೇ ಪ್ರವಾದಿವರ್ಯರು(ಸ) 'ಅಸಬಿಯ್ಯ(ಸಂಕುಚಿತತೆ)ದ ಕಡೆಗೆ
್ವಾನಿಸುವವನು ನಮ್ಮವನಲ್ಲ' ಎಂದು ಹೇಳಿರುವಂತೆಯೇ. 'ಸಂಕುಚಿತತೆಯ ಆಧಾರದಲ್ಲಿ
ದ್ಧ ಮಾಡಿದವನಾಗಲೀ, ಯಾವುದಾದರೂ ಸಂಕುಚಿತ ಉದ್ದೇಶಕ್ಕಾಗಿ ಪ್ರಾಣ ಬಲಿ
ಕುವವನಾಗಲೀ ನಮ್ಮವನಲ್ಲ' ಎಂದೂ ಹೇಳಿರುವರು.

ಒಟ್ಟಿನಲ್ಲಿ ಧರ್ಮದ ಹೊರತು ಬೇರಾವುದೇ ಸಂಬಂಧದ ಆಧಾರದಲ್ಲಿ ಮುಸಲ್ಮಾನರು,
ಸಲ್ಮಾನರೆಂಬ ನೆಲೆಯಲ್ಲಿ ಒಂದುಗೂಡಲು ಅಥವಾ ಅಂಥ ಒಕ್ಕೂಟವು ಇಸ್ಲಾಮೀ
ಟನೆ ಎನಿಸಿಕೊಳ್ಳಲು ಸಾಧ್ಯವೇ ಇಲ್ಲ. ಇಸ್ಲಾಮ್ ಅಲ್ಲದ ಬೇರಾವುದೇ ಆಧಾರದಲ್ಲಿ
ಸಲ್ಮಾನರು ಒಂದು ಒಕ್ಕೂಟ ರಚಿಸಿದ್ದರೆ ಅದನ್ನು ನೀವು ಇನ್ನಾವ ಹೆಸರಿನಿಂದ ಕರೆದರೂ
್ಲಮೀ ಒಕ್ಕೂಟವೆಂದು ಕರೆಯಲು ಮಾತ್ರ ಸಾಧ್ಯವಾಗದು. ಮೇಲೆ ಹೇಳಲಾಗಿರುವ
ಶಗಳು ಅದನ್ನೇ ನಿಷ್ಕಳಂಕವಾಗಿ ಶ್ರುತಪಡಿಸುತ್ತದೆ.

## ಘಟನಾ ವಿಧಾನ

ಇದೀಗ ಈ ವಿಷಯದಲ್ಲಿ ಒಂದು ಪ್ರಶ್ನೆ ಮಾತ್ರ ಚರ್ಚೆಗೆ ಉಳಿಯುತ್ತದೆ. ಈ ಅಪೇಕ್ಷಿತ
ಟನಾ ವ್ಯವಸ್ಥೆಯನ್ನು ಕಾರ್ಯರೂಪಕ್ಕೆ ತರುವುದು ಹೇಗೆ ಎಂಬುದೇ ಆ ಪ್ರಶ್ನೆ. ಈ ಹಿಂದೆ
ಕ್ಕೆ ಸಂಬಂಧಿಸಿ ಇನ್ನೆರಡು ಪ್ರಾಮುಖ್ಯ ಅಂಶಗಳ ಬಗ್ಗೆ ನಡೆದ ಚರ್ಚೆಗಳ ಆಧಾರದಲ್ಲಿ ಈ
ಯ ಉತ್ತರವನ್ನು ಕಂಡುಕೊಳ್ಳಬಹುದು. ಆದರೆ ಇಲ್ಲಿ ಕೂಡಾ ನಾವು ನಮ್ಮ ಊಹೆಗಳ
ಲು ಧರ್ಮದ ಸ್ಪಷ್ಟ ನಿರ್ದೇಶನಗಳ ಆಧಾರದಲ್ಲೇ ಏನಾದರೂ ಅಭಿಪ್ರಾಯ ತಾಳುವುದು
ತ್ಯ. ಏಕೆಂದರೆ ಪ್ರಸ್ತುತ ಪ್ರಶ್ನೆ ಅಷ್ಟು ಮಹತ್ವವುಳ್ಳದ್ದಾಗಿದೆ. ಈ ದೃಷ್ಟಿಯಿಂದ ನಾವು ಪವಿತ್ರ

ಕುರ್‌ಆನ್‌ನ ಅಧ್ಯಯನ ಮಾಡಿದರೆ ನಮಗೆ ಆಲಿ ಇಮ್ರಾನ್ ಅಧ್ಯಾಯದಲ್ಲಿ ಮುಸಲ್ಮಾನ
ಒಂದು ಸಂಘಟಿತ ಬದುಕು ಸಾಗಿಸಲು ಬೇಕಾದ ಸಮಗ್ರ ನಿರ್ದೇಶನ ಕೊಟ್ಟಿರುವು
ಕಾಣಿಸುತ್ತದೆ. ಅದರ ಆರಂಭದ ವಾಕ್ಯ ಹೀಗಿದೆ:

**''ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ, ಭಯಪಡಬೇಕಾದ ರೀತಿಯಲ್ಲಿ, ನಿ ಅಲ್ಲಾಹನ ಆಜ್ಞಾನುಸಾರಿಗಳಲ್ಲದ ಸ್ಥಿತಿಯಲ್ಲಿ ನಿಮಗೆ ಮರಣ ಬಾರದಿರಲಿ.''**

**(ಸೂರಃ ಆಲಿ ಇಮ್ರಾ**

ಈ ವಾಕ್ಯದ ಬಳಿಕ **'ಅಲ್ಲಾಹನ ಪಾಶವನ್ನು ಭದ್ರವಾಗಿ ಹಿಡಿಯಿರಿ'** ಎಂಬ ವಾಕ್ಯವಿ
ಈ ಕುರಿತು ಈಗಾಗಲೇ ನಾವು ಚರ್ಚಿಸಿದ್ದೇವೆ. ಒಟ್ಟಿನಲ್ಲಿ ಈ ವಾಕ್ಯವು ಈ ಕುರಿತು ಇರ
ಆದೇಶಗಳ ಮೊದಲ ಪರಿಚ್ಛೇದವಾಗಿದ್ದು, 2ನೇ ಪರಿಚ್ಛೇದದಲ್ಲಿರುವ ಆದೇಶವು ಪೂರ್ಣವ
ಇದನ್ನೇ ಅವಲಂಬಿಸಿದೆ. ಧರ್ಮವೇ ಬುನಾದಿಯಾಗಿರುವ ತನಕ ಇಸ್ಲಾಮೀ ಸಾಮೂಹಿ
ಅಸ್ತಿತ್ವಕ್ಕೆ ಬರುವುದು ಅಸಾಧ್ಯವಾಗಿರುವಂತೆಯೇ ಮುಸ್ಲಿಮರು ನಿಜಾರ್ಥದಲ್ಲಿ ಧರ್ಮ ವಿ
ಗಳಾಗುವ ತನಕ, ದೇವಭಕ್ತಿ ಅವರ ಮನಗಳಲ್ಲಿ ಮನೆಮಾಡಿಕೊಳ್ಳುವ ತನಕ ಮತ್ತು ಸಂಪೂ
ಧರ್ಮಾನುಸರಣೆಯ ನಿಟ್ಟಿನಲ್ಲಿ ಅವರು ಕ್ರಿಯಾಶೀಲರಾಗುವ ತನಕ ಧರ್ಮವು ಅ
ಸಾಮೂಹಿಕ ವ್ಯವಸ್ಥೆಯ ಬುನಾದಿಯಾಗುವುದು ಅಸಾಧ್ಯ. ಇದು ಈ ಸಾಮೂಹಿಕ ವ್ಯವಸ್ಥೆ
ಸದಸ್ಯರಾಗಲು, ಸದಸ್ಯರಾಗಿ ಇತರರನ್ನು ಸೇರಿಸಲು ಮತ್ತು ಸದಸ್ಯರಾಗಿ ಮುಂದುವರಿಯ
ಇರುವ ಪ್ರಪ್ರಥಮ, ಕಡ್ಡಾಯ ನಿಬಂಧನೆಯಾಗಿದೆ. ಈ ನಿಬಂಧನೆಯನ್ನು ಪೂರ್ತಿಗೊಳಿಸ
ತನಕ ಯಾರೂ ಈ ಸಂಘಟನೆಗೆ ಸೇರುವಂತಿಲ್ಲ, ಇತರರನ್ನು ಸೇರಿಸುವಂತೆಯೂ ಇಲ್ಲ.
ವ್ಯಕ್ತಿಯಲ್ಲಿ ಈ ಗುಣಗಳು ಎಷ್ಟು ಉನ್ನತ ಮಟ್ಟದಲ್ಲಿರುವುದೋ, ಅವನು ಈ ಸಂಘಟನೆ
ಅಷ್ಟೇ ಉತ್ತಮ ಗುಣ ಮಟ್ಟದ, ಅಷ್ಟೇ ಉಪಯುಕ್ತ ಸದಸ್ಯನಾಗುವನು. ಇನ್ನು ಒಬ್ಬ ವ್ಯಕ್ತಿ
ಈ ಗುಣಗಳು ಎಷ್ಟೇ ದುರ್ಬಲ ಸ್ವರೂಪದಲ್ಲಿರುವವೋ, ಈ ಸಂಘಟನೆಯೊಂದಿಗೆ ಅ
ಸಂಬಂಧವೂ ಅಷ್ಟೇ ದುರ್ಬಲ ಹಾಗೂ ಅವಿಶ್ವಸನೀಯವಾಗಿರುವುದು.

ಅಲ್ಲಾಹನ ಧರ್ಮದ ಮೇಲೆ ವಿಶ್ವಾಸವಿಟ್ಟು, ಅವನ ಆದೇಶಗಳನ್ನು ಪಾಲಿಸುವ ಶ
ಕೈಗೊಂಡವರನ್ನು ಮಾತ್ರ ಈ ಸಂಘಟನೆಯ ಸದಸ್ಯರಾಗಿ ಮಾಡಬೇಕು ಎಂಬುದು ಈ ವ್ಯವಸ್ಥೆ
ಪ್ರಸ್ತುತ ಸ್ವರೂಪದ ಬೇಡಿಕೆಯಾಗಿರುವಂತೆಯೇ, ಇದರ ಸದಸ್ಯರಾಗಿ ಸೇರಿಕೊಂಡವ
ಪ್ರಸ್ತುತ ಗುಣಗಳನ್ನು ಬೆಳೆಸಲು ಮತ್ತು ನಿರಂತರ ಬೆಳೆಸುತ್ತಾ ಇರಲು ಬೇಕಾದ ಸೂಕ್ತ ಏರ್ಪಾ
ಮಾಡಬೇಕೆಂಬುದು ಕೂಡಾ ಅದರ ಬೇಡಿಕೆಯಾಗಿದೆ.

ಆದ್ದರಿಂದಲೇ ಪವಿತ್ರ ಕುರ್‌ಆನ್‌ನ ಈ ಆದೇಶವು, ಮೇಲೆ ಪ್ರಸ್ತಾಪಿಸಲಾದ ವಾಕ್ಯಗ
ಕೊನೆಗೊಳ್ಳದೆ ಮುಂದುವರಿದು ಹೀಗೆನ್ನುತ್ತದೆ:

**''ನಿಮ್ಮಲ್ಲಿ ಜನರನ್ನು ಸತ್ಕಾರ್ಯದೆಡೆಗೆ ಆಮಂತ್ರಿಸುವ, ಒಳ್ಳೆಯದನ್ನು ಆದೇಶಿ ಮತ್ತು ದುರಾಚಾರಗಳಿಂದ ತಡೆಯುವ ಒಂದು ಸಮುದಾಯ ಇರಲೇಬೇಕು.''**

ಇದು ಈ ಆದೇಶದ ತೃತೀಯ ಮತ್ತು ಕೊನೆಯ ಪರಿಚ್ಛೇದವಾಗಿದೆ. ಒಂದರ್ಥದಲ್ಲಿ ಇದು ಮೊದಲ ಪರಿಚ್ಛೇದದ ಪೂರ್ತೀಕರಣವೂ ಹೌದು. 'ಅಲ್ಲಾಹನ ಪಾಶ'ದ ಆಧಾರದಲ್ಲಿ ಸತ್ಯವಿಶ್ವಾಸಿಗಳು ಒಂದುಗೂಡಿದಾಗ ರೂಪುಗೊಳ್ಳುವ ಸಂಘಟನೆ ತನ್ನ ವೃತ್ತದ ಒಳಗೂ ಹೊರಗೂ, ಸತ್ಕಾರ್ಯದೆಡೆಗೆ ಜನರನ್ನು ಆಮಂತ್ರಿಸುವ, ಒಳಿತನ್ನು ಆದೇಶಿಸುವ ಮತ್ತು ಈಮಾನ್ (ಧರ್ಮವಿಶ್ವಾಸ) ಇಸ್ಲಾಮ್ (ವಿಧೇಯ) ಹಾಗೂ ತಕ್ವಾ(ದೇವಭಕ್ತಿ)ಗೆ ವಿರುದ್ಧವಾಗಿರುವ ಎಲ್ಲವನ್ನೂ ಕಂಡಲ್ಲಿ ತಡೆಯುವ ಕೆಲಸವನ್ನು ಮಾಡುತ್ತಲೇ ಇರಬೇಕಾದುದು ಅತ್ಯವಶ್ಯಕ. ಹೀಗಿದ್ದಾಗ ಮಾತ್ರ ಈ ಸಂಘಟನೆಗೆ ಸೇರುವುದಕ್ಕೆ ಅನಿವಾರ್ಯವಾಗಿ ಇರಬೇಕಾದ ಗುಣಗಳು ಅದಕ್ಕೆ ಸೇರಿದವರಲ್ಲಿ ಬೆಳೆಯಲು ಅಸಾಧ್ಯ.

ಆದ್ದರಿಂದಲೇ, ಪ್ರವಾದಿ ಮುಹಮ್ಮದ್(ಸ) ಅವರ ಮೂಲಭೂತ ಕರ್ತವ್ಯಗಳ ಪೈಕಿ 'ಸಂಸ್ಕರಣೆ'ಯೂ ಒಂದಾಗಿತ್ತು. ಅವರ ಮೇಲೆ ಅಲ್ಲಾಹನು, ಜನರನ್ನು ಸತ್ಯ ಧರ್ಮದೆಡೆಗೆ ಆಹ್ವಾನಿಸುವ, ವಿಶ್ವಾಸಿಗಳಿಗೆ ಅಲ್ಲಾಹನ ವಾಕ್ಯಗಳನ್ನು ಕೇಳಿಸುವ, ದೇವ ಗ್ರಂಥವನ್ನು ಕಲಿಸಿಕೊಡುವ ಮತ್ತು ಧರ್ಮದ ಯುಕ್ತಿಯನ್ನು ತಿಳಿಸುವ ಹೊಣೆಗಾರಿಕೆಯನ್ನು ವಹಿಸಿಕೊಟ್ಟಂತೆಯೇ ಈ ಧರ್ಮವನ್ನು ಸ್ವೀಕರಿಸಿದವರ ಜ್ಞಾನ, ಕರ್ಮ ಮತ್ತು ಚಾರಿತ್ರ್ಯವನ್ನು ಸುಧಾರಿಸುವ ಹೊಣೆಯನ್ನು ಹೊರಿಸಿದ್ದನು. ಪ್ರವಾದಿ ಮುಹಮ್ಮದ್‌ರಿಗೆ(ಸ) ತಮಗೆ ವಹಿಸಿಕೊಡಲಾದ ಕರ್ತವ್ಯಗಳಿಂದ ಎಳ್ಳಷ್ಟೂ ವ್ಯತಿಚಲಿಸಲು ಸಾಧ್ಯವಿರಲಿಲ್ಲ. ಆದ್ದರಿಂದಲೇ ಪ್ರವಾದಿ ಮುಹಮ್ಮದ್(ಸ) ಅವರು 'ಮುಸ್ಲಿಮ್ ಸಮುದಾಯ'ಕ್ಕೆ ರೂಪ ಕೊಡುವಾಗ ಇದಕ್ಕಿಂತ ಕಡಿಮೆ ಯಾವುದರಲ್ಲೂ ತೃಪ್ತರಾಗಲಿಲ್ಲ ಅಥವಾ ಇದಕ್ಕಿಂತ ಹೆಚ್ಚಿನದೇನನ್ನೂ ಅವರು ಬಯಸಿದ್ದೂ ಇಲ್ಲ. ಪ್ರವಾದಿವರ್ಯರು(ಸ) ಅಲ್ಲಾಹನ ದಾಸರನ್ನು ಕೇವಲ ಅವನೊಬ್ಬನ ಆರಾಧನೆಯೆಡೆಗೆ ಆಮಂತ್ರಿಸುತ್ತಿದ್ದರು. ಈ ಆಮಂತ್ರಣವನ್ನು ಅಂಗೀಕರಿಸಿದವರನ್ನು ಮಾತ್ರ 'ಸಮುದಾಯ'ಕ್ಕೆ ಸೇರಿಸುತ್ತಿದ್ದರು. ಒಮ್ಮೆ ಒಬ್ಬ ವ್ಯಕ್ತಿ ಈ ಸಮುದಾಯದ ಸದಸ್ಯನಾಗಿ ಬಿಟ್ಟನೆಂದರೆ ತಕ್ಷಣವೇ ಅವರು ಅವನ ತರಬೇತಿಯನ್ನು ಆರಂಭಿಸುತ್ತಿದ್ದರು. ಅವರಲ್ಲಿ ವಿಶ್ವಾಸ, ಅನುಸರಣಾ ಪ್ರಜ್ಞೆ ಮತ್ತು ದೇವಭಕ್ತಿಯನ್ನು ಉದ್ದೀಪನಗೊಳಿಸುತ್ತಿದ್ದರು. ಪ್ರವಾದಿತ್ವದ ಈ ಒಟ್ಟು ಕಾರ್ಯಭಾರದ ಪರಿಣಾಮವಾಗಿಯೇ ಕೊನೆಗೊಮ್ಮೆ ಒಂದು ಇಸ್ಲಾಮೀ ಸಂಘಟನಾ ವ್ಯವಸ್ಥೆ ಮತ್ತು ಮುಸ್ಲಿಮ್ ಸಮುದಾಯವು ಅಸ್ತಿತ್ವ ಪಡೆಯಿತು.

# ಇಸ್ಲಾಮೀ ಸಾಮೂಹಿಕತೆಯ ಪರಿಪೂರ್ಣ ರೂಪ

## ಆಡಳಿತ ವ್ಯವಸ್ಥೆಯ ಅನಿವಾರ್ಯ ಅಗತ್ಯ

ಒಂದು ಆಡಳಿತ ವ್ಯವಸ್ಥೆಯ ಸ್ಥಾಪನೆಯೇ ಸಾಮೂಹಿಕತೆಯ ಪರಮ ಗುರಿ ಹಾಗೂ ಅಂತಿಮ ಘಟ್ಟವಾಗಿದೆ. ಇಂಥ ಒಂದು ವ್ಯವಸ್ಥೆ ವಸ್ತುತಃ ಅಪೇಕ್ಷಣೀಯವಲ್ಲದಿದ್ದರೂ ಪ್ರಾಯೋಗಿಕವಾಗಿ ಅದು ಮನುಷ್ಯ ಸಮಾಜದ ಒಂದು ಅನಿವಾರ್ಯ ಅಗತ್ಯವಾಗಿದೆ. ಮನುಷ್ಯರು ತಮ್ಮ ಪ್ರಾಕೃತಿಕ ಅಗತ್ಯ ಹಾಗೂ ತಮ್ಮ ನೈಸರ್ಗಿಕ ಬೇಡಿಕೆಗಳಿಂದಾಗಿ ಸಾಮೂಹಿಕ ಬದುಕು ಸಾಗಿಸಲು ನಿರ್ಬಂಧಿತರಾಗುತ್ತಾರೆಂಬುದು ಒಂದು ವಾಸ್ತವ. ಹಾಗೆಯೇ ಅವರ ಈ ಸಾಮೂಹಿಕ ಬದುಕು ಕೆಲವಾರು ಸಮಸ್ಯೆಗಳಿಗೆ ಜನ್ಮ ಕೊಡುತ್ತದೆ ಎಂಬುದೂ ಅಷ್ಟೇ ಮಹತ್ವದ ವಾಸ್ತವಿಕತೆಯಾಗಿದೆ. ಈ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಾದುದು ಬಹಳ ಅಗತ್ಯ. ಮಗುವಿಗೆ ತಾಯಿಯ ಮಡಿಲು ಮತ್ತು ತಂದೆಯ ಆಶ್ರಯ ಎಷ್ಟು ಅನಿವಾರ್ಯವೋ, ಮನುಷ್ಯ ಸಮಾಜದಲ್ಲಿ ಈ ಸಮಸ್ಯೆಗಳನ್ನು ಬಗೆಹರಿಸುವ ಯಂತ್ರವು ಸಕ್ರಿಯವಾಗಿರಬೇಕಾದುದೂ ಅಷ್ಟೇ ಅನಿವಾರ್ಯ. ಏಕೆಂದರೆ ಒಂದೆಡೆ ಈ ಸಮಸ್ಯೆಗಳು ಶಾಶ್ವತವಾಗಿ ಅಸ್ತಿತ್ವದಲ್ಲಿರುತ್ತವೆಯಾದರೆ ಇನ್ನೊಂದೆಡೆ ಇವು ಬಹಳ ಪ್ರಾಮುಖ್ಯ ಸ್ವರೂಪದ ಸಮಸ್ಯೆಗಳಾಗಿರುತ್ತವೆ.

ಪ್ರಸ್ತುತ ಸಮಸ್ಯೆಗಳು ಹೊರಗಿನಿಂದ ಬರುವಂತಹದ್ದಲ್ಲ. ಹಾಗಿರುತ್ತಿದ್ದರೆ ಅವು ಒಮ್ಮೊಮ್ಮೆ ಮಾತ್ರ ತಲೆದೋರುತ್ತಿದ್ದವು. ಆದರೆ ನಿಜವಾಗಿ ಅವು ಸಮಾಜದೊಳಗೆ ಮನುಷ್ಯ ಪ್ರವೃತ್ತಿಗಳಿಂದಲೇ ಜನ್ಮ ತಾಳುವ ಸಮಸ್ಯೆಗಳಾದ್ದರಿಂದ ಆ ಮೂಲ ಪ್ರವೃತ್ತಿಯನ್ನು ಮನುಷ್ಯನು ಹತ್ತಿಕ್ಕುವ ತನಕವೂ ಈ ಸಮಸ್ಯೆಗಳು ಮುಂದುವರಿಯುತ್ತಲೇ ಇರುತ್ತವೆ. ಆ ಮೂಲ ಪ್ರವೃತ್ತಿಯನ್ನೇ ಬದಲಿಸಿಬಿಡಬೇಕೆಂದರೆ, ಅದು ಕನಿಷ್ಠ ಪಕ್ಷ 99% ಮಂದಿಗೆ ಸಾಧ್ಯವಿಲ್ಲದ ಮಾತು. ಆದ್ದರಿಂದಲೇ ಈ ಸಮಸ್ಯೆಗಳು ಮನುಷ್ಯ ಮತ್ತವನ ಪ್ರವೃತ್ತಿಗೆ ನಿಖರವಾಗಿ, ಶಾಶ್ವತವಾಗಿ ಹಾಗೂ ನಿರಂತರವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

ಇನ್ನು ಈ ಸಮಸ್ಯೆಗಳು ಸಾಮೂಹಿಕತೆ ಅಥವಾ ಸಾಮಾಜಿಕತೆಯ ಮೂಲ ಉದ್ದೇಶಕ್ಕೆ ಕತ್ತರಿ ಹಾಕುತ್ತವೆ. ಇವುಗಳ ಉಪಸ್ಥಿತಿಯಲ್ಲಿ ಸಾಮೂಹಿಕತೆಯು ತನ್ನ ಮೂಲ ಉದ್ದೇಶಕ್ಕೆ

ತದ್ವಿರುದ್ಧವಾದ ಫಲಿತಾಂಶಗಳನ್ನು ಕೊಡುತ್ತದೆ. ಆದ್ದರಿಂದ ಈ ಸಮಸ್ಯೆಗಳು ಶಾಶ್ವತ ಸ್ವರೂಪದ್ದಾಗಿರುವ ಜೊತೆಗೇ ಬಹಳ ಪ್ರಾಮುಖ್ಯವೂ ಆಗಿವೆ.

ಮನುಷ್ಯನಲ್ಲಿ ಒಳಿತನ್ನು ಮಾಡುವ ಸಾಮರ್ಥ್ಯ ಇರುವಂತೆಯೇ, ಅದರ ಜೊತೆ ಜೊತೆಗೇ ಕೆಡುಕಿನ ಸಾಮರ್ಥ್ಯವೂ ಸಕ್ರಿಯವಾಗಿ ಇರುತ್ತದೆ. ಮನುಷ್ಯ ಪ್ರವೃತ್ತಿಯ ಈ ವರೆಗಿನ ಇತಿಹಾಸವು ಅದನ್ನೇ ಸೂಚಿಸುತ್ತದೆ. ಈ ಕುರಿತು ಪವಿತ್ರ ಕುರ್‌ಆನ್ ಬಹಳ ಸ್ಪಷ್ಟವಾಗಿ ಹೀಗೆನ್ನುತ್ತದೆ:

**''(ಅಲ್ಲಾಹನು) ಮನುಷ್ಯನಿಗೆ ಭ್ರಷ್ಟತೆ ಮತ್ತು ಸತ್ಯಸಂಧತೆ ಎರಡನ್ನೂ ತೋರಿಸಿ ಕೊಟ್ಟಿರುವನು.'' (ಸೂರಃ ಅಶ್ಶಮ್ಸ್: 8)**

ಹೀಗಿರುತ್ತಾ, ಹಲವಾರು ಮನುಷ್ಯರು ತಮ್ಮ ಈ ತದ್ವಿರುದ್ಧ ಪ್ರವೃತ್ತಿಗಳೊಂದಿಗೆ ಜೊತೆಯಾಗಿ ಜೀವಿಸಿದರೆ ನಾವಿಂದು ಕಾಣುತ್ತಿರುವಂತಹ ಸಮಸ್ಯೆ-ಗೊಂದಲಗಳು ಉದ್ಭವಿಸುವುದು ತೀರಾ ಸ್ವಾಭಾವಿಕ. ಇಂಥ ಸಮಾಜದಲ್ಲಿ ಸಹಜವಾಗಿಯೇ ಜನರ ಹಿತಾಸಕ್ತಿಗಳು ಪರಸ್ಪರ ವಿರುದ್ಧವಾಗಿರಬಹುದು. ಇದರ ಪರಿಣಾಮವಾಗಿ ಎರಡು ತದ್ವಿರುದ್ಧ ಹಿತಾಸಕ್ತಿಗಳ ಮಧ್ಯೆ ಸಂಘರ್ಷ ಏರ್ಪಡಬಹುದು. ಸ್ವಾರ್ಥದಿಂದಾಗಿ ಒಬ್ಬರು ಇನ್ನೊಬ್ಬರಿಗೆ ಅನ್ಯಾಯ ಮಾಡಬಹುದು. ಸಬಲರು ದುರ್ಬಲರ ಹಕ್ಕುಗಳನ್ನು ಕಿತ್ತುಕೊಳ್ಳಬಹುದು. ಜನರ ಪ್ರಾಣ, ಮಾನ, ಸೊತ್ತು-ವಿತ್ತಗಳಿಗೆ ಯಾವುದೇ ಭದ್ರತೆ, ಸುರಕ್ಷಿತತೆ ಇರಲಾರದು. ಒಟ್ಟಿನಲ್ಲಿ ಮನುಷ್ಯನು ತನ್ನ ಸುಖಕ್ಕೆ ಅನಿವಾರ್ಯವೆಂದು ಭಾವಿಸಿ ಸ್ವೀಕರಿಸಿದ್ದ ಸಾಮೂಹಿಕತೆಯೇ ಈ ರೀತಿ ಅವನ ಪಾಲಿಗೆ ಒಂದು ಮಹಾ ಕಂಟಕವಾಗಿ ಮಾರ್ಪಡುತ್ತದೆ.

ಇಂಥ ಪರಿಸ್ಥಿತಿಯಲ್ಲಿ ಈ ಬಿಕ್ಕಟ್ಟಿನಿಂದ ಪಾರಾಗಲು ಮನುಷ್ಯನಿಗೆ ಎರಡು ದಾರಿಗಳು ಮಾತ್ರ ಉಳಿಯುತ್ತವೆ. ಮೊದಲನೆಯ ದಾರಿ, ಸಾಮೂಹಿಕ ಬದುಕನ್ನೇ ತ್ಯಜಿಸುವುದು. ಎರಡನೆಯದು, ಈ ಸಮಸ್ಯೆಗೆ ಪ್ರಾಯೋಗಿಕವಾದ ಪರಿಹಾರವೊಂದನ್ನು ಕಂಡುಕೊಳ್ಳುವುದು.

ಈ ಪೈಕಿ ಮೊದಲನೆಯ ಮಾರ್ಗ ಅಪ್ರಾಯೋಗಿಕ. ಏಕೆಂದರೆ ಸಮಾಜದ ಸಮಸ್ಯೆಗಳಿಗೆ ಅಂಜಿ ಸಮಾಜದಿಂದಲೇ ಬೇರ್ಪಡುವ ಈ ಪಲಾಯನವಾದವನ್ನು ಮನುಷ್ಯನ ಮೂಲ ಪ್ರಕೃತಿಯಾಗಲೀ, ಅವನ ಆರ್ಥಿಕತೆ, ಸ್ವರ ರಕ್ಷಣೆ ಮುಂತಾದ ಹಿತಾಸಕ್ತಿಗಳಾಗಲೀ ಅನುಮತಿಸುವುದಿಲ್ಲ.

ಆದ್ದರಿಂದ ತನ್ನ ಶಾಶ್ವತ ಹಾಗೂ ಪ್ರಾಮುಖ್ಯ ಸಮಸ್ಯೆಗಳಿಗೆ ಅಷ್ಟೇ ಶಾಶ್ವತ ಹಾಗೂ ಪರಿಣಾಮಕಾರಿಯಾದ ಪರಿಹಾರವೊಂದನ್ನು ಕಂಡುಕೊಳ್ಳುವ ಎರಡನೆಯ ದಾರಿ ಮಾತ್ರ ಅವನ ಮುಂದೆ ಉಳಿಯುತ್ತದೆ. ಅಂದರೆ ಅವನಿಗೆ ಮನುಷ್ಯರ ಅಗತ್ಯ ಮತ್ತು ಹಿತಾಸಕ್ತಿಗಳು ಪರಸ್ಪರ ತದ್ವಿರುದ್ಧವಾಗಿ ಸಾಗುತ್ತಾ ಸಂಘರ್ಷಕ್ಕೆ ಇಳಿಯದಂತೆ ನೋಡಿಕೊಳ್ಳಬಲ್ಲ, ಅನ್ಯಾಯಕ್ಕೆ ಹೊರಟ ಕೈಯನ್ನು ತಡೆದು ನಿಲ್ಲಿಸಬಲ್ಲ, ದುರ್ಬಲರನ್ನು ಸಂರಕ್ಷಿಸಬಲ್ಲ ಮತ್ತು ಅನ್ಯಾಯಕ್ಕೊಳಗಾದವರ ಬೆಂಬಲಕ್ಕೆ ನಿಂತು ಅವರಿಗೆ ಅವರ ಹಕ್ಕನ್ನು ಮರಳಿ ಕೊಡಬಲ್ಲ ಒಂದು ವ್ಯವಸ್ಥೆಯ ಅಗತ್ಯವಿದೆ. ಈ ಅಗತ್ಯದ ಇನ್ನೊಂದು ಹೆಸರೇ ಸರಕಾರ ಅಥವಾ ಆಡಳಿತ ವ್ಯವಸ್ಥೆ.

ಆದರೆ ಒಂದು ಸುಭದ್ರ ಆಡಳಿತ ಮಾತ್ರವೇ ಸಮಾಜದಲ್ಲಿ ನ್ಯಾಯ ಮತ್ತು ಶಾಂತಿಯನ
ಸ್ಥಾಪಿಸಬಲ್ಲುದು ಮತ್ತು ಅದನ್ನು ಕಾಪಾಡಬಲ್ಲುದು. ಇದೊಂದು ವ್ಯಕ್ತ ಸತ್ಯವಾಗಿದ
ಮಾನವ ಪ್ರವೃತ್ತಿಯ ಮೂಲಭೂತ ವೈಶಿಷ್ಟ್ಯಗಳನ್ನು ಕೂಡಾ ಕಡೆಗಣಿಸುವವರು ಮಾತ್ರ ಈ
ವಾಸ್ತವಿಕತೆಯನ್ನು ನಿರಾಕರಿಸಲು ಸಾಧ್ಯ.

ಮನುಷ್ಯನು ಸ್ವಭಾವತಃ ಸಮಾಜ ಜೀವಿಯಾಗಿದ್ದಾನೆ. ಹಾಗೆಯೇ ಅಷ್ಟೇ ನಿಖರವಾ
ಅವನ ಸ್ವಭಾವವು ಸಮಾಜದ ವಿವಿಧ ವ್ಯಕ್ತಿಗಳು ಪರಸ್ಪರರ ಮೇಲೆ ಕೈ ಮಾಡುವುದನ
ತಡೆಯಲು ಒಬ್ಬ ಅಧಿಕಾರಿ ಅಥವಾ ನಿಯಂತ್ರಕ ಇರಲೇಬೇಕು ಎಂದೂ ಅಪೇಕ್ಷಿಸುತ್ತದೆ ಎಂ
ತತ್ವಜ್ಞಾನಿ ಇಬ್ನುಖಲ್ದೂನ್‌ರ ಮಾತಿನಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆ ಇಲ್ಲ.

ಇನ್ನು, ಒಂದು ಆಡಳಿತ ವ್ಯವಸ್ಥೆ ಯಾವುದೇ ಸಮಾಜದ ಕೇವಲ ಆಂತರಿಕ ಅಗ
ಮಾತ್ರ ಆಗಿರುವುದಿಲ್ಲ, ಅದು ಎಲ್ಲ ಸಮಾಜಗಳ ಬಾಹ್ಯ ಆವಶ್ಯಕತೆಯೂ ಹೌದು. ಒಂದ
ಸರಕಾರವಿಲ್ಲದೆ ಯಾವ ಸಮಾಜವೂ ತನ್ನ ಅಸ್ತಿತ್ವ ಮತ್ತು ತನ್ನ ಹಿತಾಸಕ್ತಿಗಳನ್ನು ಸರಿಯಾ
ರಕ್ಷಿಸಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಮನುಷ್ಯ ಪ್ರವೃತ್ತಿಯ ದೌರ್ಬಲ್ಯಗಳು ವ್ಯಕ್ತಿಗಳನ
ಪರಸ್ಪರರ ವಿರುದ್ಧ ಅನ್ಯಾಯಕ್ಕೆ ಪ್ರೇರೇಪಿಸುವಂತೆಯೇ ವಿವಿಧ ಸಮಾಜ ಮತ್ತು ರಾಷ್ಟ್ರಗಳನ
ಪರಸ್ಪರರ ವಿರುದ್ಧ ಘರ್ಷಣೆಗಿಳಿಸುತ್ತವೆ. ಯಾವುದೇ ಜನಾಂಗ ತನ್ನ ವಿರುದ್ಧ ಎಂದ
ಯಾವುದೇ ಆಕ್ರಮಣ ನಡೆಯುವುದಿಲ್ಲವೆಂದು ತೃಪ್ತವಾಗಿರುವುದಿಲ್ಲ. ಹೀಗಿರುವಾ
ಪ್ರತಿಯೊಂದು ಸಮಾಜವೂ ಬಾಹ್ಯ ಆಕ್ರಮಣದಿಂದ ತನ್ನನ್ನು ರಕ್ಷಿಸಿಕೊಳ್ಳಲು ಬೇಕಾ
ಏರ್ಪಾಡು ಮಾಡಿಕೊಳ್ಳಬೇಕಾದುದು ಆ ಸಮಾಜದ ಮೂಲಭೂತ ಅಗತ್ಯವಲ್ಲದಿದ್ದ
ಕನಿಷ್ಠ ಪಕ್ಷ ಒಂದು ಪ್ರಾಮುಖ್ಯ ಆವಶ್ಯಕತೆಯಾಗಿದೆ. ಆತ್ಮ ರಕ್ಷಣೆಯ ಈ ಕರ್ತವ್ಯವನ್ನು
ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ನಿರ್ವಹಿಸಬೇಕು ಎಂದು ಹೇಳುವುದು ಸರಿಯಾದರೂ
ಈ ವಿಷಯದಲ್ಲಿ ಪ್ರತಿಯೊಬ್ಬನೂ ತನ್ನ ಇಚ್ಛೆಯಂತೆ, ತನ್ನ ಮನ ಬಂದ ರೀತಿಯಲ್ಲಿ, ತ
ಅನುಕೂಲಕ್ಕೆ ತಕ್ಕಂತೆ ಈ ಕರ್ತವ್ಯವನ್ನು ನಿರ್ವಹಿಸಬಹುದೆಂದು ನಂಬಿ ಕುಳಿತುಕೊಳ್ಳುವುದ
ಮೂರ್ಖತನವಾದೀತು. ಹೀಗಾದಲ್ಲಿ ಯಶಸ್ವಿಯಾದೀತೆಂದು ನಿರೀಕ್ಷಿಸಲು ಖಂಡಿತ
ಸಾಧ್ಯವಿಲ್ಲ.

ನಾಯಕನಿಲ್ಲದ ಯಾವುದೇ ಸೇನೆ ಒಂದು ಸುಸಂಘಟಿತ ಸೇನೆಯನ್ನು ಎದುರಿಸಿ ಗೆ
ನಿದರ್ಶನ ಇತಿಹಾಸದಲ್ಲಿ ಎಲ್ಲೂ ಸಿಗಲಾರದು. ವ್ಯಕ್ತಿಗಳು ವೈಯಕ್ತಿಕವಾಗಿ ಎಷ್ಟೇ ಧೀರ
ಶೂರರಾಗಿದ್ದರೂ, ಕರ್ತವ್ಯ ನಿಷ್ಠರಾಗಿದ್ದರೂ ಸೂಕ್ತವಾದ ನೇತೃತ್ವ ಮತ್ತು ಅನುಸರಣೆಯ
ವ್ಯವಸ್ಥೆ ಇಲ್ಲದೆ ಆ ವ್ಯಕ್ತಿಗಳು ಯಾವುದೇ ದಾಳಿಯ ವಿರುದ್ಧ ತಮ್ಮ ಸಮಾಜವನ
ರಕ್ಷಿಸಿಕೊಳ್ಳಲು ಸಾಧ್ಯವಾಗದು. ಒಟ್ಟಿನಲ್ಲಿ ಪ್ರತಿಯೊಂದು ಸಮಾಜಕ್ಕೂ ತನ್ನ ರಕ್ಷಣೆಗೆ ಒಂದ
ಆಡಳಿತ ವ್ಯವಸ್ಥೆಯ ಅಗತ್ಯ ಇದೆ ಎಂಬುದು ವಿವಾದಾತೀತ. ಈ ರಕ್ಷಣಾ ಹಿತಾಸಕ್ತಿಯು
ಮನುಷ್ಯನ ಪಾಲಿಗೆ ಸಾಮೂಹಿಕತೆಯನ್ನು ಅನಿವಾರ್ಯಗೊಳಿಸುವಂತಹ ಮೂಲಭೂ

ಅಂಶಗಳಲ್ಲಿ ಒಂದು ಎಂಬುದು ಇಲ್ಲಿ ಗಮನಾರ್ಹ. ಈ ರೀತಿ ಆಡಳಿತ ವ್ಯವಸ್ಥೆಯೊಂದರ ಸ್ಥಾಪನೆ ಒಂದು ಸಮಾಜದ ಜೀವನೋದ್ದೇಶಕ್ಕೂ ಅತ್ಯವಶ್ಯಕವಾಗಿದೆ.

## ಮುಸ್ಲಿಮ್ ಸಮಾಜ ಮತ್ತು ಆಡಳಿತ ವ್ಯವಸ್ಥೆ

ಮುಸ್ಲಿಮ್ ಸಮಾಜವೂ ಮನುಷ್ಯ ಸಮಾಜವೇ ಆಗಿದ್ದು, ಅದು ಕೂಡಾ, ಒಳಿತು-ಕೆಡುಕು ಅಥವಾ ಭ್ರಷ್ಟತೆ ಮತ್ತು ಸತ್ಯಸಂಧತೆ ಎಂಬ ಎರಡೂ ಶಕ್ತಿಗಳನ್ನು ಒಳಗೊಂಡ ವ್ಯಕ್ತಿಗಳ ಸಮ್ಮಿಲನದಿಂದಲೇ ರಚಿಸಲ್ಪಡುತ್ತದೆ. ಆದ್ದರಿಂದ ಆ ಸಮಾಜವೂ ಭ್ರಷ್ಟತೆ ಮತ್ತು ಕೆಡುಕಿನ ಪ್ರಭಾವದಿಂದ ಸಂಪೂರ್ಣ ಮುಕ್ತವಾಗಿರಲು ಸಾಧ್ಯವಿಲ್ಲ. ಏಕೆಂದರೆ ತಮ್ಮೆಲ್ಲಾ ಸಾತ್ವಿಕ ಒಲವುಗಳು ಮತ್ತು ಸತ್ಯಸಂಧತೆಯ ಹೊರತಾಗಿಯೂ ಅವರು ಮನುಷ್ಯರಾಗಿಯೇ ಉಳಿಯುತ್ತಾರೆ. ಅವರು ಅತಿಮಾನವರಂತೂ ಅಲ್ಲ. ಆದ್ದರಿಂದ ಅವರ ಸಮಾಜದಲ್ಲೂ ಮನುಷ್ಯ ಸಹಜವಾದ ದೌರ್ಬಲ್ಯಗಳು ಹಿಂದೆಯೂ ಕಂಡುಬಂದಿದ್ದವು. ಇಂದೂ ಕಂಡು ಬರುತ್ತಿವೆ, ಮುಂದೆಯೂ ಕಂಡುಬರಬಹುದು.

ಇಸ್ಲಾಮೀ ಶರೀಅತ್‌ನಲ್ಲಿ ಇರುವ ಸುದೀರ್ಘ ದಂಡಸಂಹಿತೆ ಮತ್ತು ಮೊಕದ್ದಮೆಗಳ ವಿಲೇವಾರಿಯ ಕುರಿತು ಇರುವ ವಿವರವಾದ ನಿರ್ದೇಶನಗಳು, ಸ್ವತಃ ಇಸ್ಲಾಮ್ ಧರ್ಮವೂ ತನ್ನ ಅನುಯಾಯಿಗಳ ಬಗ್ಗೆ ಕೆಡುಕು ಮತ್ತು ಅನ್ಯಾಯ ಅವರ ಹತ್ತಿರವೂ ಸುಳಿಯದು ಅಥವಾ ಅವರು ಪರಸ್ಪರರ ವಿರುದ್ಧ ಯಾವುದೇ ತಪ್ಪು ಕ್ರಮಕೈಗೊಳ್ಳಲಾರರು ಎಂದು ಭಾವಿಸುವುದಿಲ್ಲ ಎಂಬುದಕ್ಕೆ ಸಾಕ್ಷಿಯಾಗಿವೆ. ನಿಜವಾಗಿ ಇಸ್ಲಾಮ್ ತನ್ನ ಅನುಯಾಯಿಗಳನ್ನು ಅವರು ಕೂಡಾ ಒಳಿತು-ಕೆಡುಕುಗಳು ಸಮ್ಮಿಲನವಾಗಿರುವ ಸಹಜ ಪ್ರವೃತ್ತಿಯನ್ನೇ ಹೊಂದಿದವರು ಮತ್ತು ಯಾವುದೇ ಸಂದರ್ಭದಲ್ಲಿ ತಪ್ಪು ಮಾಡಬಹುದಾದವರು ಎಂಬ ದೃಷ್ಟಿಯಿಂದಲೇ ನೋಡುತ್ತದೆ. ಆದ್ದರಿಂದಲೇ ವ್ಯಕ್ತಿಗಳ ಮಧ್ಯೆ ಶಾಂತಿ ಮತ್ತು ನ್ಯಾಯದ ವಾತಾವರಣ ಕಾಪಾಡಲು ಇತರ ಸಮಾಜಗಳಿಗೆ ಒಂದು ಆಡಳಿತ ವ್ಯವಸ್ಥೆ ಮತ್ತು ವ್ಯವಸ್ಥಿತ ಸರಕಾರದ ಅಗತ್ಯ ಇರುವಂತೆಯೇ ಮುಸ್ಲಿಮ್ ಸಮಾಜಕ್ಕೂ ಒಂದು ಆಡಳಿತ ವ್ಯವಸ್ಥೆ ಅವಶ್ಯಕವಾಗಿದೆ. ನಿಜವಾಗಿ ಮನುಷ್ಯನ ಪ್ರಾಣ, ಮಾನ, ಸೊತ್ತು-ವಿತ್ತ ಮತ್ತಿತರ ಹಕ್ಕುಗಳ ರಕ್ಷಣೆಗೆ ಇಸ್ಲಾಮ್ ಧರ್ಮವು ಇತರೆಲ್ಲ ಧರ್ಮ-ಸಿದ್ಧಾಂತಗಳಿಗಿಂತ ಹೆಚ್ಚು ಪ್ರಾಮುಖ್ಯತೆ ಕೊಟ್ಟಿರುವುದರಿಂದ, ಇಸ್ಲಾಮ್ ಧರ್ಮಕ್ಕೆ ಅಂತಹ ಆಡಳಿತ ವ್ಯವಸ್ಥೆಯೊಂದು ಇತರೆಲ್ಲರಿಗಿಂತ ಹೆಚ್ಚು ಅವಶ್ಯಕವಾಗಿದೆ.

ಇನ್ನು ರಕ್ಷಣೆಯ ಅಗತ್ಯದ ಬಗ್ಗೆ ಹೇಳುವುದಾದರೆ ಇತರ ಯಾವುದೇ ಸಮಾಜದಂತೆ ಮುಸ್ಲಿಮ್ ಸಮಾಜಕ್ಕೂ ತನ್ನ ರಕ್ಷಣೆಗೆ ಒಂದು ರಕ್ಷಣಾ ವ್ಯವಸ್ಥೆಯ ಅಗತ್ಯ ಇರುತ್ತದೆ. ಜಗತ್ತಿನಲ್ಲಿ 'ಇಸ್ಲಾಮೇತರ' ಎನ್ನಬಹುದಾದ ಯಾವುದೇ ಶಕ್ತಿ ಅಸ್ತಿತ್ವದಲ್ಲಿರುವ ತನಕವೂ ಅದರ ಕಡೆಯಿಂದ ಮುಸ್ಲಿಮ್ ಸಮಾಜಕ್ಕೆ ಆಕ್ರಮಣದ ಸಾಧ್ಯತೆ ಯಾವಾಗಲೂ ಇದ್ದೇ ಇರುತ್ತದೆ. ಆ ಸಾಧ್ಯತೆ

ಆಗಾಗ ಕಾರ್ಯರೂಪಕ್ಕೂ ಇಳಿಯಬಹುದು. ಹೀಗೆ ಸಮಾಜದ ರಕ್ಷಣೆಯ ದೃಷ್ಟಿಯಿಂದ ನೋಡಿದರೂ ಒಂದು ಆಡಳಿತ ವ್ಯವಸ್ಥೆಯ ಸ್ಥಾಪನೆ ಅತ್ಯವಶ್ಯಕವೆನಿಸುತ್ತದೆ.

ಒಟ್ಟಿನಲ್ಲಿ ಎಲ್ಲ ರೀತಿಯಲ್ಲೂ ಮುಸ್ಲಿಮ್ ಸಮಾಜಕ್ಕೆ ಒಂದು ಆಡಳಿತ ವ್ಯವಸ ಅವಶ್ಯಕವಾಗಿದೆ. ಈ ಅವಶ್ಯಕತೆ ಸ್ವಾಭಾವಿಕವಾಗಿರುವಂತೆ ವ್ಯಾವಹಾರಿಕವಾಗಿ ಅನಿವಾರ್ಯವೂ ಆಗಿದೆ.

## ಖಿಲಾಫತ್ ಸ್ಥಾಪನೆ ಕಡ್ಡಾಯ

ಮುಸ್ಲಿಮ್ ಸಮಾಜಕ್ಕೆ ಒಂದು ಆಡಳಿತ ವ್ಯವಸ್ಥೆ ಅವಶ್ಯಕ ಎಂಬುದು ಮನವರಿ ಯಾಗಲು ಈ ವರೆಗೆ ಮಂಡಿಸಲಾದ ವಾದಗಳೇ ಸಾಕು. ಆದರೆ ಈ ವಾದಗಳೆಲ್ಲಾ ಹೆಚ್ಚಾ ವೈಚಾರಿಕ ತರ್ಕಗಳಿಂದ ಕೂಡಿವೆ. ನಾವಿಲ್ಲಿ ಯಾವುದಾದರೂ ಮಾನವ ನಿರ್ಮಿತ ವ್ಯವಸ್ಥೆಯ ಬದಲು ಒಂದು ಧಾರ್ಮಿಕ ಮತ್ತು ಇಸ್ಲಾಮೀ ಕಲ್ಪನೆಯ ಕುರಿತು ಚರ್ಚಿಸುತ್ತಿರುವುದರಿಂದ ಈ ವಿಷಯದಲ್ಲಿ ಶರೀಅತ್ ಏನನ್ನುತ್ತದೆ ಎಂಬುದನ್ನು ನೋಡಬೇಕಾದುದು ಮತ್ತು ಅದರ ಆಧಾರದಲ್ಲೇ ಅಂತಿಮ ತೀರ್ಮಾನ ಕೈಗೊಳ್ಳಬೇಕಾದುದು ಬಹಳ ಅವಶ್ಯಕ. ಅನ್ಯಥಾ ಇಲ್ಲಿ ಸ್ವತ ಇಸ್ಲಾಮ್ ಧರ್ಮವು ಮುಸ್ಲಿಮ್ ಸಮಾಜವನ್ನು ಅಂಥ ದೃಷ್ಟಿಯಿಂದ ನೋಡಿದ್ದುಂಟೇ ಎಂಬ ಪ್ರಶ್ನೆ ಉದ್ಭವಿಸುವ ಸಾಧ್ಯತೆ ಇದೆ.

ಈ ನಿಟ್ಟಿನಲ್ಲಿ ನಾವು ಶರೀಅತ್‌ನ ಅಧ್ಯಯನ ನಡೆಸಿದರೆ ಪವಿತ್ರ ಕುರ್‌ಆನ್‌ನಲ್ಲೂ ಹದೀಸ್‌ನಲ್ಲೂ ಪ್ರವಾದಿ ಮುಹಮ್ಮದ್(ಸ) ಅವರ ಜೀವನದಲ್ಲೂ ಸಹಾಬಿ(ರ)ಗಳ ಆದರ್ಶದಲ್ಲೂ ಮುಸ್ಲಿಮ್ ವಿದ್ವಾಂಸರ ಅಭಿಪ್ರಾಯ ಮತ್ತು ತೀರ್ಪುಗಳಲ್ಲೂ ಒಂದು ಇಸ್ಲಾಮೀ ಆಡಳಿತ ವ್ಯವಸ್ಥೆಯ ರಚನೆಗೆ ಒತ್ತು ಕೊಟ್ಟಿರುವುದು ಕಾಣಿಸುತ್ತದೆ.

ಪವಿತ್ರ ಕುರ್‌ಆನ್‌ನ ಬಗ್ಗೆ ಹೇಳುವುದಾದರೆ, ಒಂದೆಡೆ ಅದು ಮುಸ್ಲಿಮರಿಗೆ 'ಉಲುಲ ಅಮ್ರ್'(ಅಧಿಕಾರಸ್ಥರ ಅನುಸರಣೆ ಮಾಡುವಂತೆ ಆದೇಶಿಸಿದೆ. ''ಸತ್ಯವಿಶ್ವಾಸಿಗಳೇ **ಅಲ್ಲಾಹನನ್ನು ಅನುಸರಿಸಿರಿ ಮತ್ತು ಅವನ ಸಂದೇಶವಾಹಕರನ್ನೂ ನಿಮ್ಮಲ್ಲಿನ ಅಧಿಕಾರಸ್ಥರನ್ನೂ ಅನುಸರಿಸಿರಿ''** (ಸೂರಃ ಅನ್ನಿಸಾ) ಇನ್ನೊಂದೆಡೆ ಅದು ಒಂದು ಸರಕಾರ ಮಾತ್ರ ಜಾರಿಗೊಳಿಸ ಬಲ್ಲಂಥ ಅದೆಷ್ಟೋ ಕಾನೂನುಗಳನ್ನು ತಮ್ಮ ಸಮಾಜದಲ್ಲಿ ಜಾರಿಗೊಳಿಸಬೇಕಾದ ಹೊಣೆಗಾರಿ ಯನ್ನು ಮುಸ್ಲಿಮರ ಮೇಲೆ ಹಾಕಿದೆ. ಉದಾ: ಕೊಲೆಗಾರನಿಗೆ ಮರಣದಂಡನೆ, ಕಳ್ಳನ ಕೈ ಕಡಿಯುವ, ವ್ಯಭಿಚಾರಿಗೆ ಕಲ್ಲೆಸೆದು ಕೊಲ್ಲುವ ಅಥವಾ ಛಡಿಯೇಟಿನ ಶಿಕ್ಷೆ ಇತ್ಯಾದಿ.

ಈ ಎರಡೂ ಅಂಶಗಳು, ಪವಿತ್ರ ಕುರ್‌ಆನ್ ಮುಸ್ಲಿಮ್ ಸಮಾಜವನ್ನು ಒಂದು ಸರಕಾರವುಳ್ಳ ಸಮಾಜವೆಂಬ ದೃಷ್ಟಿಯಿಂದಲೇ ನೋಡುತ್ತದೆ ಎಂಬುದನ್ನು ವ್ಯಕ್ತಪಡಿಸುತ್ತವೆ ಆಡಳಿತ ವ್ಯವಸ್ಥೆಯೊಂದು ಇಲ್ಲದ ಮುಸ್ಲಿಮ್ ಸಮಾಜವನ್ನು ಅದು ಕಲ್ಪಿಸಿಕೊಳ್ಳುವುದೇ ಇಲ ಅಥವಾ ಕನಿಷ್ಠ ಪಕ್ಷ ಅದು ಅಂಥ ಸಮಾಜವನ್ನು ಕಲ್ಪಿಸಿಕೊಳ್ಳಲು ಇಚ್ಛಿಸುವುದಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಪವಿತ್ರ ಕುರ್‌ಆನ್, ಓ ಸತ್ಯ ವಿಶ್ವಾಸಿಗಳೇ ನೀವು ನಿಮ್ಮದಾದ ಒಂದು ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಿರಿ ಎಂದು ಮುಂತಾಗಿ ಎಲ್ಲೂ ನೇರವಾಗಿ ಬೋಧಿಸಿಲ್ಲ ಎಂಬುದು ನಿಜ. ಆದರೆ ಅಂಥ ನೇರ ಆದೇಶಗಳ ಅಗತ್ಯ ತೀರಾ ಇರಲಿಲ್ಲ ಎಂಬುದೇ ಅದಕ್ಕೆ ಕಾರಣ. ಸ್ವಯಂ ಸ್ಪಷ್ಟವಾಗಿರುವ ಒಂದು ಸರ್ವಾಂಗೀಕೃತ, ವಿವಾದಾತೀತ ವಿಷಯವನ್ನು ಮತ್ತೆ ಸ್ಪಷ್ಟಪಡಿಸಬೇಕಾದ ಅಗತ್ಯ ಇರುವುದಿಲ್ಲ. ಸೂರ್ಯನ ಬೆಳಕು ಅಥವಾ ಶಾಖದ ಬಗ್ಗೆ ಚರ್ಚೆ ನಡೆಯುತ್ತಿರುವಲ್ಲಿ ಸೂರ್ಯನ ಅಸ್ತಿತ್ವ ನಿಜವೇ ಎಂಬ ಪ್ರಶ್ನೆಗೆ ಅವಕಾಶವೇ ಇರುವುದಿಲ್ಲ.

ಪವಿತ್ರ ಕುರ್‌ಆನ್ ಮುಸಲ್ಮಾನರಿಗೆ ನೀವು ನಿಮ್ಮ ಅಧಿಕಾರಸ್ಥರನ್ನು ಅನುಸರಿಸಿರಿ ಎಂದು ಆದೇಶಿಸಿರುವುದು ಮತ್ತು ಅಪರಾಧಿಗಳಿಗೆ ಶಿಕ್ಷೆ ವಿಧಿಸುವ ಹೊಣೆಯನ್ನು ಅವರಿಗೆ ವಹಿಸಿರುವುದೇ, ಮುಸಲ್ಮಾನರು ಒಂದು ವ್ಯವಸ್ಥಿತ ಇಸ್ಲಾಮೀ ಆಡಳಿತದ ಅಧೀನ ಬದುಕುವವರು ಅಥವಾ ಬದುಕಬೇಕಾದವರು ಎಂಬುದಕ್ಕೆ ಪ್ರಬಲ ಪುರಾವೆಯಾಗಿದೆ.

ಇಮಾಮ್ ಫಖ್ರುದ್ದೀನ್ ರಾಝೀ ಅವರು, ಒಂದು ಸರಕಾರದ ಮೇಲೆ ಹೊರಿಸುವಂಥ ಹೊಣೆಗಾರಿಕೆಗಳನ್ನು ಮುಸ್ಲಿಮ್ ಸಮಾಜದ ಮೇಲೆ ಹೊರಿಸುವ ಪವಿತ್ರ ಕುರ್‌ಆನ್‌ನ ವಾಕ್ಯಗಳ ಪೈಕಿ ಒಂದಾದ **'ಕದ್ದವನ ಮತ್ತು ಕದ್ದವಳ ಕೈಗಳನ್ನು ಕಡಿಯಿರಿ'** ಎಂಬ ವಾಕ್ಯವನ್ನು (ಸೂರಃ ಅಲ್‌ಮಾಇದಃ– 38) ವ್ಯಾಖ್ಯಾನಿಸುತ್ತಾ ಹೀಗೆ ಬರೆದಿರುವರು:

''ಮುಸ್ಲಿಮ್ ಸಮುದಾಯಕ್ಕೆ ತನ್ನದಾದ ಒಬ್ಬ ನಿರ್ದಿಷ್ಟ ಇಮಾಮ್ (ನಾಯಕ, ಆಡಳಿತಗಾರ) ಇರಬೇಕು ಎಂಬುದಕ್ಕೆ ಈ ವಾಕ್ಯವನ್ನು ಆಧಾರವಾಗಿ ಪರಿಗಣಿಸಿದ್ದಾರೆ. ಅವರ ವಾದ ಏನೆಂದರೆ, ಅಲ್ಲಾಹನು ಈ ವಾಕ್ಯದ ಮೂಲಕ ಕಳ್ಳ ಮತ್ತು ವ್ಯಭಿಚಾರಿಗಳಿಗೆ ಶಿಕ್ಷೆ ವಿಧಿಸಬೇಕಾದುದನ್ನು ಕಡ್ಡಾಯಗೊಳಿಸಿರುವನು. ಹೀಗಿರುವಾಗ ಈ ಆದೇಶದ ನೇರ ಅಭಿಸಂಬೋಧಿತ(ಇದನ್ನು ಜಾರಿಗೊಳಿಸಬಲ್ಲವ)ನೊಬ್ಬ ಇರಲೇಬೇಕು ಎಂದಾಯಿತು. ಇತ್ತ, ಜನಸಾಮಾನ್ಯರಿಗೆ ಅಪರಾಧಿಗಳನ್ನು ವಿಧಿ ಪ್ರಕಾರ ದಂಡಿಸುವ ಅಧಿಕಾರ ಇಲ್ಲ ಎಂಬ ಬಗ್ಗೆ ಮುಸ್ಲಿಮ್ ಸಮುದಾಯದಲ್ಲಿ ಒಮ್ಮತಾಭಿಪ್ರಾಯವಿದೆ. ಇನ್ನು ಒಬ್ಬ ಸ್ವತಂತ್ರ ಅಪರಾಧಿಯ ಬಗ್ಗೆಯಂತೂ ಸಮಾಜದ 'ಇಮಾಮ್'ನ ಹೊರತು ಬೇರೆ ಯಾರೂ ಅವನ ಮೇಲೆ ಶಿಕ್ಷೆ ಜಾರಿಗೊಳಿಸುವಂತಿಲ್ಲ ಎಂಬ ಬಗ್ಗೆಯೂ ಒಮ್ಮತವಿದೆ. ಈ ರೀತಿ ಶಿಕ್ಷೆ ವಿಧಿಸಬೇಕೆಂಬುದು ಒಂದು ಕಡ್ಡಾಯ ಕರ್ತವ್ಯವಾಗಿರುವಾಗ ಮತ್ತು ಆ ಕರ್ತವ್ಯ ನಿರ್ವಹಣೆಗೆ ಒಬ್ಬ 'ಇಮಾಮ್'ನ ಅಸ್ತಿತ್ವ ಅನಿವಾರ್ಯವಾಗಿರುವಾಗ, ಹಾಗೆಯೇ ಒಂದು ಕಡ್ಡಾಯ ಕರ್ತವ್ಯದ ಅನುಷ್ಠಾನಕ್ಕೆ ಅಗತ್ಯವಿರುವ ಅಂಶವನ್ನು ಕಾರ್ಯಗತಗೊಳಿಸುವುದು ಸಾಧ್ಯವೆಂದಾದರೆ ಹಾಗೆ ಮಾಡಬೇಕಾದುದು ಕಡ್ಡಾಯವಾಗಿರುವಾಗ ಮೊದಲು 'ಇಮಾಮತ್'ನ ಸ್ಥಾಪನೆ ಮಾಡಬೇಕಾದುದು ಕಡ್ಡಾಯ ಎಂಬುದು ಅತ್ಯಂತ ಸ್ಪಷ್ಟವಾಗಿ ಶ್ರುತವಾಗುತ್ತದೆ.''

ಹದೀಸ್‌ಗಳ ಕುರಿತು ಹೇಳುವುದಾದರೆ ಮುಸ್ಲಿಮ್ ಸಮಾಜಕ್ಕೆ ಆಡಳಿತ

ವ್ಯವಸ್ಥೆಯೊಂದರ ಅಗತ್ಯ ಇದೆ ಎಂಬುದನ್ನು ಪ್ರತಿಪಾದಿಸುವ ಹಲವು ಪ್ರವಾದಿ ವಚನಗಳನು ಪುಸ್ತಕದ ಮೊದಲ ಭಾಗದಲ್ಲೇ ಓದಿರುವಿರಿ. ಆ ಪೈಕಿ ವಿಶೇಷವಾಗಿ ಎರಡು ಹದೀಸ್‌ಗಳನು ಇಲ್ಲಿನಾವು ಅವಲೋಕಿಸೋಣ.

1. ಒಬ್ಬ ವ್ಯಕ್ತಿ ತನ್ನ ಕೊರಳಲ್ಲಿ 'ಬೈಅತ್' ಇಲ್ಲದ ಸ್ಥಿತಿಯಲ್ಲಿ ಮರಣ ಹೊಂದಿದರೆ ಅದು 'ಜಾಹಿಲಿಯ್ಯಾ'ದ ಮರಣವಾಗುವುದು.[1] (ಮುಸ್ಲಿಮ್, ಭಾಗ – 2, ಪುಟ 128)

2. ನಾನು ನಿಮಗೆ 5 ವಿಷಯಗಳನ್ನು ಆದೇಶಿಸುತ್ತೇನೆ. ಜಮಾಅತ್ (ಸಂಘಟಿತ ಜೀವನ) 'ಸಮ್‌ಅ್' (ನಾಯಕನ ಆದೇಶ ಕೇಳುವುದು), ಇತಾಅತ್ (ಆದೇಶ ಪಾಲಿಸುವುದು) 'ಹಿಜ್ರತ್' (ಅಗತ್ಯ ಬಂದಾಗ ಧರ್ಮ ಮಾರ್ಗದಲ್ಲಿ ವಲಸೆ) ಮತ್ತು ಅಲ್ಲಾಹನ ಮಾರ್ಗದಲ್ 'ಜಿಹಾದ್' (ಹೋರಾಟ, ಪರಿಶ್ರಮ).

(ಅಹ್ಮದ್ ಮತ್ತು ತಿರ್ಮಿದಿ–ಮಿಶ್ಕಾತ್‌ನಲ್ಲಿ ಪುಟ 321

ಒಂದು ಆಡಳಿತಾಂಗದ ಅಗತ್ಯದ ಕುರಿತು ಪ್ರಸ್ತುತ ಮೊದಲ ಹದೀಸ್‌ನಲ್ಲಿರುವ ಧ್ವನಿಯು ಬಹುತೇಕ, ನೀವು ಈಗಾಗಲೇ ಓದಿದ ಕುರ್‌ಆನ್ ವಾಕ್ಯದ ಧ್ವನಿಗೇ ಹೋಲುತ್ತದೆ. ಖಿಲಾಫತ ಜೊತೆಗಿನ ಬೈಅತ್ ಮಾಡದ ಸ್ಥಿತಿಯಲ್ಲಿ ಮನಷ್ಯನು ಅಜ್ಞಾನಾವಸ್ಥೆಗೆ ಮರಳಿದಂತಾಗುತ್ತ ಎಂಬ ಪ್ರವಾದಿವರ್ಯರ(ಸ) ಮಾತು, ಖಿಲಾಫತ್ ವ್ಯವಸ್ಥೆಯಿಲ್ಲದೆ ಮುಸ್ಲಿಮ್ ಸಮಾಜ ರೂಪುಗೊಳ್ಳಲಿಕ್ಕೇ ಸಾಧ್ಯವಿಲ್ಲ ಅಥವಾ ಕನಿಷ್ಠ ಪಕ್ಷ ಅದು ಹಾಗೆ ರೂಪುಗೊಳ್ಳುವುದು ಸರಿಯೇ ಎಂಬುವನ್ನು ಸ್ಪಷ್ಟಪಡಿಸುತ್ತದೆ. ಇದು ನಿಜವಾಗಿ ಇಸ್ಲಾಮೀ ಆಡಳಿತ ವ್ಯವಸ್ಥೆಯೊಂದನ ಸ್ಥಾಪಿಸುವುದು ಮತ್ತು ಅದನ್ನು ಸಂರಕ್ಷಿಸಲು ಶ್ರಮಿಸಬೇಕಾದುದು ಮುಸ್ಲಿಮ್ ಸಮಾಜದ ಸ್ವಾಭಾವಿಕ ಹಾಗೂ ಕಡ್ಡಾಯ ಕರ್ತವ್ಯ ಎಂಬುದನ್ನೂ ವ್ಯಕ್ತವಾಗಿ ಸೂಚಿಸುತ್ತದೆ. ಏಕೆಂದ ಕಾರ್ಯಕಾರಣಗಳ ಈ ಜಗತ್ತಿನಲ್ಲಿ ಯಾವುದೇ ಆಡಳಿತ ವ್ಯವಸ್ಥೆ ತನ್ನಿಂತಾನೇ ಅಸ್ತಿತ್ವ ಬರುವುದಿಲ್ಲ, ಜನರ ಸಂಘಟಿತ ಶ್ರಮದಿಂದ ಮಾತ್ರ ಅವು ಅಸ್ತಿತ್ವ ಪಡೆಯುತ್ತವೆ. ಆದ್ದರಿಂ ಮುಸ್ಲಿಮ್ ಸಮಾಜ ಕೂಡಾ ತನ್ನ ಈ ಕರ್ತವ್ಯವನ್ನು ಗುರುತಿಸಿಕೊಂಡು ಅದರ ಪ್ರಜ್ಞೆಯೊಂದಿ ಆ ನಿಟ್ಟಿನಲ್ಲಿ ಶ್ರಮಿಸುವ ತನಕ ಅವರು ತಮ್ಮ ಅಪೇಕ್ಷಿತ ಆಡಳಿತ ವ್ಯವಸ್ಥೆಯನ್ನು ಪಡೆಯಲ ಸಾಧ್ಯವಿಲ್ಲ.

ಎರಡನೆಯ ಹದೀಸ್‌ನಲ್ಲಂತೂ ಈ ಕುರಿತು ಬಹಳ ನೇರವಾದ ಕೆಲವು ಆದೇಶಗಳಿವ ಮೊದಲನೆಯದಾಗಿ ಅದರಲ್ಲಿ ಸಂಘಟಿತ ಬದುಕು ಸಾಗಿಸುವ ಆಜ್ಞೆ ಇದೆ. ಸಂಘಟಿತ ಬದುಕ ಕೂಡಾ ಸಾಮಾನ್ಯ ಸ್ವರೂಪದ್ದಲ್ಲ, ಶ್ರವಣ (ಸಮ್‌ಅ್) ಮತ್ತು ಅನುಸರಣೆ(ಇತಾಅತ್)ಯಿಂ ಕೂಡಿದ ಸಂಘಟನೆ. ಅಂದರೆ ಆ ಸಂಘಟಿತ ಸಮಾಜದಲ್ಲಿ ಕಾನೂನುಗಳನ್ನು ಜಾರಿಗೊಳಿಸ

1. 'ಬೈಅತ್' ಎಂದರೆ ಖಿಲಾಫತ್ ಆಡಳಿತವಿರುವಲ್ಲಿ ಖಲೀಫಾ ಮತ್ತು ಪ್ರಜೆಯ ನಡುವೆ ಇರು ವೈಯಕ್ತಿಕ ಕರಾರು. 'ಜಾಹಿಲಿಯ್ಯಾ' ಎಂದರೆ ಅಜ್ಞಾನ ಅಥವಾ ಇಸ್ಲಾಮೇತರ ಎಂದರ್ಥ. –ಅನು

ರು ಅಥವಾ ಆದೇಶ ಕೊಡುವವರು ಮತ್ತು ಅದನ್ನು ಕೇಳಿ ಅನುಸರಿಸುವವರೂ ಇರಬೇಕು. ಕ್ಷಿಪ್ತದಲ್ಲಿ 'ಆಜ್ಞೆ-ಅನುಸರಣೆ' ಮತ್ತು 'ಆಡಳಿತ ವ್ಯವಸ್ಥೆ' ಇರುವ ಸಂಘಟಿತ ಬದುಕು ಬೇಕು. ಶ್ರವಣ ಮತ್ತು ಅನುಸರಣೆ, ಆಡಳಿತ ವ್ಯವಸ್ಥೆಯೊಂದು ಇರುವಲ್ಲಿ ಮಾತ್ರ ಸಾಧ್ಯ. ಳಿತವೇ ಇಲ್ಲದಿರುವಲ್ಲಿ 'ಶ್ರವಣ ಮತ್ತು ಅನುಸರಣೆ'ಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಎರಡೂ ಶಬ್ದಗಳು ಹದೀಸ್‌ಗಳಲ್ಲಿ ಅಲ್ಲಲ್ಲಿ ಪ್ರಸ್ತಾಪಿತವಾಗಿದ್ದು, ಬಹುತೇಕ ಎಲ್ಲ ಕಡೆಯೂ ಗಳನ್ನು 'ಆಡಳಿತಗಾರ ಅನುಸರಣೆ' ಎಂಬ ಆಧಾರದಲ್ಲೇ ಬಳಸಲಾಗಿದೆ.

ಈ ವಿಷಯದಲ್ಲಿ ಪ್ರವಾದಿ ಮುಹಮ್ಮದ್(ಸ) ಅವರ ಜೀವನದ ಆದರ್ಶ ಏನೆಂಬುದು ತ್ತಿಗೇ ತಿಳಿದಿದೆ. ಮೂಲತಃ ಪ್ರವಾದಿವರ್ಯರು(ಸ) ಆರಂಭದಿಂದಲೇ ಆಜ್ಞೆಗಳನ್ನು ಡುವ ಹಕ್ಕುಳ್ಳ ಅಧಿಕಾರಸ್ಥರಾಗಿದ್ದರು. 'ಹಿಜ್ರತ್'ನ ಅನಂತರ ಅವರ ಈ ಸ್ಥಾನಮಾನವೂ ಕ್ಯವಾಗಿಯೂ ಅಧಿಕೃತವಾಗಿಯೂ ಪೂರ್ಣ ವ್ಯಕ್ತವಾಯಿತು. ಅನಂತರ ಅವರ ನಿಧನದ ಗೂ ಈ ಸ್ಥಾನಮಾನವು ಹೆಚ್ಚೆಚ್ಚು ಉಜ್ವಲವಾಗುತ್ತಲೇ ಹೋಯಿತು. ಅವರ ಕಾಲದಲ್ಲಿ , ಮುಸ್ಲಿಮರೂ ಒಂದು ಸಮುದಾಯ ಮತ್ತು ಒಂದು ಸಂಘಟನೆಯಾಗಿದ್ದರು. ಾದಿವರ್ಯರೇ(ಸ) ಅವರೆಲ್ಲರ ನಾಯಕರಾಗಿದ್ದರು. ಮುಸ್ಲಿಮರು ವಾಸಿಸುವ ಎಲ್ಲ ೇಶಗಳೂ ಒಂದೇ ರಾಷ್ಟ್ರಕ್ಕೆ ಒಳಪಟ್ಟಿದ್ದುವು. ಪ್ರವಾದಿವರ್ಯರೇ(ಸ) ಆ ರಾಷ್ಟ್ರದ ಳಿತಗಾರರಾಗಿದ್ದರು. ಒಂದು ರಾಷ್ಟ್ರ ಅಥವಾ ರಾಜ್ಯದ ಪೂರ್ಣ ಸ್ವರೂಪವನ್ನು ಅಂದಿನ ಸ್ಲಿಮ್ ಜನತೆ ಮತ್ತು ಪ್ರವಾದಿ(ಸ)ರ ರೂಪದಲ್ಲಿ ಕಾಣಬಹುದಿತ್ತು.

ಪ್ರವಾದಿ ಮುಹಮ್ಮದ್(ಸ) ಅವರ ಮದೀನಾದಲ್ಲಿನ ಜೀವನದ ಕ್ಷಣಕ್ಷಣವೂ, ಸ್ಲಾಮನ್ನಾಗಲೀ, ಮುಸ್ಲಿಮ್ ಸಮಾಜವನ್ನಾಗಲೀ, ಪ್ರವಾದಿತ್ವದ ಪಟ್ಟವನ್ನಾಗಲೀ ಅರ್ಥ, ಾಪ, ಕಲ್ಪನೆ ಮತ್ತು ಪ್ರಯೋಗದಲ್ಲೂ ಸರಕಾರ ಅಥವಾ ಆಡಳಿತದ ಕಲ್ಪನೆಯಿಂದ ರ್ಪಡಿಸಲು ಸಾಧ್ಯವೇ ಇಲ್ಲ ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಸರಕಾರ ಮತ್ತು ಆಡಳಿತವು ಸ್ಲಾಮಿನ ಅವಿಭಾಜ್ಯ ಅಂಗವೆಂಬುದನ್ನು ನಾವು ಅಂಗೀಕರಿಸದಿದ್ದರೆ ಪ್ರವಾದಿ ಮುಹಮ್ಮದ್(ಸ) ರು ಆಡಳಿತದ ನಿಟ್ಟಿನಲ್ಲಿ ಮಾಡಿದ ನಿರಂತರ ಪರಿಶ್ರಮಕ್ಕೆ ಧರ್ಮದೊಂದಿಗೆ ಸಂಬಂಧ ವೆಂದೋ ಅವರು ತಮ್ಮ ಪ್ರವಾದಿತ್ವ ಹಾಗೂ ಅದರ ಕರ್ತವ್ಯಗಳಿಗೆ ಸಂಬಂಧವೇ ಇಲ್ಲದ ರ್ಯಗಳಲ್ಲಿ ತಮ್ಮನ್ನು ನಿರಂತರ ತೊಡಗಿಸಿಕೊಂಡರೆಂದೋ ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಷ್ಠ ಪಕ್ಷ ಮುಹಮ್ಮದ್(ಸ) ಅವರನ್ನು ಅಲ್ಲಾಹನ ಸಂದೇಶವಾಹಕರೆಂದು ನಂಬುವವರಿಗೆ ಈ ಆಲೋಚಿಸಲು ಸಾಧ್ಯವೇ ಇಲ್ಲ.

## ಡಳಿತ ವ್ಯವಸ್ಥೆ: ಸಮುದಾಯದ ಒಮ್ಮತ

ಒಂದು ಇಸ್ಲಾಮೀ ಆಡಳಿತ ವ್ಯವಸ್ಥೆ ಅಥವಾ ಖಿಲಾಫತ್ ವ್ಯವಸ್ಥೆಯ ಸ್ಥಾಪನೆಯ

ವಿಷಯದಲ್ಲಿ ನಾವು, ಪ್ರವಾದಿ ಮುಹಮ್ಮದ್(ಸ)ರ ಸಂಗಾತಿಗಳಾಗಿದ್ದ ಸಹಾಬಿಗಳ ನಿ
ಏನಾಗಿತ್ತೆಂದು ನೋಡೋಣ.

ಪ್ರವಾದಿ ಮುಹಮ್ಮದ್(ಸ) ನಿಧನರಾದಾಗ, ಅವರ ಅನುಯಾಯಿಗಳು ಎಲ್ಲ
ಹೆಚ್ಚಿನ ಮಹತ್ವ ಹಾಗೂ ಪ್ರಥಮ ಆದ್ಯತೆ ಕೊಟ್ಟದ್ದು, ಒಬ್ಬ ಖಲೀಫಾ(ಪ್ರವಾದಿ ಪ್ರತಿನಿ
ನೇಮಕ ಮತ್ತು ಒಂದು ಖಿಲಾಫತ್ ವ್ಯವಸ್ಥೆಯ ಸ್ಥಾಪನೆಗೆ. ಅವರ ದೃಷ್ಟಿಯಲ್ಲಿ
ಕಾರ್ಯ ಎಷ್ಟು ಮಹತ್ವಪೂರ್ಣ ಆಗಿತ್ತೆಂದರೆ, ಪ್ರವಾದಿವರ್ಯರ(ಸ) ಅಂತ್ಯಸಂಸ್ಕಾರವ
ಮುಂದೂಡಲಾಯಿತು. ಅವರ ಪಾವನ ಶರೀರವನ್ನು ದಫನ ಮಾಡುವ ಮುಂಚೆ
ಖಲೀಫರ ಆಯ್ಕೆ ನಡೆಯಿತು. ಅನಂತರವಷ್ಟೇ ಶರೀರವನ್ನು ದಫನಗೊಳಿಸಲಾಯಿ
ಸಹಾಬಿ(ಪ್ರವಾದಿಯ ಸಂಗಾತಿ)ಗಳ ಈ ವರ್ತನೆ ಒಂದು ಹಂಗಾಮೀ ವರ್ತನೆಯಾಗ
ವಿವಾದಾಸ್ಪದ ಕ್ರಮವಾಗಲೀ ಆಗಿರಲಿಲ್ಲ, ಅದೊಂದು ಅಧಿಕೃತ ಹಾಗೂ ಅಂಗಿ
ಕ್ರಮವಾಗಿತ್ತು. ಈ ಬಗ್ಗೆ ಎಲ್ಲರ ಒಮ್ಮತವಿತ್ತು. ಅಲ್ಲದೆ ಅದೊಂದು ಶಾಶ್ವತ ಕ್ರಮವೂ ಆಗಿ
ಅನಂತರವೂ ಓರ್ವ ಖಲೀಫಾ ನಿಧನರಾದಾಗ ಅವರ ದಫನಕ್ಕೆ ಮುನ್ನವೇ ಮುಂ
ಖಲೀಫರನ್ನು ಆರಿಸುವ ಕರ್ತವ್ಯದ ಬಗ್ಗೆ ಗಮನ ಹರಿಸಲಾಗುತ್ತಿತ್ತು.

(ಶರಹುಲ್ ಅಕಾಯಿದ್ ನಸಫಿಯ್ಯ: ಪುಟ– 1

ಮಾನ್ಯ ಸಹಾಬಿವರ್ಯರ ಈ ಅಧಿಕೃತ ಹಾಗೂ ಅಂಗೀಕೃತ ನಿಲುವು ಒಂದು ಆ
ವ್ಯವಸ್ಥೆಯ ಅಗತ್ಯ ಮತ್ತು ಮಹತ್ವದ ಬಗ್ಗೆ ಅವರ ಪ್ರಜ್ಞೆ ಎಷ್ಟು ತೀವ್ರವಾಗಿತ್ತೆಂಬ
ಒಂದು ಅಸಾಮಾನ್ಯ ಮಾದರಿಯೆನ್ನಬಹುದು. ಮುಸ್ಲಿಮ್ ಸಮಾಜವು ಒಬ್ಬ ಇಮಾ
ಅಥವಾ ಖಲೀಫರಿಂದ ಅಥವಾ ಒಂದು ಇಸ್ಲಾಮೀ ಆಡಳಿತ ವ್ಯವಸ್ಥೆಯಿಂದ ಎಂ
ಮುಕ್ತವಾಗಿರಬಾರದು. ಅಂಥ ಅರಾಜಕತೆಯ ಪರಿಸ್ಥಿತಿ ಧರ್ಮದ ದೃಷ್ಟಿಯಲ್ಲಿ ಸಮ್ಮತಾ
ಅಲ್ಲ ಎಂಬುದು ಅವರೆಲ್ಲರ ವಿವಾದಾತೀತ ಹಾಗೂ ಸರ್ವಸಮ್ಮತ ಅಭಿಪ್ರಾಯವಾಗಿತ್ತು.

ಪ್ರವಾದಿವರ್ಯರು(ಸ) ನಿಧನರಾದೊಡನೆ ಹಝ್ರತ್ ಅಬೂಬಕರ್ ಸಿದ್ದೀಕ
ಅವರು ಸಹಾಬಿಗಳ ಜನಸಮೂಹವನ್ನುದ್ದೇಶಿಸಿ ಹೇಳಿದರು:

''ತಿಳಿಯಿರಿ! ಮುಹಮ್ಮದ್(ಸ) ನಿಧನರಾದರು. ಈಗ ಈ ಧರ್ಮಕ್ಕೆ ಅ
ಸ್ಥಾಪಿತವಾಗಿಡುವ ಹೊಣೆಯನ್ನು ಹೊರುವ ವ್ಯಕ್ತಿಯೊಬ್ಬರ ಅಗತ್ಯ ಇದೆ.''

(ಕಿತಾಬುಲ್ ಮವಾಕಿಫ್ ವಶರಹ್, ಭಾಗ– 8, ಪುಟ– 3

ಈ ಮಾತುಗಳ ಮೂಲಕ ಹಝ್ರತ್ ಅಬೂಬಕರ್ ಸಿದ್ದೀಕ್(ರ) ಅವರು ತಕ್ಷಣ
ಖಲೀಫನ ಆಯ್ಕೆ ಆಗಲೇಬೇಕೆಂಬ ಇಂಗಿತವನ್ನೇ ಪ್ರಕಟಿಸಿದ್ದರು. ಆ ಸಭೆಯಲ್ಲಿ ನೆರ
ಭಾರೀ ಸಂಖ್ಯೆಯ ಸಹಾಬಿಗಳ ಪೈಕಿ ಯಾರೂ ಅವರ ಈ ಮಾತಿನ ಬಗ್ಗೆ ಭಿನ್ನಾಭಿಪ್ರಾ
ವ್ಯಕ್ತಪಡಿಸಲಿಲ್ಲ.

ಹಝ್ರತ್ ಉಮರ್(ರ) ಹೇಳುತ್ತಾರೆ: ಜಮಾಅತ್ (ಸಂಘಟನೆ) ಇಲ್ಲದೆ ಇಸ್ಲಾಮ್
ನಾಯಕತ್ವ ಇಲ್ಲದೆ ಸಂಘಟನೆ ಇಲ್ಲ. (ಜಾಮಿವುಲ್ ಬಯಾನ್, ಅಲ್‌ಇಲ್ಮ್)

ಖಾರಿಜೀ ಪಂಗಡದವರು ಹಝ್ರತ್ ಅಲೀ(ರ) ಅವರ ವಿರುದ್ಧ 'ಲಾಹುಕ್ಮ ಇಲ್ಲಾಲಿ ಹ್' (ಅಲ್ಲಾಹನಿಗಲ್ಲದೆ ಯಾರಿಗೂ ಅಧಿಕಾರವಿಲ್ಲ) ಎಂಬ ಘೋಷಣೆ ಹೊರಡಿಸಿದಾಗ ಝ್ರತ್ ಅಲೀ(ರ) ಹೇಳಿದರು: ಯಾವುದೇ ನಾಯಕತ್ವ(ಸರಕಾರ) ಇರಲೇಬಾರದೆಂದು ರು ಹೇಳುತ್ತಿದ್ದಾರೆ. ಆದರೆ ಒಳ್ಳೆಯದಿರಿ, ಕೆಟ್ಟದಿರಲಿ ನಾಯಕತ್ವವೊಂದು ಇರಬೇಕಾದುದು ವಾರ್ಯ. (ಅಲ್‌ಮಿಲಲ್ ವನ್ನಿಹಲ್ ಶಹ್ರಿಸ್ತಾನೀ, ಭಾಗ-1, ಪುಟ- 75)

ಪ್ರವಾದಿ ಮುಹಮ್ಮದ್‌ರ(ಸ) ಈ ಆತ್ಮೀಯ ಅನುಯಾಯಿಗಳು ಹಾಗೂ ಸತ್ಯ ಧರ್ಮದ ಅತ್ಯುತ್ತಮ ಹಾಗೂ ಆದರ್ಶಪ್ರಾಯ ಪ್ರತಿನಿಧಿಗಳ ಪ್ರಸ್ತುತ ಧೋರಣೆ, ಹೇಳಿಕೆಗಳು ನಿಮ್ಮ ಂದಿವೆ. ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿರಿ. ಆಡಳಿತ ವ್ಯವಸ್ಥೆಯ ಸ್ಥಾಪನೆ ಇಸ್ಲಾಮ್ ರ್ಮ ಮತ್ತು ಮುಸ್ಲಿಮ್ ಸಮಾಜದ ಒಂದು ಅನಿವಾರ್ಯ ಅಗತ್ಯ ಎಂಬುದನ್ನು ಅವರು ಸ್ಯವಿದ್ದಷ್ಟು ಗರಿಷ್ಠ ಒತ್ತುಕೊಟ್ಟು ಹೇಳಿದ್ದಾರೆ ಮತ್ತು ತೋರಿಸಿದ್ದಾರೆ ಎಂಬುದನ್ನು ನೀವು ನಿಸಬಹುದು.

ಆಡಳಿತ ವ್ಯವಸ್ಥೆಯ ಅನಿವಾರ್ಯತೆಯ ಕುರಿತು ಪವಿತ್ರ ಕುರ್‌ಆನ್, ಹದೀಸ್, ಾದಿಚರ್ಯೆ ಮತ್ತು ಸಹಾಬಿಗಳ ಧೋರಣೆಗಳಲ್ಲಿ ಇಷ್ಟೆಲ್ಲಾ ಸ್ಪಷ್ಟ ಮತ್ತು ಖಚಿತ ನಿಲುವು ವಾಗ ಮುಸ್ಲಿಮ್ ವಿದ್ವಾಂಸರು ಈ ವಿಷಯದಲ್ಲಿ ಯಾವುದೇ ಭಿನ್ನ ನಿಲುವು ತಳೆಯಲು ಸ್ಯವಿಲ್ಲ. ಅವರು ಕೂಡಾ, ಆಡಳಿತ ವ್ಯವಸ್ಥೆ ಮುಸ್ಲಿಮ್ ಸಮಾಜದ ಅವಿಭಾಜ್ಯ ಅಗತ್ಯ, ಥ ವ್ಯವಸ್ಥೆಯೊಂದನ್ನು ಸ್ಥಾಪಿಸಲು ಮತ್ತು ಸ್ಥಾಪಿಸಿದ ಬಳಿಕ ಅದನ್ನು ರಕ್ಷಿಸಲು ಶ್ರಮಿಸ ಾದುದು ಸಮಾಜದ ಧಾರ್ಮಿಕ ಕರ್ತವ್ಯವೆಂದೂ ಅಭಿಪ್ರಾಯ ಪಟ್ಟಿರುತ್ತಾರೆ. ಖಾಝೀ ವರ್ದೀ ಅವರು ಹೀಗೆ ಬರೆದಿರುತ್ತಾರೆ:

ಇಮಾಮತ್ (ಖಿಲಾಫತ್) ಅನ್ನು ಸಮುದಾಯದೊಳಗೆ ಅದಕ್ಕೆ ಸಂಬಂಧಿಸಿದ ಹೊಣೆ ಕೆಗಳನ್ನು ನಿರ್ವಹಿಸಬಲ್ಲ ಓರ್ವನಿಗೆ ವಹಿಸಿಕೊಡಬೇಕಾದುದು ವಾಜಿಬ್ (ಕಡ್ಡಾಯ) ಆಗಿದೆ ು ಬಗ್ಗೆ ಇಜ್ಮಾಅ್ (ಸರ್ವಸಮ್ಮತ ತೀರ್ಮಾನ) ಇದೆ. (ಅಹ್‌ಕಾಮುಸ್ಸುಲ್ತಾನಿಯ್ಯಃ ಪುಟ- 3)

ಇದೇ ರೀತಿ 'ಶರಹುಲ್ ಅಕಾಯಿದ್ ನಸ್‌ಫಿಯ್ಯ'ದಲ್ಲಿ ಅಲ್ಲಾಮಾ ತಫ್ತಝಾನೀ ಅವರು ಸುತ್ತಾರೆ: ಇಮಾಮ್(ಖಲೀಫಾ)ರ ನೇಮಕ ಕಡ್ಡಾಯ ಎಂಬ ಬಗ್ಗೆ 'ಇಜ್ಮಾಅ್' ಇದೆ.[2]

---

ಾರಿಜೀಗಳ ಒಂದು ನಗಣ್ಯ ಗುಂಪಿನ ಹೊರತು ಈ ವಿಷಯದಲ್ಲಿ ಎಲ್ಲರ ಒಮ್ಮತಾಭಿಪ್ರಾಯವಿದೆ. ರೆ ಇಮಾಮಿಯ್ಯಾ ಮತ್ತು ಇಸ್ಮಾಈಲಿಯ್ಯಾ ಪಂಗಡಗಳು ಇಮಾಮ್‌ರ ನೇಮಕಾತಿ ಯವೆಂದು ಒಪ್ಪುತ್ತಾರಾದರೂ ಅದು ದೇವರ ಹೊಣೆಯೇ ಹೊರತು ಮನುಷ್ಯರ ಹೊಣೆ ಅಲ್ಲ ತ್ತಾರೆ. ಖಾರಿಜೀಗಳ ದೃಷ್ಟಿಯಲ್ಲಿ ಇಮಾಮ್‌ನ ನೇಮಕಾತಿ ಅಥವಾ ಆಡಳಿತ ವ್ಯವಸ್ಥೆಯ ಸ್ಥಾಪನೆ ಸಮ್ಮತವೇ ಹೊರತು ಕಡ್ಡಾಯವಲ್ಲ. (ಕಿತಾಬುಲ್ ಮವಾತಿಫ್ ವಶರಹ್, ಭಾಗ- 8, ಪುಟ- ) ಆದರೆ ಈ ಅಭಿಪ್ರಾಯಗಳು ಶರೀಅತ್‌ನ ದೃಷ್ಟಿಯಲ್ಲೂ, ಬುದ್ಧಿಯ ತಕ್ಕಡಿಯಲ್ಲಿ ತೂಗಿದರೂ, ವಹಾರಿಕವಾಗಿ ನೋಡಿದರೂ ಎಷ್ಟೊಂದು ದುರ್ಬಲವಾಗಿದೆ ಎಂದರೆ ಅದು ತಪ್ಪೆಂದು ಪ್ರತ್ಯೇಕವಾಗಿ ಸುವ ಅಗತ್ಯವೇ ಉಳಿಯುವುದಿಲ್ಲ.

(ಪುಟ– 11

ಅಂದರೆ ಶರೀಅತ್‌ನ ಪ್ರಕಾರ, ಒಂದು ಸ್ವಂತ ಆಡಳಿತ ವ್ಯವಸ್ಥೆಯ
ಸ್ಥಾಪಿಸಬೇಕಾದುದು ಮುಸ್ಲಿಮ್ ಸಮುದಾಯದ ಕರ್ತವ್ಯ ಎಂದಾಯಿತು. ಈ ಕರ್ತವ್ಯವ
ಪಾಲಿಸದಿದ್ದಲ್ಲಿ ಸಮುದಾಯವು ಸಾಮೂಹಿಕವಾಗಿ ಒಂದು ಪಾಪದ ಹೊಣೆ ಹೊರಬೇಕಾದೀ
ಮತ್ತು ಆ ಕುರಿತು ಅಲ್ಲಾಹನ ವಿಚಾರಣೆ ಎದುರಿಸಬೇಕಾದೀತು.

ಅಲ್ಲಾಮಾ ತಫ್ತಝಾನೀ ಅವರು ಅದೇ ಗ್ರಂಥದಲ್ಲಿ, ಇಮಾಮ್‌ನ ನೇಮಕ
ಕಡ್ಡಾಯವೆಂಬುದಕ್ಕೆ ಆಧಾರಗಳನ್ನು ಮಂಡಿಸುತ್ತಾ ಹೇಳುತ್ತಾರೆ:

''ಇನ್ನೊಂದು ಕಾರಣವೇನೆಂದರೆ ಶರೀಅತ್ ಕಡ್ಡಾಯಗೊಳಿಸಿರುವಂತಹ ಇ
ಹಲವಾರು ಕರ್ತವ್ಯಗಳ ನಿರ್ವಹಣೆ ಇಮಾಮತ್‌ನ ಸ್ಥಾಪನೆಯನ್ನು ಅವಲಂಬಿಸಿಕೊಂಡಿದೆ.

ನಿಜವಾಗಿ, ಶರೀಅತ್‌ನ ಕಡ್ಡಾಯ ವಿಧಿಗಳ ಪೂರ್ಣ ಈಡೇರಿಕೆ ಸಾಧ್ಯವಾಗಬೇ
ಎಂಬುದೇ, ಪ್ರವಾದಿ ಮುಹಮ್ಮದ್ ಮುಸ್ತಫಾ(ಸ) ಅವರು ಮತ್ತವರ ಅನುಯಾಯಿಗಳ
ಆಡಳಿತ ವ್ಯವಸ್ಥೆಯ ಸ್ಥಾಪನೆಗೆ ಅಷ್ಟು ಒತ್ತು ಕೊಡಲು ಮೂಲ ಕಾರಣ. ಯಾವ ಸರಕಾ
ಅನುಪಸ್ಥಿತಿಯಲ್ಲಿ ಧರ್ಮದ ಹಲವಾರು ಕಡ್ಡಾಯ ವಿಧಿಗಳ ಪಾಲನೆ ಅಸಾಧ್ಯವೋ ಅ
ಸರಕಾರದ ಅನುಪಸ್ಥಿತಿಯಲ್ಲಿ ಧರ್ಮವು ಪೂರ್ಣ ಸುರಕ್ಷಿತವಾಗಿದೆ ಎನ್ನಲು ಹೇಗೆ ಸಾಧ
ತನ್ನದಾದ ಒಂದು ಆಡಳಿತ ವ್ಯವಸ್ಥೆ ಇಲ್ಲದಿರುವಲ್ಲಿ ಇಸ್ಲಾಮ್ ಧರ್ಮವು ತನ್ನ ನೈಜ ಹಾ
ಪೂರ್ಣ ರೂಪದಲ್ಲಿ ಬೆಳಗಲು ಸಾಧ್ಯವಿಲ್ಲ, ಸರಕಾರವಾಗಲಿ ಆಡಳಿತ ವ್ಯವಸ್ಥೆಯಾಗಲಿ ಇ
ಇಸ್ಲಾಮ್, ಕೈಕಾಲುಗಳಿಲ್ಲದ ಶರೀರದಂತಾಗಿ ಬಿಡುತ್ತದೆ. ಅಂಥ ಶರೀರವನ್ನು ನಿಜೀ
ಶವವೆಂದು ಹೇಳಲು ಸಾಧ್ಯವಿಲ್ಲವಾದರೂ, ಅದೊಂದು ಆರೋಗ್ಯವಂತ ಅಥವಾ ಉಪಯ
ಶರೀರವೆಂದು ಕರೆಯಲ್ಪಡುವ ಅರ್ಹತೆಯನ್ನಂತೂ ಪಡೆದಿರುವುದಿಲ್ಲ, ಹಾಗೆಯೇ ಒಂ
ಆರೋಗ್ಯವಂತ ಹಾಗೂ ಬಲಾಢ್ಯ ಶರೀರವು ಮಾಡಬಹುದಾದ ಸಾಧನೆಗಳನ್ನು ಆ ಅಂಗವಿ
ಶರೀರದಿಂದ ನಿರೀಕ್ಷಿಸುವುದೂ ತಪ್ಪು.

ಇಸ್ಲಾಮ್ ಮತ್ತು ಆಡಳಿತ ವ್ಯವಸ್ಥೆಯ ಈ ಅವಿಭಾಜ್ಯ ಸಂಬಂಧವು ಕೇವಲ ಪ
ಕುರ್‌ಆನ್ ಮತ್ತು ಅಂತ್ಯ ಪ್ರವಾದಿಯ(ಸ) ಮೂಲಕ ಜಗತ್ತಿಗೆ ಬಂದ 'ಇಸ್ಲಾಮ್ ಧರ
ಮಾತ್ರ ಸೀಮಿತವಾಗಿರುವ ಸಂಬಂಧವಲ್ಲ, ಅದು ಎಲ್ಲ ಕಾಲದ ಜನಾಂಗಗಳಿಗೆ ದೇ
ವತಿಯಿಂದ ಜಗತ್ತಿಗೆ ಬಂದ ಎಲ್ಲ ಧರ್ಮಗಳಿಗೆ ಸಮಾನವಾಗಿ ಅನ್ವಯಿಸುತ್ತದೆ. ಆದ್ದರಿ
ಮುಸ್ಲಿಮ್ ಸಮುದಾಯಕ್ಕಿಂತ ಮುಂಚೆ ಅಸ್ತಿತ್ವದಲ್ಲಿದ್ದ ಬನೀ ಇಸ್ರಾಈಲ್ ಜನಾಂ
ಬಗ್ಗೆ ಪ್ರವಾದಿ ಮುಹಮ್ಮದ್(ಸ) ಹೇಳಿದ್ದರು: ಬನೀ ಇಸ್ರಾಈಲ್ ಜನಾಂಗದಲ್ಲಿ ಕಾನೂ
ವ್ಯವಸ್ಥೆಯನ್ನು ಪ್ರವಾದಿಗಳೇ ನಡೆಸುತ್ತಿದ್ದರು. ಒಬ್ಬ ಪ್ರವಾದಿ ನಿಧನನಾದರೆ ಇನ
ಪ್ರವಾದಿಯು ನಿಯುಕ್ತರಾಗುತ್ತಿದ್ದರು. (ಮುಸ್ಲಿಮ್, ಕಿತಾಬುಲ್ ಇಮಾರಃ)

ಈ 'ಕಾನೂನು ವ್ಯವಸ್ಥೆ' ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರೂಪದಲ್ಲಿ ಇ

ಬಹುದು. ಆದರೆ, ಏನಿದ್ದರೂ ಅದೊಂದು ಆಡಳಿತ ವ್ಯವಸ್ಥೆಯೇ ಆಗಿತ್ತು ಮತ್ತು ಅದರ ಪೂರ್ಣ ಹಾಗೂ ಮಾದರಿ ಸ್ವರೂಪವೂ ಹಝ್ರತ್ ದಾವೂದ್(ಅ) ಮತ್ತು ಹಝ್ರತ್ ಸುಲೈಮಾನ್(ಅ) ಅವರ ಕಾಲದಲ್ಲಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಒಪ್ಪಲೇ ಬೇಕಾಗುತ್ತದೆ. ಈ ಹದೀಸ್ ಅನ್ನು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಅದರಿಂದ ಬನೀ ಇಸ್ರಾಈಲ್ ಜನಾಂಗದಲ್ಲಿ ಸಾಮಾನ್ಯವಾಗಿ ಆಡಳಿತ ವ್ಯವಸ್ಥೆ ನಿರಂತರ ಅಸ್ತಿತ್ವದಲ್ಲಿತ್ತು ಎಂದು ಮಾತ್ರವಲ್ಲ, ಅದು ನೇರವಾಗಿ ಆ ಜನಾಂಗದ ಪ್ರವಾದಿಗಳ ಕರ್ತವ್ಯವೂ ಆಗಿತ್ತು ಎಂಬುದು ಕೂಡಾ ತಿಳಿದು ಬರುತ್ತದೆ. ಹಾಗೆಯೇ ಆ ಪ್ರವಾದಿಗಳ ನಿಯುಕ್ತಿಯ ಹಿಂದಿನ ಉದ್ದೇಶಗಳ ಪೈಕಿ ಆಡಳಿತ ನಿರ್ವಹಣೆಯೂ ಒಂದಾಗಿತ್ತು ಎಂಬುದೂ ಇದರಿಂದ ತಿಳಿದಂತಾಗುತ್ತದೆ. ಈ ಅಂಶವು ಧರ್ಮಕ್ಕೆ ರಾಜಕೀಯ ಮತ್ತು ಧರ್ಮಾನುಯಾಯಿಗಳಿಗೆ ಆಡಳಿತ ವ್ಯವಸ್ಥೆಯ ಅಗತ್ಯ ಎಷ್ಟು ಪ್ರಾಮುಖ್ಯವಾಗಿದೆ ಎಂಬುದನ್ನು ಇನ್ನಷ್ಟು ಉಜ್ವಲವಾಗಿ ವ್ಯಕ್ತಪಡಿಸುತ್ತದೆ.

## ಖಿಲಾಫತ್‌ನ ಕರ್ತವ್ಯಗಳು

'ಖಿಲಾಫತ್'ನ ಸ್ಥಾನಕ್ಕೆ ಒಬ್ಬ ವ್ಯಕ್ತಿ ಆರಿಸಲ್ಪಟ್ಟರೆ ಸಾಮಾನ್ಯ ಆಡಳಿತಗಾರರಿಗಿಂತ ಬಹಳ ವಿಶಾಲ ಹಾಗೂ ವಿಭಿನ್ನವಾದ ಭಾರೀ ಹೊಣೆಗಾರಿಕೆಗಳು ಅವನ ಹೆಗಲ ಮೇಲೆ ಬೀಳುತ್ತವೆ. ಇದು ಪೂರ್ಣವಾಗಿ ಒಂದು ಧಾರ್ಮಿಕ ಹುದ್ದೆಯಾಗಿದ್ದು, ಧರ್ಮವು ತನ್ನ ನಿಶ್ಚಿತ ಉದ್ದೇಶಗಳಿಗಾಗಿಯೇ ಈ ಹುದ್ದೆಯನ್ನು ಸ್ಥಾಪಿಸಿದೆ. ಆ ಉದ್ದೇಶಗಳನ್ನು ಈಡೇರಿಸುವುದೇ ಖಲೀಫನ ಕರ್ತವ್ಯವಾಗಿರುವುದು. ಸಂಕ್ಷಿಪ್ತದಲ್ಲಿ 'ಅಲ್ಲಾಹನ ಧರ್ಮದ ಸಂಸ್ಥಾಪನೆ'ಯೇ ಆ ಉದ್ದೇಶ. ಪ್ರವಾದಿ ಮುಹಮ್ಮದ್(ಸ) ಅವರ ಹಲವಾರು ವಚನಗಳು ಅದನ್ನೇ ತಿಳಿಸುತ್ತವೆ.

ಒಮ್ಮೆ ಪ್ರವಾದಿ(ಸ) ಹೇಳಿದರು: ಒಬ್ಬ ಅಂಗವಿಕಲ ಗುಲಾಮ ಕೂಡಾ ನಿಮ್ಮ ನಾಯಕನಾಗಿ ನೇಮಿಸಲ್ಪಟ್ಟರೆ ಅವನು ದೇವ ಗ್ರಂಥದ ನಿಯಮಗಳ ಪ್ರಕಾರ ನಿಮ್ಮನ್ನು ಆಳುತ್ತಿರುವ ತನಕ ಅವನ ಆದೇಶಗಳನ್ನು ಆಲಿಸಿರಿ ಮತ್ತು ಪಾಲಿಸಿರಿ. (ಮುಸ್ಲಿಮ್, ಕಿತಾಬುಲ್ ಇಮಾರಃ)

ಇನ್ನೊಂದು ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಹೀಗೆ ಹೇಳಿದ್ದರು: ಈ ವಸ್ತು (ಖಿಲಾಫತ್) ಕುರೈಶರ ಕೈಯಲ್ಲಿರುವುದು' ಅವರು ಧರ್ಮದಂತೆ ನಡೆಯುತ್ತಿರುವ ತನಕ. ಯಾರಾದರೂ ಅವರ ವಿರುದ್ಧ ಗುಂಪುಗಾರಿಕೆ ಮಾಡಿದರೆ ಅಲ್ಲಾಹನು ಅವರನ್ನು ಕವಚಿ ಬೀಳಿಸುವನು. (ಬುಖಾರಿ-ಕಿತಾಬುಲ್ ಅಹ್ಕಾಮ್)

ಈ ಹದೀಸ್‌ಗಳು ಯಾವನೇ ನಾಯಕ ಅಥವಾ ಯಾವನೇ ಖಲೀಫಾ ತಾನು ಶರೀಅತ್ ಮತ್ತದರ ಹಿತಾಸಕ್ತಿಗಳಿಗೆ ಬದ್ಧನಾಗಿದ್ದುಕೊಂಡು ತನ್ನ ಕರ್ತವ್ಯಗಳನ್ನು ನಿರ್ವಹಿಸುತ್ತಿರುವ ತನಕ ಮತ್ತು ಅಲ್ಲಾಹನ ಧರ್ಮವನ್ನು ಸ್ಥಾಪಿತವಾಗಿ ಇಟ್ಟಿರುವ ತನಕ ಮಾತ್ರ ಜನರ ಅನುಸರಣೆ ಮತ್ತು ಖಿಲಾಫತ್‌ನ ಅಧಿಕಾರಿಗಳಿಗೆ ಅರ್ಹನಾಗಿರುತ್ತಾನೆ ಎಂಬುದನ್ನು ಸ್ಪಷ್ಟವಾಗಿ ಸಾರುತ್ತವೆ. ಹಾಗೆಯೇ ಒಬ್ಬ ವ್ಯಕ್ತಿ ಒಂದು ಹುದ್ದೆಗೆ ಅರ್ಹನೋ ಅಲ್ಲವೋ ಎಂಬುದು ಆ ಹುದ್ದೆಯ ಉದ್ದೇಶ

ಮತ್ತು ಅದಕ್ಕೆ ಸಂಬಂಧಿಸಿದ ಕರ್ತವ್ಯಗಳನ್ನು ಅವನು ಎಷ್ಟಂಶ ಈಡೇರಿಸಬಲ್ಲನು ಎಂಬುದನ್ನು ಅವಲಂಬಿಸಿದೆ. ಇದೊಂದು ಅಂಗೀಕೃತ ವಾಸ್ತವಿಕತೆ. ಆದ್ದರಿಂದ ಧರ್ಮ ಸಂಸ್ಥಾಪನೆಯೇ ಖಿಲಾಫತ್ ಎಂಬ ಹುದ್ದೆಯ ಉದ್ದೇಶ ಮತ್ತು ಅದರ ಪ್ರಧಾನ ಕರ್ತವ್ಯ ಎಂಬುದನ್ನೇ ಈ ಹದೀಸ್‌ಗಳು ಪ್ರತಿಪಾದಿಸಿವೆ ಎನ್ನಬಹುದು.

ತಿಳಿಯಿರಿ! ಮುಹಮ್ಮದ್(ಸ) ನಿಧನರಾದರು. ಈಗ ಈ ಧರ್ಮಕ್ಕೆ ಅದನ್ನು ಸ್ಥಾಪಿತವಾಗಿಡುವ ಹೊಣೆಯನ್ನು ಹೊರುವ ವ್ಯಕ್ತಿಯೊಬ್ಬರ ಅಗತ್ಯ ಇದೆ ಎಂಬ ಹಝ್ರತ್ ಅಬೂಬಕರ್(ರ) ಅವರ ಮಾತನ್ನು ನೀವು ಈಗ ತಾನೇ ನೋಡಿರುವಿರಿ. ನಿಜವಾಗಿ ಅದು ಕೇವಲ ಅವರೊಬ್ಬರ ಮಾತಾಗಿರಲಿಲ್ಲ, ಅದು ಸಂಪೂರ್ಣ ಸಹಾಬಿ ಸಮುದಾಯದ ಧ್ವನಿಯಾಗಿತ್ತು. ಖಿಲಾಫತ್‌ನ ಸ್ಥಾಪನೆ ವಸ್ತುತಃ ಒಂದು ಉದ್ದೇಶವಾಗಿರದೆ ಧರ್ಮ ಸಂಸ್ಥಾಪನೆಯ ಉದ್ದೇಶಕ್ಕಾಗಿ ಖಿಲಾಫತ್ತನ್ನು ಸಂಸ್ಥಾಪಿಸಲಾಗುತ್ತದೆ. ಆದ್ದರಿಂದ ಧರ್ಮವನ್ನು ಸ್ಥಾಪಿತವಾಗಿಡುವುದೇ ಖಿಲಾಫತ್‌ನ ಮೂಲ ಕರ್ತವ್ಯ ಎಂಬುದನ್ನು ಈ ಅಂಶವೂ ಬಲವಾಗಿ ಸಮರ್ಥಿಸುತ್ತದೆ. ವಿದ್ವಾಂಸರು ಕೂಡಾ ಇಮಾಮತ್ ಅಥವಾ ಖಿಲಾಫತ್ತನ್ನು ಇದೇ ರೀತಿ ವ್ಯಾಖ್ಯಾನಿಸಿರುವರು.

ಧರ್ಮದ ಸಂಸ್ಥಾಪನೆಯ ವಿಷಯದಲ್ಲಿ ಪ್ರವಾದಿವರ್ಯರ(ಸ) ಉತ್ತರಾಧಿಕಾರಿಯಾಗುವುದಕ್ಕೇ 'ಖಿಲಾಫತ್' ಎಂದು ಹೆಸರು. (ಕಿತಾಬುಲ್ ಮವಾಕಿಫ್)

ಇಲ್ಲಿ ಧರ್ಮ ಸಂಸ್ಥಾಪನೆ ಎಂಬುದು ಸ್ವತಃ 'ಧರ್ಮ' ಎಂಬ ಪದದಷ್ಟೇ ವಿಶಾಲ ಹಾಗೂ ವ್ಯಾಪಕ ಅರ್ಥವುಳ್ಳ ಶಬ್ದವಾಗಿದೆ. ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಇರುವ ಎಲ್ಲ ಆದೇಶಗಳೂ 'ಧರ್ಮ'ವೇ ಆಗಿವೆ. ಮುಸ್ಲಿಮ್ ಸಮಾಜವು ಸಾಮೂಹಿಕವಾಗಿ ಈ ಧರ್ಮವನ್ನು ಸಂಪೂರ್ಣ ಅನುಸರಿಸುವಂತೆ ನೋಡಿಕೊಳ್ಳುವುದೇ ಧರ್ಮ ಸಂಸ್ಥಾಪನೆ. ಇಲ್ಲಿ ಈ ಕುರಿತು ಹೆಚ್ಚು ವಿವರವಾದ ವಿಶ್ಲೇಷಣೆ ಅಸಾಧ್ಯವಾದರೂ ಖಲೀಫರ ಪ್ರಧಾನ ಹೊಣೆಗಾರಿಕೆಗಳ ಒಂದು ಸಂಕ್ಷಿಪ್ತ ರೂಪರೇಷೆ ನಮ್ಮ ಮುಂದೆ ಬರಬೇಕಾದುದು ಅಗತ್ಯ. ನಾವು ಖಿಲಾಫತ್ ಎಂಬ ಸ್ಥಾನದ ಉದ್ದೇಶ ಮತ್ತು ಆ ಸ್ಥಾನದಿಂದ ಧರ್ಮವು ನಿರೀಕ್ಷಿಸುವ ಚಟುವಟಿಕೆ ಮತ್ತು ಧರ್ಮದ ಹಿತಾಸಕ್ತಿ ಮುಂತಾದ ಅಂಶಗಳನ್ನು ಪರಿಗಣಿಸಿದರೆ ಖಿಲಾಫತ್‌ನ ಕರ್ತವ್ಯಗಳನ್ನು ಈ ರೀತಿ ಪಟ್ಟಿ ಮಾಡಬಹುದು.

1. ಸೈದ್ಧಾಂತಿಕವಾಗಿ ಧರ್ಮದ ಸಂರಕ್ಷಣೆ, ಧಾರ್ಮಿಕ ತತ್ವಾದರ್ಶಗಳ ಪ್ರಚಾರ ಮತ್ತು ಪ್ರಸಾರ ಹಾಗೂ ಮುಸ್ಲಿಮರಲ್ಲಿ ಧರ್ಮವಿಶ್ವಾಸ ಮತ್ತು ಧರ್ಮ ಪಾಲನೆಯ ಪ್ರಜ್ಞೆಯನ್ನು ಬೆಳೆಸುವುದು.

2. ಧರ್ಮದ ಪ್ರಾಯೋಗಿಕ ಬುನಾದಿಗಳನ್ನು (ನಮಾಝ್, ಝಕಾತ್, ಉಪವಾಸ ಮತ್ತು ಹಜ್ಜ್) ಸ್ಥಾಪಿತವಾಗಿಡುವುದು. ಸಮಾಜದಲ್ಲಿ ಅವುಗಳ ಬಗ್ಗೆ ಅಸಡ್ಡೆ ಮೂಡದಂತೆ ನೋಡಿಕೊಳ್ಳುವುದು.

3. ಧರ್ಮ ಮತ್ತು ಸಮುದಾಯವನ್ನು ಶತ್ರು ಶಕ್ತಿಗಳಿಂದ ರಕ್ಷಿಸುವುದು. ಇದಕ್ಕಾಗಿ ಯುದ್ಧ ಮತ್ತು ಜಿಹಾದ್‌ಗೆ ಸಂಬಂಧಿಸಿದ ಎಲ್ಲ ಕರ್ತವ್ಯಗಳನ್ನು ಪಾಲಿಸುವುದು.

4. ವಿವಾದಗಳ ಇತ್ಯರ್ಥ ಮತ್ತು ನ್ಯಾಯ ಸ್ಥಾಪನೆ.

5. ಅಪರಾಧಿಗಳ ಮೇಲೆ ನಿಗದಿತ ಶಿಕ್ಷೆಗಳನ್ನು ಜಾರಿಗೊಳಿಸುವುದು.

6. ನಾಗರಿಕರ ಪ್ರಾಣ, ಸೊತ್ತು, ವಿತ್ತ, ಮಾನ ಮತ್ತು ಗೌರವಗಳನ್ನು ಸಂರಕ್ಷಿಸುವುದು ಹಾಗೂ ಸಮಾಜದಲ್ಲಿ ಶಾಂತಿ ಕಾಪಾಡುವುದು.

7. ದುರ್ಬಲರಿಗೆ ಮತ್ತು ಸಹಾಯಾರ್ಥಿಗಳಿಗೆ ನೆರವಾಗುವುದು.

8. ಸಮಾಜದ ಒಳಗೂ ಹೊರಗೂ 'ಒಳಿತನ್ನು ಆದೇಶಿಸುವ ಮತ್ತು ಕೆಡುಕನ್ನು ವಿರೋಧಿಸುವ' ಕಾರ್ಯವನ್ನು ಸರಿಯಾಗಿ ನಿರ್ವಹಿಸುವುದು.

ಈ ಪಟ್ಟಿಯನ್ನು ಇನ್ನೂ ದೀರ್ಘಗೊಳಿಸಲು ಸಾಧ್ಯವಿದೆ. ಹಲವು ವಿದ್ವಾಂಸರು ಖಲೀಫರ ಹೊಣೆಗಾರಿಕೆಗಳನ್ನು ಪಟ್ಟಿ ಮಾಡುತ್ತಾ, ಇನ್ನೂ ಕೆಲವು ಹೊಣೆಗಾರಿಕೆಗಳನ್ನು ಪ್ರಸ್ತಾಪಿಸಿದ್ದಾರೆ. ಆದರೆ ನಿಜವಾಗಿ ಆ ಅಂಶಗಳು ಒಂದೋ ಮೂಲ ಸ್ವರೂಪದ್ದಲ್ಲ, ಇನ್ನು ಮೂಲಭೂತ ಸ್ವರೂಪದ್ದೇ ಆಗಿದ್ದರೂ ಅವು ಒಂದಿಲ್ಲೊಂದು ವಿಧದಲ್ಲಿ ಮೇಲೆ ಪ್ರಸ್ತಾಪಿಸಲಾದ 8 ಕರ್ತವ್ಯಗಳ ಪೈಕಿ ಯಾವುದಾದರೂ ಒಂದರ ಜೊತೆ ಸೇರಿಸಬಹುದಾದ ಅಂಶಗಳಾಗಿರುತ್ತವೆ.

## ಖಿಲಾಫತ್: ಅಧಿಕಾರಗಳು

ಖಿಲಾಫತ್ ಅಥವಾ ಮುಸ್ಲಿಮರ ಖಲೀಫರ ಕರ್ತವ್ಯಗಳು ಬಹಳ ವ್ಯಾಪಕವಾಗಿರುವಂತೆಯೇ ಅವರ ಅಧಿಕಾರ ಮತ್ತು ಹಕ್ಕುಗಳೂ ಬಹಳ ವಿಸ್ತೃತವಾಗಿವೆ. ಜಗತ್ತಿನ ಬೇರಾವುದೇ ವ್ಯವಸ್ಥೆಯಲ್ಲಿ ಒಬ್ಬ ಆಡಳಿತಗಾರನಿಗೆ ಇರುವುದಕ್ಕಿಂತ ಹೆಚ್ಚಿನ ಹಕ್ಕುಗಳು ಒಬ್ಬ ಖಲೀಫನಿಗಿರುತ್ತವೆ. ಈ ಹಕ್ಕುಗಳು ಹೀಗಿವೆ;

### 1. ಅನುಸರಣೆ

ತನ್ನ ಆದೇಶಗಳನ್ನು ಜನತೆ ಕೇಳಬೇಕು ಮತ್ತು ಪಾಲಿಸಬೇಕು ಎಂಬುದು ಖಲೀಫನ ಪ್ರಥಮ ಹಕ್ಕು.

ಪವಿತ್ರ ಕುರ್‌ಆನ್‌ನಲ್ಲಿ ಅಲ್ಲಾಹನು ಈ ರೀತಿ ಆದೇಶಿಸಿರುವನು: ''**ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಅನುಸರಿಸಿರಿ ಮತ್ತು ಅವನ ಪ್ರವಾದಿಯನ್ನೂ, ನಿಮ್ಮಲ್ಲಿನ ಅಧಿಕಾರಸ್ಥರನ್ನೂ ಅನುಸರಿಸಿರಿ.**''

ಈ ವಾಕ್ಯದಲ್ಲಿ ಅಧಿಕಾರಸ್ಥರು ಎಂದರೆ ಮುಖ್ಯವಾಗಿ ಮುಸ್ಲಿಮರ ಖಲೀಫ ಎಂದು ಅರ್ಥ. ಇಲ್ಲಿ ಸ್ಪಷ್ಟವಾಗಿ ಅವನ ಅನುಸರಣೆ ಮಾಡಬೇಕೆಂದು ನೇರವಾಗಿ ಮುಸ್ಲಿಮರಿಗೆ ಆದೇಶಿಸಲಾಗಿದೆ. ಅಲ್ಲದೆ ಇಲ್ಲಿ ಅಲ್ಲಾಹನ ಮತ್ತು ಅವನ ಪ್ರವಾದಿಯ ಅನುಸರಣೆಯ ಆದೇಶದ ಜೊತೆಗೇ ನಾಯಕರ ಅನುಸರಣೆಗೆ ಆದೇಶಿಸಿರುವುದರಿಂದ, ಈ ವಿಶಿಷ್ಟ ಶೈಲಿಯೇ, ಅದರ ಮಹತ್ವ ಎಷ್ಟೆಂಬುದಕ್ಕೆ ಸಾಕ್ಷಿಯಾಗಿದೆ. ಇದನ್ನೇ ವಿಶ್ಲೇಷಿಸುವಂತೆ ಪ್ರವಾದಿ ಮುಹಮ್ಮದ್(ಸ)

ಹೇಳಿದ್ದರು.

ನನ್ನನ್ನು ಅನುಸರಿಸಿದವನು ನಿಜವಾಗಿ ಅಲ್ಲಾಹನ ಆದೇಶವನ್ನು ಅನುಸರಿಸಿದಂತಾಗುವುದು. ನನ್ನ ಆಜ್ಞೆಗಳನ್ನು ಉಲ್ಲಂಘಿಸಿದವರು ನಿಜವಾಗಿ ಅಲ್ಲಾಹನ ಆಜ್ಞೋಲ್ಲಂಘನೆ ಮಾಡಿದಂತಾಗುವುದು. ತನ್ನ ನಾಯಕನ ಆದೇಶ ಪಾಲಿಸಿದವನು ನನ್ನ ಆದೇಶ ಪಾಲಿಸಿದಂತಾಗುವುದು. ನಾಯಕನ ಆಜ್ಞೆ ಮೀರಿದವನು ನನ್ನ ಆಜ್ಞೆ ಮೀರಿದಂತಾಗುವುದು. ತನ್ನ ನಾಯಕನ ಆದೇಶ ಪಾಲಿಸಿದವನು ನನ್ನ ಆದೇಶ ಪಾಲಿಸಿದಂತಾಗುವುದು. ನಾಯಕನ ಆಜ್ಞೆ ಮೀರಿದವನು ನನ್ನ ಆಜ್ಞೆ ಮೀರಿದಂತಾಗುವುದು. (ಮುಸ್ಲಿಮ್ ಭಾಗ– 2)

ಈ ರೀತಿ ನಾಯಕನ ಅನುಸರಣೆ ಒಂದು ವಿಧದಲ್ಲಿ ಅಲ್ಲಾಹನ ಮತ್ತು ಅವನ ಸಂದೇಶ ವಾಹಕರ ಅನುಸರಣೆಗೆ ಸಮಾನವಾದ ಕ್ರಿಯೆಯಾಗಿರುವುದರಿಂದ ಇದನ್ನು ಐಚ್ಛಿಕವೆಂದು ಪರಿಗಣಿಸಲು ಅಥವಾ ಅವರವರ ಇಚ್ಛೆಗೆ ಬಿಡಲು ಸಾಧ್ಯವಿಲ್ಲ. ಜನರ ವೈಯಕ್ತಿಕ ಒಲವುಗಳೇನೇ ಇದ್ದರೂ, ಎಲ್ಲರಿಂದ ಅನುಸರಿಸಲ್ಪಡುವುದು ಖಲೀಫನ ಹಕ್ಕಾಗಿರುತ್ತದೆ. ಪ್ರವಾದಿ ಮುಹಮ್ಮದ್(ಸ) ಅವರ ಕಾಲದಲ್ಲೂ ಈ ಹಕ್ಕು ಇದೇ ಸ್ವರೂಪದಲ್ಲಿ ಅಂಗೀಕರಿಸಲ್ಪಟ್ಟಿತ್ತು. ಹ. ಉಬಾದಾ ಬಿನ್ ಸಾಬಿತ್(ರ) ಹೇಳುತ್ತಾರೆ;

ಪ್ರವಾದಿ ಮುಹಮ್ಮದ್(ಸ) ನಮ್ಮನ್ನು ಕರೆದರು ಮತ್ತು ನಮ್ಮಿಂದ ಬೈಅತ್(ಕರಾರು) ಪಡೆದುಕೊಂಡರು. ಕರಾರಿನಲ್ಲಿ ಇತರ ವಿಷಯಗಳ ಜೊತೆಗೆ, ನಮಗೆ ಇಚ್ಛೆ ಇದ್ದರೂ ಇಲ್ಲದಿದ್ದರೂ ನಾವು ಸುಖದಲ್ಲಿದ್ದರೂ, ಕಷ್ಟದಲ್ಲಿದ್ದರೂ ನಮ್ಮ ನಾಯಕನ ಆದೇಶಗಳನ್ನು ಕೇಳುವೆವು ಮತ್ತು ಅನುಸರಿಸುವೆವು... ಎಂಬ ವಾಗ್ದಾನವೂ ಒಳಗೊಂಡಿತ್ತು.

(ಮುಸ್ಲಿಮ್ ಕಿತಾಬುಲ್ ಇಮಾರಃ)

ಮನಸ್ಸಿಗೆ ಒಲವು ಇದ್ದರೂ ಇಲ್ಲದಿದ್ದರೂ ಸುಖವಿದ್ದರೂ ಕಷ್ಟವಿದ್ದರೂ ನಾಯಕನ ಆದೇಶ ಪಾಲನೆ ಮತ್ತು ಅನುಸರಣೆ ಒಬ್ಬ ಮುಸ್ಲಿಮನ ಕರ್ತವ್ಯ. ಅಷ್ಟು ಮಾತ್ರವಲ್ಲ, ನಾಯಕನಾಗಿ ಆರಿಸಲ್ಪಟ್ಟ ವ್ಯಕ್ತಿ, ಆ ಬಳಿಕ ವೈಯಕ್ತಿಕವಾಗಿ ದುರ್ನಡೆ ತೋರಿದರೂ, ತನ್ನ ಹಕ್ಕುಗಳ ಬಗ್ಗೆ ಮಾತ್ರ ಪ್ರಜ್ಞೆ ಇರುವವನಾಗಿದ್ದರೆ ಆಗಲೂ ಅಂಥ ನಾಯಕನ ಅನುಸರಣೆಯ ಕುರಿತು ಪ್ರಸ್ತುತ ಹದೀಸ್‌ನಲ್ಲೇ ಮುಂದುವರಿದು ಹೀಗೆ ಹೇಳಲಾಗಿದೆ.

ನಾಯಕನು ನಮ್ಮನ್ನು ಬಿಟ್ಟು ಇತರರಿಗೆ ಪ್ರಾಶಸ್ತ್ಯ ಕೊಟ್ಟರೂ ನಾವು ಅವನನ್ನು ಅನುಸರಿಸಬೇಕು.

ಇನ್ನೂ ಮುಂದುವರಿದು ಪ್ರವಾದಿ(ಸ) ಹೀಗೆ ಹೇಳಿರುವರು: 'ನೀವು (ನಿಮ್ಮ ನಾಯಕರ ಆದೇಶಗಳನ್ನು) ಕೇಳಬೇಕು ಮತ್ತು ಅವರನ್ನು ಅನುಸರಿಸ ಬೇಕು; ಅವರು ನಿಮ್ಮ ಬೆನ್ನನ್ನು ಗಾಯಗೊಳಿಸಿದರೂ, ನಿಮ್ಮಿಂದ ನಿಮ್ಮ ಸೊತ್ತನ್ನು ಕಿತ್ತುಕೊಂಡರೂ ಆಜ್ಞೆ ಕೇಳುತ್ತಾ, ಪಾಲಿಸುತ್ತಾ ಇರಬೇಕು.' (ಮುಸ್ಲಿಮ್: ಕಿತಾಬುಲ್ ಇಮಾರಃ)

ಹೀಗೆ ಒಬ್ಬ ವ್ಯಕ್ತಿ ನಾಯಕತ್ವ ಅಥವಾ ಖಿಲಾಫತ್‌ನ ಸ್ಥಾನದಲ್ಲಿ ಇರುವ ತನಕ ಅವನ

ನುಸರಣೆ ಕಡ್ಡಾಯವಾಗಿದ್ದು ಮುಸಲ್ಮಾನರು ಎಲ್ಲ ಸ್ಥಿತಿಗಳಲ್ಲೂ ಈ ಕರ್ತವ್ಯವನ್ನು ಪಾಲಿಸುತ್ತಿರಬೇಕು ಎಂದು ಆಗ್ರಹಿಸುವ ಹಲವಾರು ಹದೀಸ್‌ಗಳಿವೆ. ಒಬ್ಬ ನಾಯಕನ ನಿರ್ದಯತೆ, ಅನ್ಯಾಯ ಅಥವಾ ಪಕ್ಷಪಾತ ನೀತಿ ಕೂಡಾ, ಅವನನ್ನು ಅನುಸರಿಸದೆ ಇರಲು ಪರ್ಯಾಪ್ತ ಕಾರಣವಲ್ಲ ಎಂಬುದೂ ಇದರಿಂದ ತಿಳಿಯುತ್ತದೆ.

ಜನರಿಂದ ಅನುಸರಿಸಲ್ಪಡುವ, ನಾಯಕನ ಈ ಹಕ್ಕು, ಎಷ್ಟು ಮಹತ್ವದ್ದು ಮತ್ತು ಒಬ್ಬ ಮುಸಲ್ಮಾನನು ಅದನ್ನು ನಿರಾಕರಿಸಿದರೆ ಅವನು ಎಂಥ ಪರಿಣಾಮ ಎದುರಿಸಬೇಕಾದೀತು ಎಂಬುದನ್ನು ಈ ಕೆಳಗಿನ ಹದೀಸ್‌ನಲ್ಲಿ ತಿಳಿಸಲಾಗಿದೆ.

(ನಾಯಕನ) ಅನುಸರಣೆಯಿಂದ ವಿಮುಖನಾದವನು ಪುನರುತ್ಥಾನ ದಿನ ಅಲ್ಲಾಹನ ಮುಂದೆ ಯಾವ ಸ್ಥಿತಿಯಲ್ಲಿ ಹೋಗುವನೆಂದರೆ, ಅವನ ಬಳಿ ತನ್ನ ಪರವಾಗಿ ಯಾವುದೇ ಸಾಕ್ಷ್ಯ ತರಲಾರದು. (ಮುಸ್ಲಿಮ್ ಕಿತಾಬುಲ್ ಇಮಾರಃ)

ಅಂದರೆ ನಾಯಕನ ಆಜ್ಞೋಲ್ಲಂಘನೆಯ ದುಷ್ಪರಿಣಾಮ ಕೇವಲ ಈ ಲೋಕಕ್ಕೆ ಸೀಮಿತವಲ್ಲ, ಪರಲೋಕದಲ್ಲೂ ಇದೊಂದು ಅಸಮರ್ಥನೀಯ ಅಪರಾಧವೆಂದು ಪರಿಗಣಿಸಲ್ಪಡುವುದು.

ಇನ್ನೊಂದು ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಹೇಳಿದರು:

ತನ್ನ ನಾಯಕನಿಂದ ಏನಾದರೂ ಅಹಿತಕರ ಕೃತ್ಯ ನಡೆದದ್ದನ್ನು ನೋಡಿದರೂ ತಾಳ್ಮೆಯಾಯಿ ಸಹಿಸಿಕೊಳ್ಳಬೇಕು. (ಅಂದರೆ ಕೇವಲ ಆ ಕಾರಣಕ್ಕಾಗಿ ಅವನ ಅನುಸರಣೆಯಿಂದ ವಿಮುಖನಾಗಬಾರದು) ಏಕೆಂದರೆ ಒಬ್ಬ ವ್ಯಕ್ತಿ 'ಜಮಾಅತ್'(ಸಂಘಟನೆ)ನಿಂದ ಒಂದು ಗೇಣು ಕೂಡಾ ದೂರ ಸರಿದು, ಆ ಅವಸ್ಥೆಯಲ್ಲೇ ಮೃತನಾದರೆ ಅವನ ಮರಣವು ಅಜ್ಞಾನದ ಅವಸ್ಥೆಯಲ್ಲಾಯಿತು ಎಂದೇ ಪರಿಗಣಿಸಲ್ಪಡುವುದು. (ಬುಖಾರಿ: ಕಿತಾಬುಲ್ ಫಿತನ್)

ಈ ಹದೀಸ್, ನಾಯಕನ ಅನುಸರಣೆಯ ವಿಷಯದ ಮೇಲೆ ಇನ್ನಷ್ಟು ಬೆಳಕು ಚೆಲ್ಲುತ್ತದೆ. ಹಾಗೆಯೇ ಖಲೀಫರ ಹುದ್ದೆಯು ಸಂಪೂರ್ಣ ಮುಸ್ಲಿಮ್ ಸಮಾಜ ಮತ್ತು ಸಂಘಟನಾ ವ್ಯವಸ್ಥೆಯನ್ನು ಪ್ರತಿನಿಧಿಸುವ ಸಂಕೇತವಾಗಿದ್ದು ಆ ಹುದ್ದೆಯಲ್ಲಿರುವವರ ಆಜ್ಞೆಯನ್ನು ಮೀರಿದರೆ ಮುಸ್ಲಿಮ್ ಸಂಘಟನೆ ಅಥವಾ ಸಮಾಜದಿಂದಲೇ ಬೇರ್ಪಟ್ಟಂತಾಗುತ್ತದೆಂಬುದನ್ನು ಈ ಹದೀಸ್ ತಿಳಿಸುತ್ತದೆ. ಇದರಲ್ಲಿ ಅಡಕವಾಗಿರುವ ಇನ್ನೊಂದು ಮಹತ್ವದ ಅಂಶವೇನೆಂದರೆ, ಈ ಅಪರಾಧ ಅತ್ಯಂತ ಘೋರ ಸ್ವರೂಪವಾಗಿದ್ದು, ಈ ಅಪರಾಧ ಎಸಗಿದವನು, ತಾನು ಮುಸ್ಲಿಮ್ ಎಂದು ಹೇಳಿಕೊಳ್ಳುವ ಅರ್ಹತೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ತಾನೆಷ್ಟೇ ಧಾರ್ಮಿಕನಾಗಿದ್ದರೂ, ಈ ಅಪರಾಧ ಎಸಗಿದರೆ ಅವನ ಮರಣವು ಅಜ್ಞಾನಾವಸ್ಥೆಯ ಮರಣವೆನಿಸುವುದು. ಈ ಕುರಿತು ಇದೇ ಬಗೆಯ ಎಚ್ಚರಿಕೆ ಕೊಡುವ ಇನ್ನೊಂದು ಹದೀಸನ್ನು ಈಗಾಗಲೇ ನಾವು ಚರ್ಚಿಸಿದ್ದೇವೆ. ಆ ಹದೀಸ್ ಹೀಗಿದೆ:

'ಒಬ್ಬ ವ್ಯಕ್ತಿ 'ಜಮಾಅತ್'ನಿಂದ ಒಂದು ಗೇಣಿನಷ್ಟಾದರೂ ದೂರ ಸರಿದು,

ಅನಂತರ ಅವನು . ಮರಳದಿದ್ದರೆ ಅವನು ಇಸ್ಲಾಮಿನ ನೊಗವನ್ನೇ ತನ್ನ ಕೊರಳಿನಿಂ
ಕಿತ್ತೆಸೆದಂತಾಗುವುದು.'

(ಮಿಶ್ಕಾತ

## 2. ಖಲೀಫರೊಂದಿಗೆ ಜನತೆಯ ಪ್ರೀತಿ

ಜನರಿಂದ ಪ್ರೀತಿಸಲ್ಪಡಬೇಕಾದುದು ಕೂಡಾ ಖಲೀಫ ಆಗಿ ಆರಿಸಲ್ಪಡುವವನ ಒಂದ ಪ್ರಾಮುಖ್ಯ ಹಕ್ಕು. ಬಾಹ್ಯವಾಗಿ ಖಲೀಫನ ಆದೇಶಗಳನ್ನು ತಪ್ಪದೆ ಪಾಲಿಸುವ ರೀತಿಯೇ ಮನಸ್ಸಿನಲ್ಲೂ ಖಲೀಫರನ್ನು ಪ್ರೀತಿಸಬೇಕಾದುದು ಜನರ ಕರ್ತವ್ಯವಾಗಿದೆ. ಈ ಕುರಿ ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿದರು;

''ನೀವು ಅವರನ್ನು ಪ್ರೀತಿಸುತ್ತಿರಬೇಕು, ಅವರು ನಿಮ್ಮನ್ನು ಪ್ರೀತಿಸುತ್ತಿರಬೇಕು. ಅವ ಶ್ರೇಯಸ್ಸಿಗಾಗಿ ನೀವು, ನಿಮ್ಮ ಶ್ರೇಯಸ್ಸಿಗಾಗಿ ಅವರು ಪ್ರಾರ್ಥಿಸುತ್ತಿರಬೇಕು. ಅಂಥವ ಖಲೀಫಗಳ ಪೈಕಿ ಅತ್ಯುತ್ತಮರು. ಇನ್ನು ನೀವು ಖಲೀಫನನ್ನು ದ್ವೇಷಿಸುತ್ತಿದ್ದು ಅವನು ನಿಮ್ಮ ದ್ವೇಷಿಸುತ್ತಿದ್ದರೆ ಮತ್ತು ಅವನು ನಿಮ್ಮನ್ನೂ ನೀವು ಅವನನ್ನೂ ಶಪಿಸುತ್ತಿದ್ದರೆ ಅಂಥವರೇ ನಿ ಅತ್ಯಂತ ಕೆಟ್ಟ ಖಲೀಫಾಗಳು.'' (ಮುಸ್ಲಿಮ್ ಕಿತಾಬುಲ್ ಇಮಾರಃ)

ಈ ಹದೀಸ್‌ನಲ್ಲಿ ಒಂದೆಡೆ ಒಳ್ಳೆಯ ಖಲೀಫಗಳನ್ನು ಗುರುತಿಸಲಿಕ್ಕಾಗಿ ಅವ ಲಕ್ಷಣಗಳನ್ನು ಹೇಳಲಾಗಿದ್ದರೆ ಇನ್ನೊಂದೆಡೆ, ಉತ್ತಮ ಖಲೀಫರಲ್ಲಿ ಇಂಥ ಲಕ್ಷಣಗ ಇರಲೇಬೇಕೆಂಬ ಸೂಚನೆಯೂ ಅಡಗಿದೆ. ಇದರಂತೆ, ಜನರಿಗೆ ಖಲೀಫನ ಬಗ್ಗೆ ಒಳ್ಳೆ ಅಭಿಪ್ರಾಯವಿರಬೇಕು. ಅವರು ಅವನ ಹಿತಚಿಂತಕರಾಗಿರಬೇಕು. ಅವನ ಬಗ್ಗೆ ಅವರ ಪ್ರೀತಿ, ವಿಶ್ವಾಸ ಮತ್ತು ನಿಷ್ಠೆ ತುಂಬಿರಬೇಕು. ಈ ನೀತಿಯನ್ನು ಒಂದು ಹದೀಸ್‌ನ ಸಾಕ್ಷಾತ್ ಧರ್ಮವೆಂದೇ ವರ್ಣಿಸಲಾಗಿದೆ.

ಧರ್ಮ ಎಂಬುದು ಸದ್ಭಾವನೆಯ ಹೆಸರು ಎಂದು ಪ್ರವಾದಿ(ಸ) ಹೇಳಿದರು. ನಾ ಅರ್ಥಾತ್ ಸಹಾಬಿಗಳು(ರ)- ಪ್ರಶ್ನಿಸಿದೆವು: ಯಾರ ಬಗ್ಗೆ ಸದ್ಭಾವನೆ? ಅವರು ಹೇಳಿದ ಅಲ್ಲಾಹನ ಬಗ್ಗೆ, ಅವನ ಸಂದೇಶವಾಹಕರ ಬಗ್ಗೆ, ಮುಸ್ಲಿಮರ ಖಲೀಫಾಗಳ ಬಗ್ಗೆ ಮ ಮುಸ್ಲಿಮ್ ಜನಸಾಮಾನ್ಯರ ಬಗ್ಗೆ. (ಮುಸ್ಲಿಮ್)

ಆದ್ದರಿಂದಲೇ ಖಿಲಾಫತ್‌ನ ವಿಷಯದಲ್ಲಿ, ಜನರು ಖಲೀಫನೊಂದಿಗೆ ಮಾಡು ಕರಾರನ್ನು(ಬೈಅತ್) ಇಸ್ಲಾಮಿನಲ್ಲಿ ಕೇವಲ ಒಂದು ನಿಷ್ಠೆ ತೋರಿಸುವ ಸಂಪ್ರದಾಯ ಎಂ ಪರಿಗಣಿಸಲಾಗಿಲ್ಲ, ಬೈಅತ್ತನ್ನು ಇಸ್ಲಾಮ್, ಜೀವಾರ್ಪಣೆಯ ಶಪಥ ಎಂಬಂತೆ ಪರಿಗಣಿಸಿ ಈ ಕುರಿತು ಪ್ರವಾದಿವರ್ಯರು(ಸ) ಹೀಗೆ ಹೇಳಿರುವರು;

ಖಲೀಫನ ಕೈಯಲ್ಲಿ ಬೈಅತ್ ಮಾಡಿ ಅವನ ಕೈ ಮೇಲೆ ಕೈ ಇಡುವ ಮೂಲಕ, ಹೃದಯವನ್ನು ಅವನ ವಶಕ್ಕೆ ಅರ್ಪಿಸಿದವನು, ತನಗೆ ಸಾಧ್ಯವಿರುವಷ್ಟು (ಗರಿಷ್ಠ ಮಟ್ಟ

ಲೀಫನ ಸಂಪೂರ್ಣ ಆಜ್ಞಾಪಾಲನೆ ಮಾಡಬೇಕು. (ಮುಸ್ಲಿಮ್ ಕಿತಾಬುಲ್-ಇಮಾರಃ)

ಖಲೀಫರ ಜೊತೆ ಮಾಡಲಾಗುವ 'ಬೈಅತ್' ಕೇವಲ ಆಜ್ಞಾಪಾಲನೆಯ ಕರಾರು ಗಿರದೆ, ಪ್ರೀತಿ ಮತ್ತು ಪ್ರೇಮದ ವಾಗ್ದಾನವೂ ಆಗಿದೆ ಎಂಬುದನ್ನು 'ಹೃದಯವನ್ನು ರ್ಪಿಸುವುದು' ಎಂಬ ಪ್ರಸ್ತುತ ವರ್ಣನೆಯೂ ಸ್ಪಷ್ಟಪಡಿಸುತ್ತದೆ.

## ಬೈಅತ್‌ನ ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹತ್ವ

ತನ್ನೊಂದಿಗೆ ಜನರು ಮಾಡಿದ ಬೈಅತ್(ಕರಾರು)ಅನ್ನು ಕೇವಲ ಒಂದು ಲೌಕಿಕ ಕ್ರಿಯೆ ಂದು ಭಾವಿಸದೆ ಅದನ್ನು ಒಂದು ಧಾರ್ಮಿಕ ಅಗತ್ಯವೆಂದೂ ಪರಿಗಣಿಸಬೇಕಾದುದು ಲೀಫನ ಇನ್ನೊಂದು ಮಹತ್ವಪೂರ್ಣ ಹಕ್ಕು. ಅಂದರೆ, ಪ್ರಸ್ತುತ ಬೈಅತ್ತನ್ನು ಜನರು ಃವ ಸಂಪ್ರೀತಿ ಮತ್ತು ಪರಲೋಕ ವಿಜಯದ ನೈಜ ಕಳಕಳಿಯೊಂದಿಗೆ ಪ್ರಾಮಾಣಿಕವಾಗಿ ಾಡಿರಬೇಕು. ಈ ಬಗ್ಗೆ ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು;

ಮೂರು (ಬಗೆಯ) ಜನರೊಂದಿಗೆ ಪುನರುತ್ಥಾನ ದಿನ ಅಲ್ಲಾಹನು ಮಾತನಾಡಲಿಕ್ಕಿಲ್ಲ... ತ್ತು ಖಲೀಫನೊಂದಿಗೆ, ಕೇವಲ ಲೌಕಿಕ ಲಾಭಕ್ಕಾಗಿ ಬೈಅತ್ ಮಾಡಿದವನು. (ಆ ೂವರಲ್ಲೊಬ್ಬನಾಗಿದ್ದಾನೆ) ಬುಖಾರಿ, ಭಾಗ- 2, ಕಿತಾಬುಲ್ ಅಹ್ಕಾಮ್

ಒಬ್ಬ ಮುಸಲ್ಮಾನನ ಮಟ್ಟಿಗೆ, ಕೇವಲ ಮುಸ್ಲಿಮರ ಖಲೀಫನೊಂದಿಗೆ ಬೈಅತ್ ಾಡುವುದಿಲ್ಲವೆಂದೋ ಅವನ ಆಜ್ಞಾನುಸರಣೆ ಮಾಡುವುದಿಲ್ಲವೆಂದೋ ನಿರಾಕರಿಸು ದು ಮಾತ್ರ ವಿನಾಶಕಾರಿಯಲ್ಲ, ಕೇವಲ ಲೌಕಿಕ ಲಾಭಗಳ ದೃಷ್ಟಿಯಿಂದ ಮಾಡಲಾಗುವ ಮಮಾತ್ರ ಬೈಅತ್ ಮತ್ತು ನಾಮಮಾತ್ರ ಅನುಸರಣೆ ಕೂಡಾ ಅಷ್ಟೇ ವಿನಾಶಕಾರಿ ಾಗಿದೆ. ಸಾಮಾನ್ಯವಾಗಿ ಜಗತ್ತಿನ ಬೇರೆಲ್ಲಾ ಆಡಳಿತಗಾರರಿಗೆ ಕೇವಲ ಈ ಬಗೆಯ ನಿಷ್ಠೆ ದರ್ಶಿಸಿದರೆ ಸಾಕಾಗುತ್ತದೆ. ಆದರೆ ಈ ವಿಷಯದಲ್ಲಿ ಇಸ್ಲಾಮಿನ ನಿಲುವು ಭಿನ್ನವಾಗಿದೆ.

ಇತರ ವ್ಯವಸ್ಥೆಗಳಲ್ಲಿ ಯಾವುದನ್ನು ಒಂದು ಆಡಳಿತ ಅಥವಾ ಸರಕಾರದ ಪರಮ ರಿಯೆಂದು ಪರಿಗಣಿಸಲಾಗುತ್ತದೋ, ಅದಕ್ಕೆ ಇಸ್ಲಾಮ್ ವಸ್ತುತಃ ಯಾವುದೇ ಮಹತ್ವ ಡುವುದಿಲ್ಲ, ಜನರು ಒಂದು ಧಾರ್ಮಿಕ ಅಗತ್ಯವೆಂಬ ಭಾವನೆಯೊಂದಿಗೆ ಮತ್ತು ಲ್ಲಾಹನ ಸಂಪ್ರೀತಿಯ ಗುರಿಯೊಂದಿಗೆ ಮಾಡುವ ಬೈಅತ್ ಮತ್ತು ಆಜ್ಞಾಪಾಲನೆ ಮಾತ್ರ ವರ ದೃಷ್ಟಿಯಲ್ಲಿ ಗೌರವಾರ್ಹವೆನಿಸುತ್ತದೆ.

ಖಿಲಾಫತ್ ವ್ಯವಸ್ಥೆ ಮತ್ತು ಖಲೀಫನಾಗುವ ವ್ಯಕ್ತಿಗೆ ಇಂಥ ಹಕ್ಕುಗಳನ್ನು ಕೊಟ್ಟಿರುವುದರ ರಣವನ್ನು ನಾವು ಈ ಮೊದಲೇ ಸಾಕಷ್ಟು ವಿವರವಾಗಿ ಸ್ಪಷ್ಟಪಡಿಸಿದ್ದೇವೆ. ಧಾರ್ಮಿಕ ತ್ತು ಆಧ್ಯಾತ್ಮಿಕ ಆಧಾರದಲ್ಲಿ ಬೈಅತ್ ಪಡೆಯುವ ಅಧಿಕಾರವನ್ನು ಖಿಲಾಫತ್ ವ್ಯವಸ್ಥೆ ಟ್ಟಿರುವುದೇಕೆಂದರೆ ಸ್ವತಃ ಈ ವ್ಯವಸ್ಥೆಯೇ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸ್ವರೂಪದ್ದಾಗಿದೆ. ಲಾಫತ್ ಒಂದು ಮಹತ್ವಪೂರ್ಣ ಧಾರ್ಮಿಕ ಅಗತ್ಯವಾಗಿದೆ, ಖಿಲಾಫತ್ ವ್ಯವಸ್ಥೆಯ ಪನೆ ಎಲ್ಲ ಮುಸ್ಲಿಮರ ಮೇಲೆ ಧಾರ್ಮಿಕವಾಗಿ ಕಡ್ಡಾಯ ಕರ್ತವ್ಯವಾಗಿದೆ ಎಂಬುದಕ್ಕೆ

ಸಾಕಷ್ಟು ಪುರಾವೆಗಳನ್ನು ನೀವು ಈಗಾಗಲೇ ಹಿಂದಿನ ಅಧ್ಯಾಯದಲ್ಲಿ ನೋಡಿರುವಿರಿ. ರೀತಿ ಮೂಲತಃ ಧಾರ್ಮಿಕ ಸ್ವರೂಪದಲ್ಲಿರುವ ಖಿಲಾಫತ್ತನ್ನು ಆ ರೂಪದಲ್ಲೇ ಅಂಗೀಕರಿಸಿ ಮಾತ್ರ ಅದು ಅಂಗೀಕಾರ ಎನಿಸುತ್ತದೆ. ಅನ್ಯಥಾ, ಸೀಮಿತ ಅಂಗೀಕಾರ ಒಂದು ವಂಚನೆ ಮಾ ಒಬ್ಬ ವ್ಯಕ್ತಿ ಒಂದು ವಸ್ತುವಿನ ಮೂಲಭೂತ, ನೈಜ ಸ್ವರೂಪವನ್ನು ಅಂಗೀಕರಿಸದೆಯೇ, ತಾ ಅದನ್ನು ಅಂಗೀಕರಿಸುತ್ತೇನೆಂದು ವಾದಿಸಿದರೆ ಅವನ ವಾದವನ್ನು ಯಾರೂ ಒಪ್ಪಲಾರರು.

ಈಗ ಪ್ರೇಮ ಮತ್ತು ಆಜ್ಞಾನುಸರಣೆ, ಖಿಲಾಫತ್‌ನ ಹಕ್ಕುಗಳಲ್ಲಿ ಸೇರಿದೆಂ ಎಂಬ ಪ್ರಶ್ನೆ. ಇದನ್ನು ಅರ್ಥ ಮಾಡಿಕೊಳ್ಳುವುದು ಬಹಳ ಸುಲಭ. ಒಂದು ಪದವಿಯ ಧರ್ಮಕ್ಕಾಗಿಯೇ ಸ್ಥಾಪಿಸಲಾಗಿದ್ದು, ಅದು ಅಡಿಯಿಂದ ಮುಡಿ ತನಕ ಶರೀಅ ಬುನಾದಿಯಲ್ಲೇ ನಿಂತಿರುವಾಗ ಒಬ್ಬ ಮುಸಲ್ಮಾನನು ಸಹಜವಾಗಿಯೇ ಆ ಪದವಿಯ ಗೌರವಾದರಗಳಿಂದ ನೋಡುತ್ತಾನೆ, ಆ ಪದವಿಯಲ್ಲಿರುವವರನ್ನು ಪ್ರೀತಿಸುತ್ತಾನೆ ಮ ಪ್ರಾಯೋಗಿಕವಾಗಿ ಅವರ ಆಜ್ಞಾಪಾಲನೆಯನ್ನು ಮಾಡುತ್ತಾನೆ. ಈ ನೀತಿಯು ಅ ಸತ್ಯವಿಶ್ವಾಸದ ಬೇಡಿಕೆಯಾಗಿದ್ದು, ಇದು ಅವನ ಧಾರ್ಮಿಕ ಭಾವನೆಗೂ ತೃಪ್ತಿಕೊಡುತ್ತ ವಿಶೇಷವಾಗಿ ಖಿಲಾಫತ್‌ನ ಅನುಸರಣೆ ಮತ್ತು ಖಲೀಫನ ಆಜ್ಞಾಪಾಲನೆ ಅವನ ಪಾ ಒಂದು ಶುದ್ಧ ಧಾರ್ಮಿಕ ಅಗತ್ಯವಾಗಿರುತ್ತದೆ. ಏಕೆಂದರೆ ಹಾಗಾಗದಿದ್ದರೆ ಖಿಲಾಫ ಅಸ್ತಿತ್ವವೇ ಅರ್ಥಹೀನವಾಗಿ ಬಿಡುತ್ತದೆ. ಜನರು ಅನುಸರಣೆಗೆ ಸಿದ್ಧರಿಲ್ಲದಿದ್ದಲ್ಲಿ, ಖಿಲಾಫ ಆಗಲೀ ಬೇರೊಂದು ಆಡಳಿತ ವ್ಯವಸ್ಥೆಯಾಗಲೀ, ಅದರ ಅಸ್ತಿತ್ವಕ್ಕೆ ಏನರ್ಥ? ಜನ ಸಾಮೂಹಿಕವಾಗಿ ಒಂದು ವ್ಯವಸ್ಥೆಯ ಆಜ್ಞಾಪಾಲನೆ ಮಾಡಲು ನಿರಾಕರಿಸಿ ಬಿ ಯಥಾರ್ಥದಲ್ಲಿ ಅದು ಆ ವ್ಯವಸ್ಥೆ ಕುಸಿದು ಬಿತ್ತು ಎಂಬುದರ ಸೂಚನೆಯಾಗಿದೆ. ಆದ್ದರಿ ಖಲೀಫರ ಅನುಸರಣೆಗೆ ಇಸ್ಲಾಮ್, ಇಷ್ಟು ಒತ್ತು ಕೊಟ್ಟಿದ್ದು, ಸಾಧ್ಯವಿದ್ದಷ್ಟು ಗರಿಷ್ಠ ಮಟ್ಟ ಅವರ ಆಜ್ಞಾಪಾಲನೆ ಮಾಡಬೇಕೆಂದು ಆದೇಶಿಸಿದೆ. ಅನುಸರಣೆಯ ಈ ಕರ್ತವ್ಯ ಎ ಕಠಿಣ ಸ್ವರೂಪದ್ದೆಂದರೆ 'ಜನತೆಯ ಬೆನ್ನು ಮುರಿಯುತ್ತಿದ್ದರೂ, ಜೀವ ಸೊತ್ತುಗಳ ಭ ಇಲ್ಲವಾದಾಗಲೂ...' ಈ ಕರ್ತವ್ಯದಿಂದ ವಿಮುಖರಾಗುವಂತಿಲ್ಲ. ಇಸ್ಲಾಮೀ ಸಂವಿಧಾನ ಇಂತಹ ಒಂದು ಪರಿಚ್ಛೇದವನ್ನು ಸೇರಿಸಿರುವುದು ಏಕೆಂದರೆ, ಮುಸ್ಲಿಮರ ಖಲೀ ಆಜ್ಞಾನುಸರಣೆ ವಾಸ್ತವದಲ್ಲಿ ಅವನ ವೈಯಕ್ತಿಕ ಅನುಸರಣೆಯ ವಿಷಯವಾಗಿರದೆ, ಅ ದೇವ ಮತ್ತು ದೇವ ಸಂದೇಶವಾಹಕರ ಆಜ್ಞಾಪಾಲನೆಯ ಹಾಗೂ ಧರ್ಮದ ಸಾಮಾ ವ್ಯವಸ್ಥೆಗೆ ಸಂಬಂಧಿಸಿದ ವಿಷಯವಾಗಿದೆ. ಆದ್ದರಿಂದ ವೈಯಕ್ತಿಕವಾಗಿ ಒಬ್ಬ ಖಲೀಫ ಪ್ರಶ್ನಾ ಚಾರಿತ್ರ್ಯದವನಾಗಿದ್ದರೂ, ಅವನು ಖಿಲಾಫತ್ ಹುದ್ದೆಯಲ್ಲಿರುವ ತನಕ ಧರ್ಮದ ಸಾಮಾ ವ್ಯವಸ್ಥೆ ಮತ್ತು ಧರ್ಮದ ಒಂದು ದೊಡ್ಡ ಭಾಗದ ಅನುಷ್ಠಾನವು ಅವನ ನೇತೃತ್ವದಲ್ಲಿ ಆಡಳಿತವನ್ನು ಅವಲಂಬಿಸಿರುವುದರಿಂದ ಅವನನ್ನು ಅನುಸರಿಸಲೇಬೇಕಾಗು ಮುಸಲ್ಮಾನರ ಬದುಕು ಸಾಮಾಜಿಕ ಕ್ಷೇತ್ರದಲ್ಲೂ ಇಸ್ಲಾಮಿನ ಪ್ರಕಾರ ನಡೆಯಬೇಕಿದ್ದರೆ ಇ

ವಾರ್ಯ.

ಒಂದು ರೀತಿಯಲ್ಲಿ ಖಿಲಾಫತ್ ಪದವಿಯಲ್ಲಿರುವ ವ್ಯಕ್ತಿ ಭೂಮಿಯಲ್ಲಿ ಅಲ್ಲಾಹನ ಮತ್ವದ ಪ್ರತಿನಿಧಿ ಮತ್ತು ಅಲ್ಲಾಹನ ಪರಮೋಚ್ಚ ಅಧಿಕಾರದ ಸಂಕೇತವಾಗಿರುತ್ತಾನೆ. ಬ್ಬ ಮುಸಲ್ಮಾನನು ಜಗತ್ತಿನಲ್ಲಿ ಬೇರೇನನ್ನು ಸಹಿಸಿದರೂ, ಈ ಪ್ರತಿನಿಧಿ ಸ್ಥಾನಕ್ಕೆ ಚ್ಯುತಿ ುವುದನ್ನಾಗಲೀ, ಈ 'ಸಂಕೇತ' ಅಳಿದು ಹೋಗುವುದನ್ನಾಗಲೀ ಖಂಡಿತ ಸಹಿಸಲಾರ. ಸ್ಲಾಮಿನ ಮನೆಯಲ್ಲಿ ಅಭದ್ರ ಸ್ಥಿತಿ ಉಂಟಾಗುವುದನ್ನು ಅವನು ಸಹಿಸಬಹುದಾದರೂ ಮನೆ ಕೆಡವಲ್ಪಟ್ಟು ತಾನು ಧರ್ಮದ ಸಾಮಾಜಿಕ ವ್ಯವಸ್ಥೆಯಿಂದ ವಂಚಿಸಲ್ಪಡುವುದನ್ನು ಡಿತ ಸಹಿಸಲಾರ. ಯಾರಾದರೂ ಈ ಅವನತಿಯನ್ನು ಸಹಿಸಲು ಸಿದ್ಧರಾಗಿದ್ದರೆ, ಅವನ ರ್ಮ ವಿಶ್ವಾಸ ನಿಸ್ತೇಜವಾಗಿ ಬಿಟ್ಟಿದೆ ಎಂದೇ ಅರ್ಥ. ಏಕೆಂದರೆ ಈ ಮೂಲಕ ಅವನು ತನ್ನ ಕ ಸುಖಕ್ಕಾಗಿ ಧಾರ್ಮಿಕ ವ್ಯವಸ್ಥೆಯ ಅಸ್ತಿತ್ವವನ್ನು ಬಲಿಕೊಡಲು ಒಪ್ಪಿಕೊಂಡಂತಾಗುತ್ತದೆ. ಸ್ಲಾಮ್ ಧರ್ಮದ ಮೇಲೆ ವಿಶ್ವಾಸವಾಗಲೀ, ಪ್ರೀತಿಯಾಗಲೀ ಇದ್ದವರು ಖಂಡಿತ ಹೀಗೆ ಡಲಾರರು.

## ುಸರಣೆಯ ಇತಿ ಮಿತಿಗಳು

ಯಾವ ಉದ್ದೇಶಕ್ಕಾಗಿ ಈ ನಾಯಕನ ಅನುಸರಣೆಗೆ ಇಷ್ಟು ಒತ್ತು ಕೊಡಲಾಗಿದೆಯೋ ೇ ಉದ್ದೇಶಕ್ಕಾಗಿ ಈ ಅನುಸರಣೆಗೆ ಕೆಲವು ಮಿತಿ-ಮೇರೆಗಳನ್ನು ನಿಶ್ಚಯಿಸಲಾಗಿದೆ. ಯಕರ ಅಥವಾ ಆಡಳಿತಗಾರರ ಅನುಸರಣೆಗೆ ಅಸಾಮಾನ್ಯ ಮಹತ್ವ ಇರುವುದು ನಿಜ. ರೆ ಈ ಕರ್ತವ್ಯ ನಿಶ್ಶರ್ತವಲ್ಲ. ಕೆಲವು ನಿಗದಿತ ಮಿತಿಗಳನ್ನು ಮೀರಿದರೆ, ನಾಯಕನ ಯನ್ನು ಅನುಸರಿಸುವ ಬದಲು ಉಲ್ಲಂಘಿಸುವುದೇ ಕರ್ತವ್ಯವಾಗಿ ಬಿಡಬಹುದು. ದರೆ, ಒಬ್ಬ ಮುಸಲ್ಮಾನನು ಎಲ್ಲ ಕಷ್ಟ-ನಷ್ಟಗಳನ್ನು ಸಹಿಸಿಯೂ ತನ್ನ ನಾಯಕನನ್ನು ುಸರಿಸುವುದು-ತಾನು ಸಾಮಾಜಿಕ ಬದುಕಿನಲ್ಲಿ ಓರ್ವ ಪೂರ್ಣ ಮುಸಲ್ಮಾನನಾಗಿ ುಕಬೇಕಾದರೆ ತನಗೆ ಅನಿವಾರ್ಯವಾಗಿ ಬೇಕಾಗಿರುವ- ಇಸ್ಲಾಮೀ ವ್ಯವಸ್ಥೆಯ ಭದ್ರತೆಯ ೃಷ್ಟಿಯಿಂದ ಮಾತ್ರ. ಹೀಗಿರುವಾಗ, ಆಡಳಿತಗಾರರ ಯಾವುದಾದರೂ ಆದೇಶವು ಲತಃ ಇಸ್ಲಾಮೀ ವ್ಯವಸ್ಥೆಯ ಉದ್ದೇಶಕ್ಕೆ ವಿರುದ್ಧವಾಗಿದ್ದರೆ ಅಂಥ ಆದೇಶವು ತಿರಸ್ಕಾರ ೀಗ್ಯವಾಗುತ್ತದೆ.

ಇದೇ ಕಾರಣದಿಂದಾಗಿ, ಶರೀಅತ್‌ನಲ್ಲಿ ನಾಯಕರ ಆದೇಶ ಪಾಲನೆಗೆ ಕೊಟ್ಟಷ್ಟೇ ವಿಶೇಷ ಕೊಟ್ಟು, ಈ ಆಜ್ಞಾಪಾಲನೆ ಕಟ್ಟುನಿಟ್ಟಾಗಿ ಶರ್ತಬದ್ಧವೇ ಹೊರತು ಎಂದೂ ಅದು ನಿಶ್ಶರ್ತ ಪದ್ದಲ್ಲ ಎಂಬ ಅಂಶವನ್ನು ಹೇಳಿದೆ. ಶರೀಅತ್‌ನ ಪ್ರಕಾರ ನಾಯಕನ ಅನುಸರಣೆಗೂ ು ಮಿತಿ ಇದೆ. ಈ 'ಮಿತಿ' ಮತ್ತು ಶರತ್ತು ಏನೆಂಬುದನ್ನು ನಕಾರಾತ್ಮಕವಾಗಿ 'ಮಅ್ತ್' (ಆಜ್ಞೋಲ್ಲಂಘನೆ) ಹಾಗೂ ಸಕಾರಾತ್ಮಕವಾಗಿ 'ಮಅ್‌ರೂಫ್' (ಒಳಿತು) ಎಂಬ

ಶಬ್ದಗಳಲ್ಲಿ ಸೂಚಿಸಲಾಗಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: ''ಅಲ್ಲಾಹನ 'ಮ
ಸಿಯತ್'(ಆಜ್ಞೋಲ್ಲಂಘನೆ)ನ ವಿಷಯದಲ್ಲಿ ಯಾರದೇ ಅನುಸರಣೆ ಸಲ್ಲದು. ಅನುಸ
'ಮಅ್‌ರೂಫ್'(ಒಳಿತು)ನಲ್ಲಿ ಮಾತ್ರ.'' (ಮುಸ್ಲಿಮ್)

ಅಂದರೆ ಆಜ್ಞೆಯು ಒಳಿತಿನದಾಗಿದ್ದು ಧರ್ಮಕ್ಕೆ ವಿರುದ್ಧವಾಗಿರಬಾರದು ಎಂಬು
ಅನುಸರಣೆಗೆ ಇರುವ ಪೂರ್ವ ಶರತ್ತು. ಇದರ ಪ್ರಕಾರ, ಧರ್ಮಕ್ಕೆ ವಿರುದ್ಧವಾದ ಆಜ್ಞೆಗಳ
ತಿರಸ್ಕರಿಸಬಹುದು. ಮಾತ್ರವಲ್ಲ, ಅಂಥ ಸಂದರ್ಭಗಳಲ್ಲಿ ಆಜ್ಞೋಲ್ಲಂಘನೆ ಅನಿವಾರ್ಯವ
ಬಿಡುತ್ತದೆ. ಒಳಿತಿನ ಆದೇಶವನ್ನು ಪಾಲಿಸುವುದು ಎಷ್ಟು ಅಗತ್ಯವೋ, ಕೆಡುಕಿನ ಆದೇಶ
ಉಲ್ಲಂಘನೆಯೂ ಅಷ್ಟೇ ಅಗತ್ಯ. ಈ ಕುರಿತು ಇಮಾಮ್ ನವವಿ(ರ) ಅವರು ಹಿ
ಬರೆದಿರುವರು:

ಪಾಪವಲ್ಲದ ಕಾರ್ಯಗಳಲ್ಲಿ ಆಡಳಿತಗಾರರ ಆಜ್ಞೆಗಳನ್ನು ಪಾಲಿಸಬೇಕಾದು
ಕಡ್ಡಾಯ (ವಾಜಿಬ್) ಮತ್ತು ಪಾಪದ ವಿಷಯಗಳಲ್ಲಿ ಹಾಗೆ ಮಾಡುವುದು ನಿಷಿದ್ಧ(ಹರಾವ
ಎಂಬ ವಿಷಯದಲ್ಲಿ ಎಲ್ಲ ವಿದ್ವಾಂಸರ ಒಮ್ಮತಾಭಿಪ್ರಾಯ (ಇಜ್ಮಾಅ್) ಇದೆ.

(ಶರಹ್ ಮುಸ್ಲಿಮ್, ಭಾಗ-2, ಕಿತಾಬುಲ್ ಇಮಾ

ಪಾಪ ಕಾರ್ಯಗಳ ವಿಷಯದಲ್ಲಿ ಯಾವುದೇ ನಾಯಕನ ಅನುಸರಣೆ ಯಾವ ರಿ
ಯಾವ ಮಟ್ಟಿಗೆ ನಿಷಿದ್ಧ ಎಂಬುದನ್ನು ಈ ಕೆಳಗಿನ ಒಂದು ಘಟನೆಯಿಂದ ಊಹಿಸಬಹುದು

ಪ್ರವಾದಿ ಮುಹಮ್ಮದ್(ಸ) ಒಮ್ಮೆ ಒಬ್ಬ ಅನ್ಸಾರಿ ವ್ಯಕ್ತಿಯ ನೇತೃತ್ವದಲ್ಲಿ ಒಂದು ಸೇ
ತುಕಡಿಯನ್ನು ಜಿಹಾದ್‌ಗೆ ರವಾನಿಸಿದರು. ರವಾನಿಸುವಾಗ ಎಂದಿನಂತೆ ಯೋಧ
ನಾಯಕನ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಆದೇಶಿಸಿದರು. ದಾರಿ ಮ
ನಾಯಕನಿಗೆ ತನ್ನ ಅನುಯಾಯಿಗಳ ಬಗ್ಗೆ ಭಾರೀ ಅಸಮಾಧಾನ ಉಂಟಾಯಿತು. ಅವ
ಕಟ್ಟಿಗೆ ಸಂಗ್ರಹಿಸಿ ತರುವಂತೆ ಯೋಧರಿಗೆ ಹೇಳಿದರು. ಯೋಧರೆಲ್ಲಾ ಕಟ್ಟಿಗೆಗಳನ್ನು ತಂ
ರಾಶಿ ಹಾಕಿದಾಗ ಆ ರಾಶಿಗೆ ಬೆಂಕಿ ಕೊಡಬೇಕೆಂದು ಆದೇಶವಿತ್ತರು. ಅದರಂತೆ ಯೋಧ
ರಾಶಿಗೆ ಬೆಂಕಿಕೊಟ್ಟರು. ಆಗ ಆ ನಾಯಕ ಯೋಧರನ್ನುದ್ದೇಶಿಸಿ ನನ್ನ ಆಜ್ಞೆಗಳನ್ನು ಆಲಿಸಬೇ
ಮತ್ತು ಪಾಲಿಸಬೇಕೆಂದು ಪ್ರವಾದಿವರ್ಯರು(ಸ) ನಿಮಗೆ ಹೇಳಿಲ್ಲವೇ? ಎಂದು ಪ್ರಶ್ನಿಸಿದ
ಹೌದೆಂದು ಯೋಧರು ಉತ್ತರಿಸಿದರು. 'ಹಾಗಾದರೆ ಈಗ ನೀವೆಲ್ಲ ಈ ಬೆಂಕಿಗೆ ಜಿಗಿಯಿ
ಎಂದು ನಾಯಕ ಆದೇಶ ಹೊರಡಿಸಿದರು. ಯೋಧರು ವಿಸ್ಮಿತರಾದರು. ಕೆಲವರು ಮ
ಬೆಂಕಿಗೆ ಜಿಗಿಯಲಿಕ್ಕೂ ಸಿದ್ಧರಾದರು. ಆದರೆ ಉಳಿದವರು ಒಪ್ಪಲಿಲ್ಲ. ಅವರು ನ
ಪ್ರವಾದಿವರ್ಯರ(ಸ) ಜೊತೆ ಸೇರಿದ್ದೇ ಈ (ನರಕದ) ಅಗ್ನಿಯಿಂದ ರಕ್ಷಣೆ ಪಡೆಯಲಿ
(ಈಗ ಸ್ವತಃ ಬೆಂಕಿಗೆ ಬೀಳಬೇಕೆಂದರೆ ಏನರ್ಥ?) ಎಂದು ವಾದಿಸತೊಡಗಿದರು. ಅಷ್
ಬೆಂಕಿಯೂ ನಂದಿ ಹೋಯಿತು. ಈ ಮಧ್ಯೆ ನಾಯಕನ ಕೋಪವೂ ತಣಿದಿತ್ತು. ಈ ತ
ತನ್ನ ಕಾರ್ಯಾಚರಣೆ ಮುಗಿಸಿ ಪ್ರವಾದಿವರ್ಯರ(ಸ) ಸನ್ನಿಧಾನಕ್ಕೆ ಮರಳಿದಾಗ ಅವರಿಗೆ

ತ್ತಾಂತವನ್ನೆಲ್ಲಾ ತಿಳಿಸಲಾಯಿತು. ಅವರು ಇದನ್ನೆಲ್ಲಾ ಕೇಳಿದ ಬಳಿಕ, ಬೆಂಕಿಗೆ ಜಿಗಿಯಲು ದ್ಧರಾಗಿದ್ದ ಆ ಕೆಲವರನ್ನು ಉದ್ದೇಶಿಸಿ ಒಂದು ವೇಳೆ ನೀವು ಆ ಸಂದರ್ಭದಲ್ಲಿ ಬೆಂಕಿಗೆ ಗಿದಿದ್ದರೆ ಅಂತ್ಯ ದಿನದ ವರೆಗೂ ಬೆಂಕಿಯೇ ನಿಮ್ಮ ನೆಲೆಯಾಗಿರುತ್ತಿತ್ತು ಎಂದು ಹೇಳಿದರು.

(ಮುಸ್ಲಿಮ್, ಭಾಗ– 2, ಕಿತಾಬುಲ್ ಇಮಾರಃ)

ಈ ಘಟನೆ ಮತ್ತು ಪ್ರಸ್ತುತ ಪ್ರವಾದಿ ವಚನದಿಂದ, ಅಲ್ಲಾಹನ ಆದೇಶಕ್ಕೆ ವಿರುದ್ಧವಾದ ತ್ಯವು ಬೇರಾವುದೇ ಸಂದರ್ಭದಲ್ಲಿ ನಿಷಿದ್ಧವಾಗಿರುವಂತೆಯೇ, ಒಬ್ಬ ನಾಯಕನ ಆಜ್ಞೆಯ ೇರೆಗೆ ಮಾಡಿದಾಗಲೂ ಅಂಥ ಕೃತ್ಯವು ನಿಷಿದ್ಧವೇ ಆಗಿದೆ ಎಂಬುದು ಸ್ಪಷ್ಟವಾಗುತ್ತದೆ. ಾಯಕನ ಅನುಸರಣೆಗೆ ಎಷ್ಟೇ ಮಹತ್ವವಿದ್ದರೂ ಅದು ಯಾವುದೇ ನಿಷಿದ್ಧ ಕೃತ್ಯವನ್ನು ರ್ಮಬದ್ಧಗೊಳಿಸುವುದಿಲ್ಲ.

'ಮಅ್‌ರೂಫ್'ನಲ್ಲಿ ನಾಯಕರ ಅನುಸರಣೆ ಅಗತ್ಯ ಎನ್ನುವಾಗ 'ಮಅ್‌ರೂಫ್'ನ ್ಯಾಪ್ತಿ ಎಷ್ಟು ಎಂಬ ಜಿಜ್ಞಾಸೆ ಉಂಟಾಗುವುದು ಸಹಜ. ನಿಜವಾಗಿ ಅದರ ಸ್ಪಷ್ಟೀಕರಣ 'ಮಅ್ ಯತ್' ಎಂಬ ಶಬ್ದದಲ್ಲೇ ಅಡಗಿದೆ. ಅನುಸರಣೆಯ ಮಿತಿಗಳಿಗೆ ಸಂಬಂಧಿಸಿ ಈಗಾಗಲೇ ಪ್ರಸ್ತಾಪಿಸಲಾದ ಹಾಗೂ ಇತರ ಹದೀಸ್‌ಗಳಲ್ಲಿ ಅದಕ್ಕಾಗಿ ಈ ಶಬ್ದವನ್ನು ಬಳಸಲಾಗಿದೆ. ಮಅ್‌ಸಿಯತ್‌ನಲ್ಲಿ ಯಾರದೇ ಅನುಸರಣೆ ಇಲ್ಲ, ಅನುಸರಣೆ ಮಅ್‌ರೂಫ್‌ನಲ್ಲಿ ಮಾತ್ರ' ಎಂಬ ವಚನದಿಂದ, ಮಅ್‌ಸಿಯತ್ ಅಥವಾ ಅಲ್ಲಾಹನ ಧರ್ಮಕ್ಕೆ ವಿರುದ್ಧವಾದ ಕಾರ್ಯಗಳ ಹೊರತು ಉಳಿದೆಲ್ಲವೂ ಮಅ್‌ರೂಫ್‌ನ ಸಾಲಿಗೆ ಸೇರುತ್ತವೆ ಮತ್ತು ಆ ಎಲ್ಲ ಕಾರ್ಯಗಳಲ್ಲಿ ಅನುಸರಣೆ ಕಡ್ಡಾಯವಾಗಿದೆ ಎಂಬ ಅಂಶ ವ್ಯಕ್ತವಾಗುತ್ತದೆ. ಒಂದಕ್ಕಿಂತ ಹೆಚ್ಚು ಅಭಿಪ್ರಾಯಗಳಿರಬಹುದಾದ ಯೋಜನೆ, ಧೋರಣೆ ಅಥವಾ ತಂತ್ರದಂಥ ವಿಷಯಗಳು ಕೂಡಾ ಮಅ್‌ರೂಫ್‌ನ ವ್ಯಾಪ್ತಿಗೆ ಬರುತ್ತವೆ. ಅಲ್ಲವೆ ಇಂಥ ವಿಷಯಗಳಲ್ಲಿ ನಾಯಕನ ತೀರ್ಮಾನದ ಬಗ್ಗೆ ಒಬ್ಬನಿಗೆ ಎಷ್ಟೇ ತೀವ್ರ ಭಿನ್ನಾಭಿಪ್ರಾಯವಿದ್ದರೂ, ತನ್ನ ಅಭಿಪ್ರಾಯ ಸರಿಯೆಂಬ ಬಗ್ಗೆ ಎಷ್ಟೇ ಸಮಾಧಾನವಿದ್ದರೂ ಅವನು ನಾಯಕನ ತೀರ್ಮಾನವನ್ನು ಅಂಗೀಕರಿಸಲೇಬೇಕು. ಅದು ಅವನ ಧಾರ್ಮಿಕ ಕರ್ತವ್ಯ. ಏಕೆಂದರೆ ನಾಯಕನ ಇಂಥ ಪ್ರತಿಯೊಂದು ಆದೇಶವೂ ಮಅ್‌ರೂಫ್ ಎಂದು ಪರಿಗಣಿಸಲ್ಪಡುತ್ತದಲ್ಲದೆ ಮಅ್‌ರೂಫ್‌ನ ವಿಷಯದಲ್ಲಿ ನಾಯಕನ ಆಜ್ಞಾಪಾಲನೆ ಮುಸಲ್ಮಾನನ ಕರ್ತವ್ಯವಾಗಿದೆ. ಒಬ್ಬ ವ್ಯಕ್ತಿಗೆ ತನ್ನ ಭಿನ್ನಾಭಿಪ್ರಾಯದ ಬಗ್ಗೆ ಅದು ಅತ್ಯಂತ ಸಮರ್ಪಕ ಹಾಗೂ ಸಾಧಾರ ಅಭಿಪ್ರಾಯ ಎಂಬ ತೃಪ್ತಿ ಇದ್ದರೂ ಮತ್ತು ನಿಜವಾಗಿಯೂ ಅದುವೇ ಸರಿಯಾದ ಅಭಿಪ್ರಾಯವಾಗಿದ್ದರೂ ಆ ಕಾರಣಕ್ಕಾಗಿ ನಾಯಕನ ತೀರ್ಮಾನವನ್ನು ಅಪ್ರಬುದ್ಧವೆಂದೋ ದೂರದೃಷ್ಟಿ ಇಲ್ಲದ ತೀರ್ಮಾನವೆಂದೋ ಆರೋಪಿಸಿ ಅದನ್ನು ಅನುಸರಿಸಲು ನಿರಾಕರಿಸುವ ಅಧಿಕಾರ ಇರುವುದಿಲ್ಲ. ಅವನ ವೈಯಕ್ತಿಕ ಅಭಿರುಚಿ ಮತ್ತು ಒಲವುಗಳಾಗಲೀ, ತನ್ನ ಅಭಿಪ್ರಾಯವೇ ಸರಿಯೆಂಬ ಸಮಾಧಾನವಾಗಲೀ ಅಥವಾ ಲೋಕದ ಇನ್ನಾವುದೇ ವಸ್ತುವಾಗಲೀ ಅವನಿಗೆ ನಾಯಕನ ತೀರ್ಮಾನವನ್ನು ತಿರಸ್ಕರಿಸುವ

ಅಧಿಕಾರ ಕೊಡುವುದಿಲ್ಲ, ಅವನಿಗೆ ನಿರಾಕರಣೆಯ ಅಧಿಕಾರ ಪ್ರಾಪ್ತವಾಗುವುದು, ನಾಯಕ
ತೀರ್ಮಾನ ಅಥವಾ ಆದೇಶವು ಮಅ್‌ರೂಫ್‌ಗೆ ವಿರುದ್ಧವಾಗಿದ್ದು ಮಅ್‌ಸಿಯತ್‌ನ ಸಾಲಿ
ಸೇರಿದಾಗ ಮಾತ್ರ. ಅಂಥ ಸಂದರ್ಭದಲ್ಲಿ ಅವನಿಗೆ ನಿರಾಕರಣೆಯ ಅಧಿಕಾರವಿರುವುದ
ಮಾತ್ರವಲ್ಲ ಆ ತೀರ್ಮಾನವನ್ನು ತಿರಸ್ಕರಿಸಬೇಕಾದುದು ಅವನ ಕರ್ತವ್ಯವಾಗಿ ಬಿಡುತ್ತದೆ.

## ಖಲೀಫರ ಉಚ್ಚಾಟನೆ

ಖಲೀಫ ಮತ್ತು ನಾಯಕರ ಅನುಸರಣೆಯ ಬಗ್ಗೆ ಶರೀಅತ್‌ನ ವಿವಿಧ ಆದೇಶಗಳನ
ಅಭ್ಯಸಿಸುವಾಗ ಸ್ವಾಭಾವಿಕವಾಗಿ ಮನಸ್ಸಿನಲ್ಲಿ ಕೆಲವು ಸಂದೇಹಗಳು ಮೂಡುತ್ತವೆ. ಉದಾ
ನಾಯಕರಿಂದ ಸಂಭವಿಸಬಹುದಾದ ದುಷ್ಟತನ ಮತ್ತು ದೌರ್ಜನ್ಯಗಳ ಬಗ್ಗೆಯೂ ನಾ
ಇಲ್ಲಿ ಈಗಾಗಲೇ ಹೇಳಲಾದಷ್ಟನ್ನು ಮಾತ್ರ ಮಾಡಲು ಸಾಧ್ಯವೇ ಅಥವಾ ಈ ಕುರಿತು ಹೆಚ್ಚಿ
ಆದೇಶಗಳೇನಾದರೂ ಇವೆಯೇ? ಆಡಳಿತಗಾರರು ಅನ್ಯಾಯಕ್ಕಿಳಿದರೆ ಅದನ್ನು ತಾಳ್ಮೆಯಿಂ
ಸಹಿಸಿಕೊಳ್ಳಬೇಕು ಮತ್ತು ಅವರೊಂದು ವೇಳೆ ಧರ್ಮಕ್ಕೆ ವಿರುದ್ಧವಾದ ಕಾರ್ಯಗಳನ
ಆದೇಶಿಸಿದರೆ ಕೂಡಾ ಕೇವಲ ಆ ಆದೇಶಗಳನ್ನು ಮಾತ್ರ ಪಾಲಿಸದೆ ಸುಮ್ಮನಿದ್ದು ಉಳಿದೇ
ವ್ಯವಹಾರಗಳಲ್ಲಿ ಅವರ ಅನುಸರಣೆ ಮಾಡುತ್ತಿರಬೇಕೇ ಅಥವಾ ಶರೀಅತ್ ಈ ಕುರಿತು ಇನ್ನೂ
ಮಾರ್ಗದರ್ಶನ ಮಾಡುತ್ತದೆಯೇ? ದುಷ್ಟತೆ ಮತ್ತು ದೌರ್ಜನ್ಯದ ಯಾವುದಾದರೂ ನಿರ್ದಿ
ಹಂತವನ್ನು ಪ್ರವೇಶಿಸಿದ ಬಳಿಕ ಒಬ್ಬ ವ್ಯಕ್ತಿಗೆ ಖಿಲಾಫತ್ ಅಥವಾ ಬೇರಾವುದೇ ನೇತೃತ್ವದ ಸ್ಥಾನದ
ಮುಂದುವರಿಯುವ ಅಧಿಕಾರವಿರುತ್ತದೆಯೇ ಅಥವಾ ಅವನು ಆ ಹಕ್ಕನ್ನು ಕಳೆದುಕೊಳ್ಳುವನೇ?
ವಿಚಾರ ಅಥವಾ ಆಚಾರದ ಅವನತಿಯ ಯಾವುದಾದರೂ ಹಂತದಲ್ಲಿ ಒಬ್ಬ ವ್ಯಕ್ತಿಯನ
ಖಿಲಾಫತ್‌ನ ಸ್ಥಾನದಿಂದ ಕಿತ್ತೊಗೆಯುವ ಅವಕಾಶ ಇದೆಯೇ?... ಇತ್ಯಾದಿ.

ಶರೀಅತ್‌ನಲ್ಲಿ ಈ ಪ್ರಶ್ನೆಗಳ ಉತ್ತರವೂ ಇದೆ. ಆ ಉತ್ತರಗಳನ್ನು ಪಡೆಯಲು ನಾವ
ಸ್ವಲ್ಪ ಆಳಕ್ಕೆ ಇಳಿಯಬೇಕಾಗುತ್ತದೆ. ಮೊದಲನೆಯದಾಗಿ ಖಲೀಫರ ಆಚಾರ-ವಿಚಾರಗಳಲ್ಲಿ
ಯಾವ ಯಾವ ಸ್ವರೂಪದ ಅವನತಿಗಳು ಉಂಟಾಗುವ ಸಾಧ್ಯತೆ ಇದೆ ಎಂಬುದನ್ನು ನಾವ
ಅವಲೋಕಿಸಬೇಕಾಗುತ್ತದೆ. ಈ ಅವಲೋಕನದ ಬಳಿಕ ಮಾತ್ರ ಎಂಥ ಸಂದರ್ಭದಲ್ಲಿ
ಒಬ್ಬ ಖಲೀಫ, ಖಿಲಾಫತ್‌ನ ಹಕ್ಕನ್ನು ಕಳೆದುಕೊಳ್ಳುತ್ತಾನೆಂದು ಸ್ಪಷ್ಟವಾಗಿ ತೀರ್ಮಾನಿಸಲು
ಸಾಧ್ಯವಾದೀತು. ಈ ನಿಟ್ಟಿನಲ್ಲಿ ಸೂಕ್ಷ್ಮವಾಗಿ ಗಮನಿಸಿದರೆ, ಆಚಾರ-ವಿಚಾರಗಳ ಅವನತಿಯು
ಈ ಕೆಳಗಿನ ಆರು ಸ್ವರೂಪಗಳನ್ನು ತಾಳುವ ಸಾಧ್ಯತೆ ಗೋಚರಿಸುತ್ತದೆ.

1. ಅಧಿಕಾರಸ್ಥನು ಪ್ರಜೆಗಳ ಹಕ್ಕುಗಳನ್ನು ಅವರಿಗೆ ಕೊಡದೆ ಅವರ ಮೇಲೆ ದೌರ್ಜನ್ಯ
ನಡೆಸುವುದು.

2. ಜನರಿಗೆ ದುಷ್ಟ ಕಾರ್ಯಗಳನ್ನು ಆದೇಶಿಸಲಾರಂಭಿಸುವುದು.

3. ಅವನು ಸ್ವತಃ ಚಾರಿತ್ರ್ಯಹೀನನಾಗಿ, ಬಹಿರಂಗವಾಗಿ ಶರೀಅತ್‌ನ ಉಲ್ಲಂಘನ

ಮಾಡುವುದು ಮತ್ತು ಭ್ರಷ್ಟತೆ ಹಾಗೂ ದುಷ್ಕೃತ್ಯಗಳಲ್ಲಿ ನಿರತನಾಗುವುದು.

4. ಅವನು ಧರ್ಮದ ಮೂಲಭೂತ ಕರ್ತವ್ಯಗಳಿಂದ ವಿಮುಖನಾಗಿ ಬಿಡುವುದು.

5. ಇಸ್ಲಾಮಿನಿಂದ ಅವನ ಅಂತರ ಹೆಚ್ಚುತ್ತಾ ಹೋಗಿ ಕೊನೆಗೆ ಅವನು ದೇಶದ ಇಸ್ಲಾಮೀ ಸಂವಿಧಾನ ಮತ್ತು ಕಾನೂನುಗಳನ್ನೇ ಬದಲಿಸಲಾರಂಭಿಸುವುದು ಮತ್ತು ಇಸ್ಲಾಮೇತರ ನಿಯಮಗಳನ್ನು ಜಾರಿಗೊಳಿಸ ತೊಡಗುವುದು.

6. ಅವನು ಇಸ್ಲಾಮಿನ ಮೂಲಭೂತ ನಂಬಿಕೆಗಳನ್ನು ತೊರೆದು ಸತ್ಯ ಧಿಕ್ಕಾರ(ಕುಫ್ರ್)ದ ದಾರಿಯನ್ನು ಅನುಸರಿಸುವುದು.

ಇಲ್ಲಿ ಪ್ರಸ್ತಾಪಿಸಲಾದ ಮೊದಲ ಎರಡು ಕೆಡುಕುಗಳ ಬಗ್ಗೆ ಶರೀಅತ್‌ನ ನಿಲುವು ಮತ್ತು ಆ ಕುರಿತು ಅದರ ಆದೇಶಗಳನ್ನು ಈಗಾಗಲೇ ವಿವರವಾಗಿ ತಿಳಿಸಿದೆವು. ಸಂಕ್ಷಿಪ್ತವಾಗಿ ಈ ಕೆಡುಕುಗಳು ತಲೆದೋರಿದ ಬಳಿಕವೂ ಅವನ ನಾಯಕತ್ವವನ್ನು ಪ್ರಶ್ನಿಸುವಂತಿಲ್ಲ. 'ಮಅ್‌ರೂಫ್'ನಲ್ಲಿ ಅವನ ಅನುಸರಣೆ ಕಡ್ಡಾಯವಾಗಿರುವುದು.

ಮೂರನೆಯ ಸ್ವರೂಪದ ಕೆಡುಕಿನ ಬಗ್ಗೆಯೂ ಇದೇ ಆದೇಶ ಕೊಡಲಾಗಿದೆ. ಆಡಳಿತಗಾರನ ಚಾರಿತ್ರ್ಯಹೀನ ಚಟುವಟಿಕೆಗಳ ಬಗ್ಗೆ ಮುಸ್ಲಿಮ್ ಪ್ರಜೆಯಲ್ಲಿ ಜಿಗುಪ್ಸೆ ಉಂಟಾಗುವುದು ಸಹಜ. ಅಂತಹ ಜಿಗುಪ್ಸೆ ಇರಲೂಬೇಕು. ಆದರೆ ಕೇವಲ ಆ ಕಾರಣಕ್ಕಾಗಿ ನಾಯಕತ್ವವನ್ನು ನಿರಾಕರಿಸಿ ಬಿಡುವಂತಿಲ್ಲ. ಹಾಗೆಯೇ 'ಮಅ್‌ರೂಫ್'ನಲ್ಲಿ ಅವನ ಆದೇಶಗಳನ್ನು ಪಾಲಿಸದೆ ಬಿಡಲಿಕ್ಕೂ ಅವಕಾಶವಿಲ್ಲ. ಈ ಕುರಿತು ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು:

...ಕೇಳಿರಿ! ಒಂದು ಜನತೆಯ ಮೇಲೆ ಒಬ್ಬನು ನಾಯಕನಾಗಿ ನೇಮಿಸಲ್ಪಟ್ಟರೆ, ಒಂದು ವೇಳೆ ಅವನು 'ಮಅ್‌ಸಿಯತ್'ನ ಕೃತ್ಯಗಳಲ್ಲಿ ತೊಡಗಿರುವುದನ್ನು ಕಂಡರೆ ಆ ಕೃತ್ಯಗಳ ಬಗ್ಗೆ (ಜನತೆ) ಜಿಗುಪ್ಸೆ ಪಡಬಹುದು, ಆದರೂ ಅವನ ಅನುಸರಣೆಯಿಂದ ವಿಮುಖರಾಗಬಾರದು. (ಮುಸ್ಲಿಮ್, ಕಿತಾಬುಲ್ ಇಮಾರಃ)

ವಿದ್ವಾಂಸರಲ್ಲಿ ಕೂಡಾ, ಫಿಸ್ಕ್ ಅಥವಾ ದುಷ್ಟತೆಯ ಕಾರಣ ಒಬ್ಬ ಖಲೀಫನನ್ನು ಉಚ್ಚಾಟಿಸಲು ಅಥವಾ ಅವನ ವಿರುದ್ಧ ಬಂಡೇಳಲು ಸಾಧ್ಯವಿಲ್ಲ, ಕೇವಲ ಆ ಕಾರಣಕ್ಕಾಗಿ ಬಂಡೇಳುವುದು ನಿಷಿದ್ಧ ಎಂಬ ವಿಷಯದಲ್ಲಿ ಇಜ್ಮಾಅ್ (ಒಮ್ಮತಾಭಿಪ್ರಾಯ) ಇದೆ.

(ಇಮಾಮ್ ನವವಿ, ಶರಹ್ ಮುಸ್ಲಿಮ್, ಕಿತಾಬುಲ್ ಇಮಾರಃ)

ಈಗ ನಾವು ನಾಲ್ಕನೆಯ ಬಗೆಯ ಕೆಡುಕನ್ನು ತೆಗೆದುಕೊಳ್ಳೋಣ. ಒಬ್ಬ ಆಡಳಿತಗಾರನು ಈ ಬಗೆಯ ಕೆಡುಕಿನಲ್ಲಿ ನಿರತನಾದಾಗ ಅವನ ಬಗ್ಗೆ ಮುಸಲ್ಮಾನರ ನಿಲುವು ಏನಾಗಿರಬೇಕು? ಅವನ ನಾಯಕತ್ವವನ್ನು ಕೂಡಾ ಪ್ರಶ್ನಿಸದೆ ಅಂಗೀಕರಿಸುತ್ತಾ 'ಮಅ್‌ರೂಫ್'ನಲ್ಲಿ ಅವನ ಅನುಸರಣೆ ಕಡ್ಡಾಯವೆಂದು ಭಾವಿಸುತ್ತಿರಬೇಕೇ ಅಥವಾ ಅವನ ಬಗ್ಗೆ ಅವರ ಧೋರಣೆ ಇದಕ್ಕಿಂತ ಭಿನ್ನವಾಗಿರಬೇಕೇ? ಈ ಪ್ರಶ್ನೆಗಳ ಉತ್ತರವು ನಮಗೆ ಈ ಕೆಳಗಿನ ಹದೀಸ್‌ಗಳಲ್ಲಿ

ಸಿಗುತ್ತದೆ.

ನಿಮ್ಮ ಮೇಲೆ ನಾಯಕರನ್ನು ನೇಮಿಸಲಾಗುವುದು, ಅವರಲ್ಲಿನ ಕೆಲವು ಗುಣಗಳು ನಿಮಗೆ ಮೆಚ್ಚುಗೆಯಾಗುವುವು. ಮತ್ತೆ ಕೆಲವು ಗುಣಗಳು ನಿಮಗೆ ಅಪ್ರಿಯವಾಗಿರುವುವು. (ಸಹಾಬಿಗಳು) ಪ್ರಶ್ನಿಸಿದರು: ಪ್ರವಾದಿವರ್ಯರೇ(ಸ)! ಅಂಥ ಸಂದರ್ಭದಲ್ಲಿ ನಾವು ಅವರ ವಿರುದ್ಧ ಹೋರಾಡಬೇಕೇ? ಪ್ರವಾದಿ(ಸ) ಹೇಳಿದರು: ಅವರು ನಮಾಝ್ ಮಾಡುತ್ತಿರುವ ತನಕ (ಅರ್ಥಾತ್ ನಮಾಝನ್ನು ಬಿಟ್ಟು ಬಿಡುವ ತನಕ) ಹಾಗೆ ಮಾಡಬೇಡಿ. (ಮುಸ್ಲಿಮ್, ಕಿತಾಬುಲ್, ಇಮಾರಃ)

...ನೀವು ಯಾರನ್ನು ದ್ವೇಷಿಸುತ್ತೀರೋ ಮತ್ತು ಯಾರು ನಿಮ್ಮನ್ನು ದ್ವೇಷಿಸುತ್ತಾರೋ ಅವರು ನಿಮ್ಮ ಅತಿಕೆಟ್ಟ ಖಲೀಫಗಳು ಎಂದು ಪ್ರವಾದಿ(ಸ) ಹೇಳಿದರು. ''ಆಗ ಅಲ್ಲಾಹನ ಸಂದೇಶವಾಹಕರೇ(ಸ)! ಅಂಥವರೊಂದಿಗೆ ನಾವು ಖಡ್ಗದಿಂದ ವ್ಯವಹರಿಸಬಹುದೇ? ಎಂದು ಪ್ರಶ್ನಿಸಲಾಯಿತು. ಪ್ರವಾದಿ(ಸ) ಹೇಳಿದರು: ಇಲ್ಲ, ಅವರು ನಿಮ್ಮ ಮಧ್ಯೆ ನಮಾಝನ್ನು ಸ್ಥಾಪಿತವಾಗಿಟ್ಟಿರುವ ತನಕ ಹಾಗೆ ಮಾಡಬೇಡಿ.''

ಈ ಹದೀಸ್‌ಗಳಿಂದ ಕನಿಷ್ಠ ಪಕ್ಷ ಇಸ್ಲಾಮಿನ ಪ್ರಪ್ರಥಮ ಹಾಗೂ ಅತ್ಯಂತ ಪ್ರಧಾನ ಅಂಗವಾಗಿರುವ ನಮಾಝ್‌ನ ಮಟ್ಟಿಗೆ ವಿಷಯ ಸ್ಪಷ್ಟವಾಯಿತು. ಅಂದರೆ, ಒಬ್ಬ ವ್ಯಕ್ತಿ ನಮಾಝನ್ನೇ ಬಿಟ್ಟು ಬಿಟ್ಟರೆ ಅವನು ಮುಸಲ್ಮಾನರ ಸಣ್ಣ ಅಥವಾ ದೊಡ್ಡ ಯಾವ ಸ್ತರದ ನಾಯಕತ್ವಕ್ಕೂ ಅರ್ಹನಾಗಿರುವುದಿಲ್ಲ, ಅಂಥವನ ಸಾಮಾನ್ಯ ನಾಯಕತ್ವವಾಗಲಿ, ಇಮಾಮತ್ ಆಗಲಿ, ಖಿಲಾಫತ್ ಆಗಲಿ ಯಾವುದೂ ಉಳಿಯುವುದಿಲ್ಲ, ಅವನು ನಮಾಝ್‌ನಿಂದ ವಿಮುಖನಾದೊಡನೆಯೇ ಮುಸಲ್ಮಾನರಿಗೆ ಅವನನ್ನು ಪದಚ್ಯುತಗೊಳಿಸುವ ಅಧಿಕಾರ ಪ್ರಾಪ್ತವಾಗುತ್ತದೆ. ಮಾತ್ರವಲ್ಲ ಅವನನ್ನು ಪದಚ್ಯುತಗೊಳಿಸುವುದು ಅಥವಾ ಅವನು ನಿರಾಕರಿಸಿದರೆ ಬಲಪ್ರಯೋಗದಿಂದಾದರೂ ಅವನನ್ನು ಕಿತ್ತೊಗೆಯಬೇಕಾದುದು ಅವರ ಕರ್ತವ್ಯವಾಗುತ್ತದೆ. ಈ ಕುರಿತು ಮುಸ್ಲಿಮ್ ವಿದ್ವಾಂಸರ ಇಜ್ಮಾಅ್ (ಒಮ್ಮತ) ಕೂಡಾ ಇದೆ ಎಂದು ಕಾಝಿ ಇಯಾಝ್(ರ) ಹೇಳಿದ್ದಾರೆ.

ಒಬ್ಬ ಕಾಫಿರ್‌ನನ್ನು ಖಲೀಫಾ ಆಗಿ ಆರಿಸಲು ಸಾಧ್ಯವಿಲ್ಲ. ಒಂದು ವೇಳೆ ಖಲೀಫಾ ಆಗಿ ಆಯ್ಕೆಯಾದ ಬಳಿಕ ಒಬ್ಬನು ಕುಫ್ರ್ ಮಾಡಿದರೂ ತಕ್ಷಣ ಅವನನ್ನು ಖಿಲಾಫತ್ ಪದದಿಂದ ಕಿತ್ತೊಗೆಯಲಾಗುವುದು, ಹಾಗೆಯೇ ಅವನು ನಮಾಝನ್ನು ಸ್ಥಾಪಿಸುವುದು ಮತ್ತು ಇತರರಿಗೆ ನಮಾಝ್‌ನ ಪ್ರೇರಣೆ ಮತ್ತು ಬೋಧನೆ ಕೊಡುವುದನ್ನು ನಿಲ್ಲಿಸಿದಾಗಲೂ ಅವನನ್ನು ತಕ್ಷಣ ಆ ಪದವಿಯಿಂದ ಕಿತ್ತೊಗೆಯಬೇಕು ಎಂಬ ಬಗ್ಗೆ ವಿದ್ವಾಂಸರ ಒಮ್ಮತ ಇದೆ.

(ಇಮಾಮ್ ನವವಿ, ಶರಹ್ ಮುಸ್ಲಿಮ್, ಭಾಗ – 2)

ಇನ್ನು, ಇಸ್ಲಾಮಿನ ಮತ್ತುಳಿದ ಪ್ರಧಾನ ಅಂಗಗಳ ವಿಚಾರ. ಈ ವಿಷಯದಲ್ಲಿ ಕುರ್‌ಆನ್ ಅಥವಾ ಸುನ್ನತ್‌ನಲ್ಲಿ ನಮಾಝ್‌ನ ಕುರಿತು ಸಿಗುವಷ್ಟು ಸ್ಪಷ್ಟ ವಿವರಗಳು ಸಿಗುವುದಿಲ್ಲ, ಆದರೆ ಸಾಮಾನ್ಯ ಸ್ವರೂಪದ ಕೆಲವು ಹದೀಸ್‌ಗಳಿಂದ ನಾವು ಈ ವಿಷಯದಲ್ಲಿ

ಮಾರ್ಗದರ್ಶನ ಪಡೆಯಲು ಸಾಧ್ಯವಿದೆ. ಉದಾ: ಹಝ್ರತ್ ಉಬಾದಾ ಬಿನ್ ಸಾಮಿತ್(ರ) ಹೇಳುತ್ತಾರೆ;

ಪ್ರವಾದಿ ಮುಹಮ್ಮದ್(ಸ) ಅವರು ನಮ್ಮನ್ನು ಕರೆದು ನಮ್ಮಿಂದ ಬೈಅತ್ (ನಿಷ್ಠೆಯ ಕರಾರು) ಪಡೆದುಕೊಂಡರು. ಆ ವೇಳೆ ಅವರು ತಮ್ಮಿಂದ ಪಡೆದ ವಚನಗಳ ಪೈಕಿ, ನಾವು ನಾಯಕರ ಆದೇಶ ಆಲಿಸಬೇಕು ಹಾಗೂ ಪಾಲಿಸಬೇಕು... ಆಡಳಿತಗಾರನೊಡನೆ- ಅವನು ವ್ಯಕ್ತವಾದ ಕುಫ್ರ್‌ನಲ್ಲಿ ತೊಡಗಿರುವುದನ್ನು ನಾವು ನೋಡುವ ತನಕ ಹಾಗೂ ಅದು ಕುಫ್ರ್ ಎಂಬ ಬಗ್ಗೆ ನಮ್ಮ ಬಳಿ ಅಲ್ಲಾಹನ ವತಿಯಿಂದ ಬಂದ ಪುರಾವೆಗಳಿರುವ ತನಕ ಅಧಿಕಾರದ ವಿಷಯದಲ್ಲಿ ಸಂಘರ್ಷಕ್ಕೆ ಇಳಿಯಬಾರದು. (ಬುಖಾರಿ, ಭಾಗ- 2, ಕಿತಾಬುಲ್ ಫಿತನ್)

ಅಧಿಕಾರಸ್ಥನಿಂದ 'ಸುಸ್ಪಷ್ಟವಾದ ಕುಫ್ರ್' ಅರ್ಥಾತ್ ಧರ್ಮಧಿಕ್ಕಾರದ ಕೃತ್ಯ ಸಂಭವಿಸುವ ತನಕ ಅವನ ವಿರುದ್ಧ ಯಾವುದೇ ಹೆಜ್ಜೆ ಇಡಲು ಶರೀಅತ್ ಅನುಮತಿಸುವುದಿಲ್ಲ ಎಂಬುದು ಈ ಹದೀಸ್‌ನಿಂದ ವ್ಯಕ್ತವಾಗುತ್ತದೆ. ಅಂದರೆ ಒಬ್ಬ ಆಡಳಿತಾರೂಢನು ಸ್ಪಷ್ಟವಾದ ಕುಫ್ರ್‌ನಲ್ಲಿ ತೊಡಗಿಬಿಟ್ಟರೆ ಅವನು ಆಡಳಿತದ ಹಕ್ಕನ್ನು ಕಳೆದುಕೊಳ್ಳುತ್ತಾನೆಂದಾಯಿತು. ಆದರೆ ಇಲ್ಲಿ 'ಕುಫ್ರ್' ಎಂಬ ಶಬ್ದದ ಅರ್ಥ ಏನೆಂಬುದು ಸ್ಪಷ್ಟವಾಗಬೇಕಾದುದು ಅಗತ್ಯ. ಇಲ್ಲಿ ಕುಫ್ರ್ ಎಂದರೆ ಕೇವಲ ತಾತ್ವಿಕ ಅಥವಾ ನಂಬಿಕೆಗಳಿಗೆ ಸಂಬಂಧಿಸಿದ ಕುಫ್ರ್ ಎಂದು ಅರ್ಥವೇ ಅಥವಾ ಕರ್ಮಕ್ಕೆ ಸಂಬಂಧಿಸಿದ ಕುಫ್ರ್ ಕೂಡಾ ಇದರಲ್ಲಿ ಒಳಗೊಂಡಿದೆಯೇ? ಇಲ್ಲಿ ನಾವು ಪ್ರಸ್ತುತ ಹದೀಸ್‌ಗಳನ್ನು ಗಣನೆಗೆ ತೆಗೆದುಕೊಂಡರೆ ಕರ್ಮಕ್ಕೆ ಸಂಬಂಧಿಸಿದ ಕುಫ್ರ್ ಕೂಡಾ ಇದರಲ್ಲಿ ಒಳಗೊಂಡಿದೆ ಎಂದೇ ತೀರ್ಮಾನಿಸಬೇಕಾಗುತ್ತದೆ. ಏಕೆಂದರೆ ಈ ಮೂರು ಹದೀಸ್‌ಗಳಲ್ಲೂ ಚರ್ಚಿಸಲ್ಪಟ್ಟಿರುವ ವಿಷಯ ಮೂಲತಃ ಒಂದೇ. ಯಾವ ಯಾವ ಸಂದರ್ಭಗಳಲ್ಲಿ ಒಬ್ಬ ವ್ಯಕ್ತಿ ಖಿಲಾಫತ್ ಪದವಿಯಲ್ಲಿ ಮುಂದುವರಿಯಲು ಅನರ್ಹನಾಗುತ್ತಾನೆ ಎಂಬುದೇ ಈ ವಚನಗಳಲ್ಲಿನ ಕೇಂದ್ರೀಯ ವಿಷಯ. ಪ್ರಸ್ತುತ 2 ಹದೀಸ್‌ಗಳಲ್ಲೂ ನಮಾಝನ್ನು ತೊರೆಯುವುದರಿಂದ ಖಿಲಾಫತ್‌ನ ಹಕ್ಕು ಕಳೆದು ಹೋಗುವುದೆಂದು ಹೇಳಲಾಗಿದೆ. ಇಲ್ಲಿ ಮೂರನೆಯ ಹದೀಸ್‌ನಲ್ಲಿ 'ಕುಫ್ರನ್ ಬವಾಹ' ಅರ್ಥಾತ್ 'ಸ್ಪಷ್ಟವಾದ ಕುಫ್ರ್' ಎಂದು ಹೇಳಲಾಗಿದೆ. ಒಂದೇ ವಿಷಯವನ್ನು ಬೇರೆ ಬೇರೆ ಶಬ್ದಗಳಲ್ಲಿ ವಿವರಿಸಿದ ಮಾತ್ರಕ್ಕೆ ಮೂಲ ವಿಷಯ ಬದಲಾಗುವುದಿಲ್ಲ, ಅರ್ಥದಲ್ಲಿ ವ್ಯತ್ಯಾಸವುಂಟಾದರೂ ಅದು ಕೇವಲ ಆಂಶಿಕ ಮಾತ್ರ. ಆದ್ದರಿಂದ ಕೊನೆಯ ಹದೀಸ್‌ನಲ್ಲಿ ಬಳಸಲಾದ 'ಕುಫ್ರನ್ ಬವಾಹ' ಅರ್ಥಾತ್ ಸ್ಪಷ್ಟ ಕುಫ್ರ್ ಎಂಬ ಶಬ್ದವು ಕೇವಲ ತಾತ್ವಿಕ ಕುಫ್ರನ್ನು ಮಾತ್ರವಲ್ಲದೆ ಪ್ರಾಯೋಗಿಕ ಕುಫ್ರನ್ನೂ ಒಳಗೊಂಡಿದೆ ಎಂಬುದನ್ನು ಅಂಗೀಕರಿಸಬೇಕಾಗುತ್ತದೆ. ಏಕೆಂದರೆ ಖಿಲಾಫತ್‌ನಲ್ಲಿ ಮುಂದುವರಿಯುವ ಹಕ್ಕು ಎಲ್ಲಿಯ ತನಕ ಎಂಬ ಒಂದೇ ಪ್ರಶ್ನೆಗೆ ಉತ್ತರವಾಗಿ ಒಂದೆಡೆ 'ನಮಾಝನ್ನು ತೊರೆಯುವ ತನಕ' ಎಂಬ ಉತ್ತರ ಕೊಟ್ಟರೆ ಇನ್ನೊಂದೆಡೆ 'ಸ್ಪಷ್ಟ ಕುಫ್ರ್' ಸಂಭವಿಸುವ ತನಕ ಎಂಬ ಉತ್ತರಕೊಡಲಾಗಿದೆ. ಇದು, ನಮಾಝನ್ನು ತೊರೆಯುವುದು

'ಕುಫ್ರನ್ ಬವಾಹ'ದ ಒಂದು ನಿಶ್ಚಿತ ರೂಪ ಎಂಬುದಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ನಮಾಝ್ ಒಂದು ಪ್ರಾಯೋಗಿಕ ಕರ್ಮವಾಗಿದ್ದು ಅದು ತತ್ವವೋ ವಿಶ್ವಾಸವೋ ಅಲ್ಲ. ಆದ್ದರಿಂದ ನಮಾಝನ್ನು ತೊರೆಯುವುದು ಪ್ರಾಯೋಗಿಕ ಲೋಪವೇ ಹೊರತು ತಾತ್ವಿಕ ಲೋಪವಲ್ಲ. ಹೀಗಿರುತ್ತಾ ಇಲ್ಲಿ ನಮಾಝ್ ತೊರೆಯುವುದನ್ನು 'ಕುಫ್ರನ್ ಬವಾಹ'ದ ಸಾಲಿಗೆ ಸೇರಿಸಿರುವುದು, ಕೊನೆಯ ಹದೀಸ್‌ನಲ್ಲಿ ಬಳಸಲಾದ 'ಕುಫ್ರ್' ಶಬ್ದದ ಅರ್ಥದಲ್ಲಿ ಪ್ರಾಯೋಗಿಕ ಕುಫ್ರ್ ಕೂಡಾ ಒಳಗೊಂಡಿದೆ ಎಂಬುದಕ್ಕೆ ಸ್ಪಷ್ಟ ಪುರಾವೆಯಾಗಿದೆ. ಪ್ರಾಯಶಃ ಇದೇ ಕಾರಣದಿಂದ, ಈ ಹದೀಸ್‌ನಲ್ಲಿ ಆಡಳಿತಗಾರನ ಕುಫ್ರ್‌ನ ಬಗ್ಗೆ ಅದನ್ನು 'ತಿಳಿಯುವ ತನಕ' ಅಥವಾ 'ಕೇಳುವ ತನಕ' ಎಂದು ಹೇಳದೆ ಅದನ್ನು 'ನೋಡುವ ತನಕ' (ಇಲ್ಲಾಅನ್ ತರವ್) ಎಂಬ ಶಬ್ದವನ್ನು ಉಪಯೋಗಿಸಲಾಗಿದೆ. ಅಂದರೆ ಅವನಲ್ಲಿ ಪ್ರಾಯೋಗಿಕವಾದ ಕುಫ್ರ್ ಇದೆ ಎಂಬುದು ಪೂರ್ಣವಾಗಿ ಸ್ಪಷ್ಟವಾಗುವ ತನಕ ಅವನ ಅಧಿಕಾರವನ್ನು ಪ್ರಶ್ನಿಸುವಂತಿಲ್ಲ.

ಈ ರೀತಿ ಪ್ರಸ್ತುತ ಹದೀಸ್‌ನಲ್ಲಿರುವ 'ಕುಫ್ರ್' ಎಂಬ ಶಬ್ದದಲ್ಲಿ ಪ್ರಾಯೋಗಿಕವಾದ ಕುಫ್ರ್ ಕೂಡಾ ಒಳಗೊಂಡಿದೆ ಎಂಬುದನ್ನು ತಿಳಿದುಕೊಂಡ ಬಳಿಕ, ಕೇವಲ ನಮಾಝನ್ನು ತೊರೆಯುವುದು ಮಾತ್ರ ಕುಫ್ರ್ ಎಂದು ಪರಿಗಣಿಸಬಹುದಾದ ಲೋಪವೇ ಅಥವಾ ಧರ್ಮದ ಇನ್ನಾವುದಾದರೂ ಕರ್ಮವನ್ನು ತೊರೆದರೆ ಅದನ್ನು ಕುಫ್ರ್ ಎಂದು ಪರಿಗಣಿಸಬಹುದೇ ಎಂಬುದನ್ನು ನೋಡೋಣ. ಈ ವಿಚಾರದಲ್ಲಿ 'ಹೌದು' ಅಥವಾ 'ಅಲ್ಲ' ಎಂಬ ಎರಡು ಅಭಿಪ್ರಾಯಗಳಿಗೂ ಅವಕಾಶವಿದೆ. ಏಕೆಂದರೆ ಒಂದೆಡೆ ಕುರ್‌ಆನ್ ಮತ್ತು ಹದೀಸ್‌ನ ಆಧಾರದಲ್ಲಿ ನಮಾಝ್ ಮಾತ್ರವಲ್ಲದೆ ಇತರ ಪ್ರಧಾನ ಕರ್ಮಗಳ ಪರಿತ್ಯಾಗವನ್ನು ಕೂಡಾ ಪ್ರಾಯೋಗಿಕವಾಗಿ ಕುಫ್ರ್ ಎಂದು ಪರಿಗಣಿಸಲು ಸಾಧ್ಯವಿದೆ. ಹಲವರು ಹಾಗೆ ಪರಿಗಣಿಸಿದ್ದಾರೆ ಕೂಡಾ. ಇನ್ನೊಂದೆಡೆ ನಮಾಝ್‌ನ ಕುರಿತು ಎಷ್ಟು ಸ್ಪಷ್ಟವಾಗಿ ಅದು ಇಸ್ಲಾಮ್ ಮತ್ತು ಕುಫ್ರ್‌ನ ನಡುವಣ ನಿರ್ಣಾಯಕ ರೇಖೆ ಎಂದೂ ಅದನ್ನು ತೊರೆಯುವುದು ಪ್ರಾಯೋಗಿಕ ಕುಫ್ರ್ ಎಂದೂ ಹೇಳಲಾಗಿದೆಯೋ ಅಷ್ಟು ಸ್ಪಷ್ಟವಾಗಿ ಧರ್ಮದ ಬೇರಾವುದೇ ಪ್ರಧಾನ ಅಂಗದ ಬಗ್ಗೆ ಹೇಳಿರುವುದು ಕುರ್‌ಆನ್‌ನಲ್ಲಾಗಲೀ ಹದೀಸ್‌ಗಳಲ್ಲಿ ಆಗಲೀ ಕಂಡುಬರುವುದಿಲ್ಲ.

ಈಗ 5ನೆಯ ಬಗೆಯ ಕೆಡುಕನ್ನು ತೆಗೆದುಕೊಳ್ಳೋಣ. ರಾಷ್ಟ್ರದ ಇಸ್ಲಾಮೀ ಸ್ವರೂಪವನ್ನು ಸಂರಕ್ಷಿಸಲಾಗದ ಹಾಗೂ ರಾಷ್ಟ್ರದ ಕಾನೂನು ಮತ್ತು ಸಂವಿಧಾನದಲ್ಲಿ ಇಸ್ಲಾಮೇತರ ಅಂಶಗಳನ್ನು ತಂದು ತುರುಕಲೆತ್ನಿಸುವ 'ಖಲೀಫ'ನೊಂದಿಗೆ ಯಾವ ರೀತಿ ವರ್ತಿಸಬೇಕು ಎಂಬ ಬಗ್ಗೆ ಪವಿತ್ರ ಕುರ್‌ಆನ್‌ನ ಈ ಕೆಳಗಿನ ವಾಕ್ಯದಲ್ಲಿ ಖಚಿತವಾಗಿ ತಿಳಿಸಲಾಗಿದೆ.

**''ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನುಗಳ ಪ್ರಕಾರ ತೀರ್ಮಾನ ಮಾಡದ ಜನರೇ ಕಾಫಿರ್‌ಗಳು.'' (ಸೂರಃ ಅಲ್‌ಮಾಇದಃ)**

ಇಸ್ಲಾಮೀ ಕಾನೂನುಗಳನ್ನು ಬಿಟ್ಟು ಇಸ್ಲಾಮೇತರ ಕಾನೂನುಗಳ ಆಧಾರದಲ್ಲಿ ರ್ಮಾನಗಳನ್ನು ಕೈಗೊಳ್ಳುವುದು ಅಥವಾ ತೀರ್ಪುಕೊಡುವುದು ಪ್ರಾಯೋಗಿಕ ಕುಫ್ರ್ ದೆ ಎಂಬುದನ್ನು ಈ ದಿವ್ಯ ವಚನವು ಸ್ಪಷ್ಟಪಡಿಸುತ್ತದೆ. ಸ್ವಲ್ಪ ಗಮನಿಸಿ ನೋಡಿ. ಇಸ್ಲಾಮೀ ೂನುಗಳನ್ನು ಬಿಟ್ಟು ಇಸ್ಲಾಮೇತರ ಕಾನೂನುಗಳ ಬುನಾದಿಯಲ್ಲಿ ತೀರ್ಪು ಕೊಡುವುದೇ ಯೋಗಿಕ ಕುಫ್ರ್' ಆಗಿ ಬಿಡುವುದಾದರೆ, ಒಂದು ದೇಶದ ಸಂವಿಧಾನ ಅಥವಾ ಅದರ ೂನಿನಲ್ಲಿ ಯಾವುದೇ ಇಸ್ಲಾಮೇತರ ತತ್ವ ಅಥವಾ ಅಂಶವನ್ನು ಸೇರಿಸಿಬಿಡುವುದು ಅತ್ಯಂತ ೀರ ಸ್ವರೂಪದ ಕುಫ್ರ್ ಆಗಿ ಬಿಡುವುದೆಂದೇ ಅರ್ಥೈಸಬೇಕಾಗುತ್ತದೆ. ಪ್ರಾಯೋಗಿಕ ಕುಫ್ರ್, ಾಫತ್‌ನ ಹಕ್ಕಿನ ಮೇಲೆ ಯಾವ ಬಗೆಯ ಪರಿಣಾಮ ಬೀರುತ್ತದೆಂಬುದನ್ನು ನಾವು ಈಗಾಗಲೇ ಡಿದ್ದಾಯಿತು. ಪ್ರಾಯೋಗಿಕ ಕುಫ್ರ್ ಸಂಭವಿಸಿದಲ್ಲಿ ಖಿಲಾಫತ್‌ನ ಹಕ್ಕು ಉಳಿಯುವುದಿಲ್ಲ. ರಿಂದ ಈ ಲೋಪ ಮಾಡಿದವನನ್ನು ಖಿಲಾಫತ್‌ನ ಹುದ್ದೆಯಿಂದ ಕಿತ್ತೆಸೆಯಬೇಕು ಎಂಬುದೇ ಅತ್‌ನ ತೀರ್ಮಾನ. ಕಾಝಿ ಅಯಾಝ್(ರ) ಹೇಳುತ್ತಾರೆ:

ಖಲೀಫ ಕುಫ್ರ್‌ನಲ್ಲಿ ತೊಡಗಿದರೆ ಅಥವಾ ಶರೀಅತ್‌ನ ನಿಯಮಗಳನ್ನು ಬದಲಾಯಿಸಿ ಬಿದ್‌ಅತ್ (ಧರ್ಮದ ಹೆಸರಲ್ಲಿ ಧರ್ಮದಲ್ಲಿ ಇಲ್ಲದ ನೂತನ ಆಚರಣೆ) ಆರಂಭಿಸಿದರೆ ನು ಆಡಳಿತ ನಡೆಸುವ ಅಧಿಕಾರವನ್ನು ಕಳೆದುಕೊಳ್ಳುವನು. ಅವನ ಅನುಸರಣೆಯ ವ್ಯದಿಂದ ಮುಸಲ್ಮಾನರು ಮುಕ್ತವಾಗುವರು. ಮಾತ್ರವಲ್ಲ, ಸಾಧ್ಯವಿದ್ದರೆ ಅವನ ವಿರುದ್ಧ ಎದ್ದು ಅವನನ್ನು ಪದಚ್ಯುತಗೊಳಿಸಿ ಅವನ ಸ್ಥಾನದಲ್ಲಿ ಬೇರೊಬ್ಬ ನ್ಯಾಯವಂತ ವ್ಯಕ್ತಿಯನ್ನು ಸಬೇಕಾದುದು ಅವರ ಕರ್ತವ್ಯವಾಗುವುದು.

(ಶರಹ್ ಮುಸ್ಲಿಮ್, ನವವೀ ಕಿತಾಬುಲ್ ಇಮಾರಃ)

ಇಮಾಮ್ ನವವೀ(ರ) ಅವರು ಕಾಝಿ ಅಯಾಝ್‌ರ ಈ ಮಾತನ್ನು ತಮ್ಮ ಗ್ರಂಥದಲ್ಲಿ ಲ್ಲೇಖಿಸಿರುವುದು ಸ್ವತಃ ಅವರ ಅಭಿಪ್ರಾಯವೂ ಅದೇ ಎಂಬುದಕ್ಕೆ ಸಾಕ್ಷಿಯಾಗಿದೆ. ಅವರು ್ರತ ಹದೀಸ್‌ಗಳನ್ನು ವ್ಯಾಖ್ಯಾನಿಸುತ್ತಾ 'ನಮಾಝ್ ನಿರ್ವಹಿಸದವನು' ಮತ್ತು 'ನಿಮ್ಮ ್ಯೆ ನಮಾಝನ್ನು ಸ್ಥಾಪಿತವಾಗಿ ಇಡದವನು' ಎಂಬ ಶಬ್ದಗಳ ತಾತ್ಪರ್ಯವನ್ನು ಈ ರೀತಿ ರಿಸಿರುವರು:

ಇದರಲ್ಲಿ ಕೂಡಾ ಮೇಲೆ ಹೇಳಲಾದ ವಿಷಯವನ್ನೇ ಹೇಳಲಾಗಿದೆ. ಅಂದರೆ ೀಫಗಳು ಇಸ್ಲಾಮಿನ ಪ್ರಧಾನ ಹಾಗೂ ಖಚಿತ ಆದೇಶಗಳನ್ನು ಪಾಲಿಸುತ್ತಾ ಇರುವ ತನಕ ರಲ್ಲಿ ಯಾವುದೇ ಬದಲಾವಣೆ ಮಾಡದಿರುವ ತನಕ ಕೇವಲ ಅವರ ಅಕ್ರಮ ಅಥವಾ ತ್ತೆಯ ಆಧಾರಲ್ಲಿ ಅವರ ವಿರುದ್ಧ ಬಂಡಾಯವೇಳುವುದು ಧರ್ಮಸಮ್ಮತವಲ್ಲ.

(ಶರಹ್ ಮುಸ್ಲಿಮ್, ನವವೀ, ಕಿತಾಬುಲ್ ಇಮಾರಃ)

ಒಬ್ಬ ಖಲೀಫ ಬೇರೆ ಕಾನೂನುಗಳನ್ನು ಅನುಷ್ಠಾನಿಸುವ ಮೂಲಕ ಇಸ್ಲಾಮೀ ಕಾನೂನನ್ನು ಲಾಯಿಸಲು ಯಾವುದೇ ಸ್ತರದಲ್ಲಿ ಪ್ರಯತ್ನಿಸಿದರೂ, ಸ್ವತಃ ಅವನನ್ನೇ ಬದಲಿಸಿಬಿಡಬೇಕು.

ಅರ್ಥಾತ್ ಪದಚ್ಯುತ ಗೊಳಿಸಬೇಕು ಎಂಬುದು ಈ ಎಲ್ಲ ವಿವರಣೆಗಳಿಂದ ವಿವಾದಾತೀತವ
ಸ್ಪಷ್ಟವಾಗುತ್ತದೆ.

ಈಗ ಈ ಸರಣಿಯಲ್ಲಿ ಆರನೆಯ ಮತ್ತು ಕೊನೆಯ ಕೆಡುಕಿನ ಬಗ್ಗೆ ಏನಾದ
ಹೇಳಬೇಕಾದ ಅಗತ್ಯ ಕಿಂಚಿತ್ತೂ ಉಳಿದಿಲ್ಲ. 'ಪ್ರಾಯೋಗಿಕ ಕುಫ್ರ್' ಸಂಭವಿಸಿದ ಮಾ
ಅದರ ಆಧಾರದಲ್ಲೇ ಒಬ್ಬ ಖಲೀಫರನ್ನು ಖಿಲಾಫತ್‌ನಿಂದ ಉಚ್ಚಾಟಿಸಬೇಕು ಎಂದ ಮ
ಒಬ್ಬನಿಂದ 'ವಿಶ್ವಾಸಾತ್ಮಕ ಕುಫ್ರ್' ಅಥವಾ 'ನಂಬಿಕೆಯಲ್ಲಿನ ಕುಫ್ರ್' ಸಂಭವಿಸಿದರೆ ಅವನ
ಖಿಲಾಫತ್‌ನಲ್ಲಿ ಮುಂದುವರಿಯಗೊಡಲು ಯಾವ ಆಸ್ಪದವೂ ಇಲ್ಲವೆಂದೇ ಅಥ
ನಿಜವಾಗಿ 'ಇಸ್ಲಾಮ್' ಮತ್ತು 'ಈಮಾನ್' ಎಂಬುದು ಖಿಲಾಫತ್ ಸ್ಥಾನದ ಅರ್ಹತೆಗಿರ
ಪ್ರಪ್ರಥಮ ಹಾಗೂ ಅತ್ಯಂತ ಅನಿವಾರ್ಯ ನಿಬಂಧನೆಯಾಗಿದೆ. ಈ ನಿಬಂಧನೆಯ
ಯಾರಿಗೂ ಯಾವುದೇ ಬಗೆಯ ಭಿನ್ನಾಭಿಪ್ರಾಯವಿಲ್ಲ. ಒಬ್ಬ ವ್ಯಕ್ತಿ ಈ ನಿಬಂಧನೆಯ
ಪೂರ್ತಿಗೊಳಿಸುವ ಸ್ಥಿತಿಯಲ್ಲಿಲ್ಲವಾದರೆ ಅಥವಾ ಅವನು ಈ ಪ್ರಥಮ ಅರ್ಹತೆಯ
ಪಡೆದಿಲ್ಲವೆಂದಾದರೆ ಅಂಥ ವ್ಯಕ್ತಿಗೆ ಖಿಲಾಫತ್ ಸ್ಥಾನ ಕೊಡುವುದನ್ನಾಗಲೀ, ಆ ಸ್ಥಾನ
ಅವನನ್ನು ಮುಂದುವರಿಯಲು ಬಿಡುವುದನ್ನಾಗಲೀ ಪರಿಗಣಿಸಲು, ಮಾತ್ರವ
ಊಹಿಸಲೂ ಸಾಧ್ಯವಿಲ್ಲ.

'ಕುಫ್ರ್' ಜೊತೆ ಸಂಬಂಧ ಸ್ಥಾಪಿಸಿಕೊಂಡಿರುವ ವ್ಯಕ್ತಿಯನ್ನು ಖಿಲಾಫತ್‌ನ ಪ
ಅಲಂಕರಿಸಲು ಬಿಡಬಾರದೆಂಬ ಬಗ್ಗೆ ಎಲ್ಲ ವಿದ್ವಾಂಸರ ಪೂರ್ಣ ಒಮ್ಮತವಿದೆ. ಹಾಫಿರ

---

3. ಈ ವಿರೋಧದ ಅರ್ಥ: ಖಲೀಫ ಅಥವಾ ನಾಯಕರ ಎಲ್ಲ ಅಕ್ರಮ, ಅನ್ಯಾಯ, ಭ್ರ
ಮತ್ತು ದುಷ್ಟತನಗಳನ್ನು ಮೌನವಾಗಿ ಸಹಿಸಬೇಕು ಎಂದಲ್ಲ, ನಿಜವಾಗಿ ಇದು ಬಹಳ ವಿ
ಅರ್ಥ ಹೊಂದಿದೆ. ಒಂದೆಡೆ ಇಸ್ಲಾಮೀ ಶರೀಅತ್ ದೊಡ್ಡ ಕ್ಷೋಭೆಯನ್ನು ತಪ್ಪಿಸಲಿಕ್ಕಾಗಿ ಇ
ತುಲನಾತ್ಮಕವಾಗಿ ಸಣ್ಣದಾದ ತಪ್ಪುಗಳನ್ನು ಸಹಿಸಿಕೊಳ್ಳಲು ಆದೇಶಿಸುತ್ತದಾದರೆ, ಇನ್ನೊಂ
ಅದು ಆಡಳಿತಾರೂಢರಿಂದ ಯಾವುದೇ ತಪ್ಪು ಸಂಭವಿಸಿದಾಗ ಅವರ ಸುಧಾರಣೆಗೆ ತೀವ್ರ ಪ್ರ
ನಡೆಸಬೇಕು. ಅವರ ತಪ್ಪನ್ನು ಅವರಿಗೆ ತಿಳಿಸಬೇಕು ಮತ್ತು ಅವರನ್ನು ಸರಿದಾರಿಗೆ ತರಲು ಸಾಧ್ಯವಿ
ಎಲ್ಲ ಶಾಂತಿಯುತ ಪ್ರಯತ್ನಗಳನ್ನು ಮಾಡಬೇಕು ಎಂದು ಬಲವಾಗಿ ಆಗ್ರಹಿಸಿದೆ. ಈಗಾಗಲೇ ನ
ಉದ್ಧರಿಸಿರುವ ಹಝ್ರತ್ ಉಬಾದಾ ಬಿನ್ ಸಾಮಿತ್(ರ) ಅವರ 'ಪ್ರವಾದಿ ಮುಹಮ್ಮದ್(
ಅವರು ನಮ್ಮನ್ನು ಕರೆದು ನಮ್ಮಿಂದ ಬೈಅತ್ ಪಡೆದುಕೊಂಡರು...' ಎಂಬ ಹದೀಸ್
ಮುಂದುವರಿದು ಹೇಳಲಾಗಿದೆ; ಮತ್ತು ಯಾವ ಸಂದರ್ಭದಲ್ಲೂ ನಾವು ಸತ್ಯವನ್ನು ನುಡಿಯಲೇಬೆ
ಮತ್ತು ಅಲ್ಲಾಹನ ವಿಷಯದಲ್ಲಿ ಇತರ ಯಾರದೇ ದೂಷಣೆಯನ್ನು ಲೆಕ್ಕಿಸಬಾರದು ಎಂಬ
(ಅವರು ನಮ್ಮಿಂದ ಕರಾರು ಪಡೆದುಕೊಂಡರು) ಅಂದರೆ ಪ್ರವಾದಿ ಮುಹಮ್ಮದ್(ಸ) ಅವರು ತ
ಸಂಗಡಿಗರಿಂದ ಖಲೀಫ ಮತ್ತು ನಾಯಕರ ಸಂಪೂರ್ಣ ಅನುಸರಣೆ ಮಾಡುವೆವು ಮತ್ತು ಅ
ಅಧಿಕಾರವನ್ನು ಪ್ರಶ್ನಿಸಲಾರೆವು ಎಂದು ಕರಾರು ಪಡೆಯುವುದರ ಜೊತೆಗೇ ಯಾವ ಸಂದರ್ಭದಲ್ಲೂ

ು್ನು ಹಜರ್ ಈ ರೀತಿ ಬರೆದಿದ್ದಾರೆ:

ಕುಫ್ರ್‌ನ ಹಾದಿ ಹಿಡಿದ ಕಾರಣಕ್ಕಾಗಿ ಖಲೀಫ ತನ್ನ ಸ್ಥಾನದಿಂದ ಉಚ್ಚಾಟಿಸಲ್ಪಡುತ್ತಾನೆ. ಬಗ್ಗೆ 'ಇಜ್ಮಾಅ್' (ಒಮ್ಮತ) ಇದೆ. ಆದ್ದರಿಂದ ಇಂಥ ಸನ್ನಿವೇಶದಲ್ಲಿ ಈ ಕಾರ್ಯಕ್ಕಾಗಿ ಲೀಫನ ಉಚ್ಚಾಟನೆಗಾಗಿ ಎದ್ದು ನಿಲ್ಲ ಬೇಕಾದುದು ಪ್ರತಿಯೊಬ್ಬ ಮುಸಲ್ಮಾನನ ಕರ್ತವ್ಯ. ಕರ್ತವ್ಯವನ್ನು ಈಡೇರಿಸಲು ಹೊರಡುವವರಿಗೆ ಪುಣ್ಯ ಸಿಗುವುದು. ಈ ಬಗ್ಗೆ ಅಸಡ್ಡೆ ೀರುವವರು ಪಾಪಿಗಳಾಗುವರು. ಇನ್ನು ಈ ಹಾದಿಯಲ್ಲಿ ಹೋರಾಡಲು ಸಾಧ್ಯವಿಲ್ಲದೆ ಸಹಾಯಕರಾಗಿರುವವರ ಮೇಲೆ ಅವರು ಆ ರಾಷ್ಟ್ರದಿಂದ ಹೊರಕ್ಕೆ 'ಹಿಜ್ರತ್' (ವಲಸೆ) ೋಗಬೇಕಾದುದು ಕಡ್ಡಾಯವಾಗಿದೆ. (ಫತ್‌ಹುಲ್ ಬಾರಿ, ಭಾಗ– 13, ಪುಟ– 101)

ಈ ಎಲ್ಲಾ ವಿವರಣೆಗಳಿಂದ ತಿಳಿಯುವುದೇನೆಂದರೆ, ಪ್ರಸ್ತುತ ಆರು ಸಂಭವನೀಯ ್ನಿವೇಶಗಳ ಪೈಕಿ ಮೊದಲ ಮೂರು ಸನ್ನಿವೇಶಗಳಲ್ಲಿ ಖಿಲಾಫತ್ ಪದವಿಯಲ್ಲಿ ುಂದುವರಿಯಲು ಖಲೀಫನಿಗಿರುವ ಹಕ್ಕನ್ನು ಪ್ರಶ್ನಿಸಲು ಶರೀಅತ್ ಅನುಮತಿಸುವುದಿಲ್ಲ.[3] ವರೆ ಕೊನೆಯ ಮೂರು ಸನ್ನಿವೇಶಗಳಲ್ಲಿ ಆತನನ್ನು ಉಚ್ಚಾಟಿಸಲು ಆದೇಶಿಸಲಾಗಿದೆ. ಸ್ತುತ ಕೊನೆಯ ಮೂರು ಸನ್ನಿವೇಶಗಳಲ್ಲಿ ಇಮಾಮ್ ಅಥವಾ ಖಲೀಫನ ಉಚ್ಚಾಟನೆ ಾಕೆ ಅನಿವಾರ್ಯವಾಗುತ್ತದೆ ಎಂಬುದಕ್ಕೆ ಪ್ರಾಯಶಃ ಯಾವುದೇ ಪುರಾವೆಗಳ ಅಗತ್ಯ ರಲಾರದು. ಈಗಾಗಲೇ ಹೇಳಿರುವಂತೆ, ಇಸ್ಲಾಮ್ ಧರ್ಮದ ದೃಷ್ಟಿಯಲ್ಲಾಗಲೀ, ಮುಸ್ಲಿಮರ ಷ್ಟಿಯಲ್ಲಾಗಲೀ ಆಡಳಿತ ವ್ಯವಸ್ಥೆ ಎಂಬುದು ವಸ್ತುತಃ ಒಂದು ಆವಶ್ಯಕತೆಯಲ್ಲ. ಇತರ ಕೆಲವು ಧಾನ ಹಿತಾಸಕ್ತಿ ಮತ್ತು ಕೆಲವು ಉನ್ನತ ಉದ್ದೇಶಗಳನ್ನು ಸಾಧಿಸಲು ಇದೊಂದು ಅನಿವಾರ್ಯ ಪಾಧಿ ಮಾತ್ರ. ಈ ಉದ್ದೇಶ ಮತ್ತು ಹಿತಾಸಕ್ತಿಗಳಲ್ಲೂ, ಶರೀಅತ್ ಕಾನೂನುಗಳ ಅನುಷ್ಠಾನ ತ್ಯಂತ ಮೂಲಭೂತ ಹಾಗೂ ಪ್ರಧಾನ ಸ್ವರೂಪದ ಉದ್ದೇಶವಾಗಿದೆ. ಈಗ ಒಂದು ವೇಳೆ

---

ಡಿಯುವುದಕ್ಕೆ ಹಿಂಜರಿಯುವುದಿಲ್ಲ ಎಂದೂ ವಚನ ಪಡೆದುಕೊಂಡರು. ಈ ಮಾತು ಮತ್ತು ಅದರ ನ್ನೆಲೆಯನ್ನು ನೋಡಿದರೆ, ಮುಸಲ್ಮಾನನ ಹೊಣೆಗಾರಿಕೆ ತಮ್ಮ ಆಡಳಿತಗಾರರು ತಪ್ಪಿ ನಡೆದಾಗಲೂ ವರ ನಾಯಕತ್ವವನ್ನು ಪ್ರಶ್ನಿಸದೆ ಒಳಿತಿನ ವಿಷಯದಲ್ಲಿ ಅವರ ಅನುಸರಣೆ ಮಾಡುತ್ತಾ ಅವರ ನ್ಯಾಯಗಳನ್ನು ಸಹಿಸಿಕೊಂಡಿರುವುದಕ್ಕೆ ಮಾತ್ರ ಸೀಮಿತವಾಗಿಲ್ಲ, ಆಡಳಿತಗಾರರ ತಪ್ಪುಗಳ ಬಗ್ಗೆ ವರ ಗಮನ ಸೆಳೆಯುವುದು, ಅವರನ್ನು ತಿದ್ದಲು ಪ್ರಯತ್ನಿಸುವುದು ಮತ್ತು ಆ ತಪ್ಪುಗಳ ಪಾರಲೌಕಿಕ ಿಣಾಮಗಳ ಬಗ್ಗೆ ಎಚ್ಚರಿಕೆ ಕೊಡುವುದೂ ಮುಸ್ಲಿಮ್ ಜನಸಾಮಾನ್ಯರ ಹೊಣೆಗಾರಿಕೆಯಾಗಿದೆ ಬುದು ವ್ಯಕ್ತವಾಗಿ ಕಾಣಿಸುತ್ತದೆ. ಪ್ರವಾದಿ ಮುಹಮ್ಮದ್(ಸ) ಅವರು, ಜನಸಾಮಾನ್ಯರನ್ನು ುಕಿನಿಂದ ತಡೆಯಬೇಕಾದುದು ಮುಸ್ಲಿಮರ ಕರ್ತವ್ಯವಾಗಿರುವಂತೆಯೇ ಆಡಳಿತಗಾರರನ್ನು ಪುಗಳಿಂದ ತಡೆಯುವುದೂ ಅವನ ಹೊಣೆಗಾರಿಕೆಯಾಗಿದೆ ಎಂದು ತಡೆಯುವ ಧೈರ್ಯವಿಲ್ಲದಿದ್ದರೆ ಷ್ಠ ಪಕ್ಷ ಮನಸ್ಸಿನಲ್ಲಾದರೂ ಆ ಕೆಡುಕುಗಳ ಬಗ್ಗೆ ಜಿಗುಪ್ಸೆ ಇರಬೇಕಾದುದು ಸತ್ಯವಿಶ್ವಾಸದ ನಿವಾರ್ಯ ಬೇಡಿಕೆಯೆಂದೂ ಆಗಾಗ ಒತ್ತಿ ಹೇಳಿರುವರು.

ದುರದೃಷ್ಟವಶಾತ್, ಆ ವ್ಯವಸ್ಥೆಯ ಪ್ರಧಾನ ಸೂತ್ರಧಾರನಾದ ಖಲೀಫನೇ ಇಸ್ಲಾಮಿನಿಂ
ವಿಮುಖನಾಗಿದ್ದರೆ ಅವನು ಇತರೆಲ್ಲ ಆಡಳಿತ ವ್ಯವಹಾರಗಳನ್ನು ನಡೆಸುವನೆಂದು ನಿರೀಕ್ಷಿಸು
ಸಾಧ್ಯತೆ ಇದ್ದರೂ- ಯಾವುದು ಒಂದು ಇಸ್ಲಾಮೀ ಆಡಳಿತ ವ್ಯವಸ್ಥೆಯ ಮೂಲ ಗುರಿಯೋ
ಅದನ್ನು ಸಾಧಿಸಲು ಅವನು ತನ್ನೆಲ್ಲಾ ಆಡಳಿತ ಅಧಿಕಾರ ಮತ್ತು ತನ್ನೆಲ್ಲಾ ಭೌತಿಕ, ವೈಚಾರಿ
ಮತ್ತು ಕ್ರಿಯಾ ಸಾಮರ್ಥ್ಯಗಳನ್ನು ವಿನಿಯೋಗಿಸುತ್ತಾನೆಂದು ನಿರೀಕ್ಷಿಸಲು ಸಾಧ್ಯವೇ ಇ
ಇದಕ್ಕೆ ತದ್ವಿರುದ್ಧವಾಗಿ, ಅವನು ತನ್ನೆಲ್ಲಾ ಸಾಮರ್ಥ್ಯಗಳನ್ನು ಆ ಮೂಲ ಗುರಿಗೆ ಸಂಪೂಣ
ಪ್ರತಿಕೂಲವಾದ ದಿಕ್ಕಿನಲ್ಲಿ ವಿನಿಯೋಗಿಸುವುದು ಖಂಡಿತ. ಆದ್ದರಿಂದಲೇ ಇಸ್ಲಾಮ್, ಅಂ
ವ್ಯಕ್ತಿಯ ಕೈಯಿಂದ ಖಿಲಾಫತ್‌ನ ಪದವಿಯನ್ನು ಕಿತ್ತುಕೊಳ್ಳ ಬಯಸುತ್ತದೆ.

ಈ ಸಾಲಿನ ಇನ್ನುಳಿದ ಎರಡು ಸನ್ನಿವೇಶಗಳಲ್ಲೂ ಇಂಥ ಸಾಧ್ಯತೆಗಳು ಯಾವಾಗಲ
ಇದ್ದೇ ಇರುತ್ತವೆ. ಕೆಲವೊಮ್ಮೆ ಇವು ಸಾಧ್ಯತೆಗಳಾಗಿ ಮಾತ್ರ ಉಳಿಯದೆ ಅನಿವಾರ್ಯವ
ಆಗಿರುತ್ತವೆ. ಒಬ್ಬ ವ್ಯಕ್ತಿ ಧರ್ಮದ ಅತ್ಯಂತ ಪ್ರಧಾನ ಪ್ರಾಯೋಗಿಕ ಆದೇಶಗಳನ್ನೇ ಪಾಲಿಸ
ಬಿಡುವಷ್ಟರ ಮಟ್ಟಿಗೆ ಧರ್ಮದಿಂದ ದೂರ ಸರಿದರೆ ಅಥವಾ ಶರೀಅತ್‌ನ ಕಾನೂ
ಗಳನ್ನೇ ಅವನು ರದ್ದುಪಡಿಸಲಾರಂಭಿಸಿದರೆ, ಅಂಥವನು ಖಿಲಾಫತ್‌ನ ನೈಜ ಗುರಿಗೆ ನಿಕ
ನಾಗಿರುವನೆಂದಾಗಲೀ, ಖಿಲಾಫತ್‌ನ ಉದ್ದೇಶಗಳ ಬಗ್ಗೆ ಅವನಲ್ಲಿ ಪ್ರಾಮಾಣಿಕವಾದ ನ
ಇದೆ ಎಂಬುದನ್ನಾಗಲೀ ನಿರೀಕ್ಷಿಸಲು ಹೇಗೆ ತಾನೇ ಸಾಧ್ಯ? ಅವನು ಆರ್ಥಿಕವಾಗಿ ಏನೋ
ದೇಶವನ್ನು ಭಾರೀ ಅಭಿವೃದ್ಧಿಗೊಳಿಸಿರಬಹುದು ಅಥವಾ ರಾಜಕೀಯವಾಗಿ ಅವನು
ರಾಷ್ಟ್ರವನ್ನು ಜಗತ್ತಿನಲ್ಲೇ ಅತ್ಯಂತ ಶಕ್ತ ರಾಷ್ಟ್ರವಾಗಿ ಬೆಳೆಸಿರಬಹುದು. ಆದರೆ ತನ್ನ ದೇಶವನ
ದೇವಭಕ್ತಿಯ ತೊಟ್ಟಿಲಾಗಿ, ಒಳಿತು ಮತ್ತು ಕಲ್ಯಾಣಗಳ ಕೇಂದ್ರವಾಗಿ ಮಾರ್ಪಡಿಸಲು ಮಾ
ಅವನಿಗೆ ಖಂಡಿತ ಸಾಧ್ಯವಾಗದು. ಅವನ ಆಳ್ವಿಕೆಯಲ್ಲಿ ಸಾಮಾನ್ಯ ನಾಗರಿಕರು ನಮಾಝನ
ಸಂಸ್ಥಾಪಿಸುವವರಾಗಿ, ಝಕಾತ್ ಕೊಡುವವರಾಗಿ, ಒಳಿತನ್ನು ಆದೇಶಿಸುವ ಮತ್ತು ಕೆಡುಕನ
ತಡೆಯುವವರಾಗಿ ಬೆಳೆಯಲು ಸಾಧ್ಯವಾಗದು. ಹೀಗಿರುವಾಗ ಇಂಥ ವ್ಯಕ್ತಿಯನ್ನು ಇಸ್ಲಾಮಿ
ಸಾಮೂಹಿಕ ವ್ಯವಸ್ಥೆಯ ನೇತಾರನಾಗಿ ಮುಂದುವರಿಯಲು ಬಿಡುವುದೆಂದರೆ, ದೇಶ
ಶಿಸ್ತು ಮತ್ತು ಸುವ್ಯವಸ್ಥೆ ಪಾಲಿಸುವ ಹೊಣೆಯನ್ನು ಕಳ್ಳಕಾಕರಿಗೆ, ದರೋಡೆಕೋರರಿಗೆ ವಹಿ
ಕೊಟ್ಟಂತೆ ಆಗುವುದು.

## ನಾಗರಿಕತೆಯ ವಿಕಾಸದ ಪರಿಣಾಮಗಳು

ಒಂದು ಸಾಮ್ರಾಜ್ಯದ ಆಡಳಿತಗಾರನನ್ನು ಯಾವ ಪರಿಸ್ಥಿತಿಯಲ್ಲಿ ಮತ್ತು ಯಾ
ವಿಧಾನದಿಂದ ಉಚ್ಚಾಟಿಸಬೇಕು? ಇದು ರಾಜಕೀಯ ವ್ಯವಸ್ಥೆಗೆ ಸಂಬಂಧಿಸಿದ ಒಂದ
ಸಮಸ್ಯೆಯಾಗಿದೆ. ಯಾವುದೇ ರಾಜಕೀಯ ವ್ಯವಸ್ಥೆಯ ಹಲವು ನೀತಿ-ನಿಯಮಗಳ
ಬಹುಮಟ್ಟಿಗೆ ಸಾಮಾಜಿಕ ಮತ್ತು ನಾಗರಿಕ ಪರಿಸ್ಥಿತಿಗಳನ್ನು ಅವಲಂಬಿಸಿಕೊಂಡಿರುತ್ತವ
ಆದ್ದರಿಂದ ಅವು ಎಲ್ಲ ಕಾಲಗಳಲ್ಲೂ ಏಕರೂಪದಲ್ಲಿರುವುದಿಲ್ಲ. ಒಂದು ದೇಶದ ನಾಗರಿಕ

ಪ್ರಾಥಮಿಕ ಘಟ್ಟದಲ್ಲಿರುವ ತನಕ ಅದರ ನೀತಿ-ನಿಯಮಗಳ ವ್ಯಾಪ್ತಿಯೂ ಬಹಳ ಸೀಮಿತವಾಗಿರುತ್ತದೆ. ಕಾಲ ಕ್ರಮೇಣ ನಾಗರಿಕತೆ ಮುಂದುವರಿದು ಬೆಳೆದಂತೆಲ್ಲಾ ಜೀವನದ ಇತರ ಕ್ಷೇತ್ರಗಳಂತೆ ರಾಜಕೀಯ ಕ್ಷೇತ್ರದ ನೀತಿ ನಿಯಮಗಳೂ ಬದಲಾಗುತ್ತಾ ಹೋಗುತ್ತದೆ. ಅವು ಹೆಚ್ಚೆಚ್ಚು ತತ್ವಬದ್ಧವಾಗುತ್ತಾ, ಪ್ರಬುದ್ಧವಾಗುತ್ತಾ, ವಿಶಾಲವಾಗುತ್ತಾ ಮತ್ತು ಸಂಘಟಿತವಾಗುತ್ತಾ ಹೋಗುತ್ತವೆ.

ಇಸ್ಲಾಮ್ ವಿಶ್ವ ಧರ್ಮವಾಗಿದ್ದು ಒಂದು ಶಾಶ್ವತ ಜೀವನ ವ್ಯವಸ್ಥೆಯಾಗಿದೆ. ಆದ್ದರಿಂದಲೇ ಚಲನೆ ಮತ್ತು ವಿಕಾಸ ಅದರ ಸ್ವಭಾವದಲ್ಲೇ ಇದೆ. ಅದು ನಾಗರಿಕತೆಯ ವಿಕಾಸಕ್ಕೆ ಸಹಕಾರಿಯಾಗಿರುವುದು ಮಾತ್ರವಲ್ಲ ಆ ವಿಕಾಸಕ್ಕೆ ದಾರಿ ತೋರುವ ಮತ್ತು ಅದರ ಮೇಲ್ವಿಚಾರಣೆ ನಡೆಸುವ ಮಾರ್ಗದರ್ಶಿಯೂ ಆಗಿದೆ. ಇದು ಇಸ್ಲಾಮೀ ವ್ಯವಸ್ಥೆಯ ಮೂಲಭೂತ ಕರ್ತವ್ಯಗಳಲ್ಲಿ ಒಂದಾಗಿದೆ. ಅದರ ಈ ಸಾಮರ್ಥ್ಯ ಮತ್ತು ವೈಶಿಷ್ಟ್ಯವು ಅದನ್ನು ಬದಲಾಗುತ್ತಿರುವ ಪರಿಸ್ಥಿತಿ ಮತ್ತು ಬೆಳೆಯುತ್ತಿರುವ ನಾಗರಿಕತೆಯ ಬಗ್ಗೆ ಸದಾ ಜಾಗೃತವಾಗಿದ್ದು ತನ್ನ ರಾಜಕೀಯ ವ್ಯವಸ್ಥೆಯಲ್ಲಿನ ಮೂಲಭೂತ ಹಾಗೂ ತಾತ್ವಿಕ ಸ್ವರೂಪದ್ದಲ್ಲದ ಇತರೆಲ್ಲ ನೀತಿ-ನಿಯಮಗಳಿಗೆ ಅವಶ್ಯಾನುಸಾರ ಹೊಸ ಹೊಸ ರೂಪ ಕೊಡಲು ಪ್ರೇರೇಪಿಸುತ್ತಲೇ ಇರುತ್ತದೆ. ಆದ್ದರಿಂದಲೇ ರಾಜಕೀಯ ನಿಯಮಗಳನ್ನು ಹೊಸ ಕಾಲವು ಒದಗಿಸಿಕೊಟ್ಟಿರುವ ಸೌಲಭ್ಯಗಳಿಗೆ ಹೊಂದಿಸಲು ಮಾಡುವ ಪರಿವರ್ತನೆಗಳು 'ಬಿದ್‌ಅತ್' (ನವೀನಾಚಾರ) ಎನಿಸುವ ಬದಲು ಸಾಕ್ಷಾತ್ 'ಸುನ್ನತ್' ಎನಿಸಿಕೊಳ್ಳುತ್ತದೆ. ಅವು ಇಸ್ಲಾಮಿನ ಮೇರೆಗಳ ಉಲ್ಲಂಘನೆ ಎನಿಸುವ ಬದಲು ಸಾಕ್ಷಾತ್ ಇಸ್ಲಾಮಿನ ಬೇಡಿಕೆ ಎನಿಸಿಕೊಳ್ಳುವುದು.

'ಖಲೀಫಾರ ಉಚ್ಚಾಟನೆ'ಯ ವಿಷಯವೂ ಇದೇ ಸಾಲಿಗೆ ಸೇರಿದೆ. ಏಕೆಂದರೆ ಒಬ್ಬ ಖಲೀಫನನ್ನು ಎಂಥ ಪರಿಸ್ಥಿತಿಗಳು ಉದ್ಭವಿಸುವ ತನಕ ಆ ಪದವಿಯಲ್ಲಿ ಮುಂದುವರಿಯಲು ಬಿಡಬೇಕು, ಯಾವಾಗ ಮತ್ತು ಯಾವ ವಿಧಾನದಿಂದ ಅವನನ್ನು ಪದಚ್ಯುತಗೊಳಿಸಬೇಕು ಎಂಬುದು ಕೂಡಾ, ನಾಗರಿಕತೆಯ ಬೆಳವಣಿಗೆಗಳನ್ನು ಮತ್ತು ಆಯಾ ಕಾಲದ ಬೇಡಿಕೆಗಳನ್ನು ಅವಲಂಬಿಸಿ ರೂಪುಗೊಳ್ಳುವ ರಾಜಕೀಯದ ನೀತಿ ನಿಯಮಗಳಿಗೆ ಸಂಬಂಧಿಸಿದ ವಿಷಯವಾಗಿದೆ. ಇವು ಯಾವ ರೀತಿಯಲ್ಲೂ, ಯಾವ ಕಾರಣಕ್ಕೂ ಬದಲಾಯಿಸಲು ಸಾಧ್ಯವಿಲ್ಲದಂತಹ ಧರ್ಮದ ಮೂಲಭೂತ ತತ್ವಾದರ್ಶಗಳಿಗೆ ಸಂಬಂಧಿಸಿದ ವಿಷಯಗಳಲ್ಲ. ಇಂದು 13 ಶತಮಾನಗಳ ಹಿಂದಿನ ಸ್ಥಿತಿಗೆ ಹೋಲಿಸಿದರೆ ಜಗತ್ತಿನ ನಾಗರಿಕ ಮತ್ತು ಸಾಮಾಜಿಕ ಅವಸ್ಥೆಯು ಸಾಕಷ್ಟು ಬದಲಾಗಿದ್ದು, ಗಣನೀಯವಾಗಿ ವಿಕಾಸಗೊಂಡಿದ್ದು ಸರಕಾರಗಳ ಬದಲಾವಣೆಗೆ ಬಹಳ ಸರಳ ಮಾರ್ಗಗಳು ಪರಿಚಿತವಾಗಿವೆ. ಆದ್ದರಿಂದ ಈಗಿನ ಬದಲಾದ ಪರಿಸ್ಥಿತಿಯಲ್ಲೂ, ಖಲೀಫನ ಉಚ್ಚಾಟನೆಗೆ ಇರುವ ಅವಕಾಶಗಳನ್ನು ಈ ಮೊದಲು ಪ್ರಸ್ತಾಪಿಸಲಾದ ಪ್ರಥಮ ಮೂರು ಸನ್ನಿವೇಶಗಳಿಗೆ ಹಾಗೂ ವಿಧಾನಗಳಿಗೆ ಸೀಮಿತವಾಗಿಡಬೇಕೇ ಅಥವಾ ಅಧಃಪತನದ ಇನ್ನುಳಿದ ಮೂರು ಸನ್ನಿವೇಶಗಳಲ್ಲೂ ಈ ಮಾರ್ಗವನ್ನು ಅನುಸರಿಸಬಹುದೇ ಎಂಬ ಪ್ರಶ್ನೆ ಉದ್ಭವಿಸುತ್ತದೆ.

ನಿಜವಾಗಿ ಈ ಪ್ರಶ್ನೆಯ ಉತ್ತರವು ಜನರ ಜೀವ, ಸೊತ್ತು ಮತ್ತು ಅವರ ಹಕ್ಕುಗಳ ಸಂರಕ್ಷಣೆ ಎಂಬುದು ಇಸ್ಲಾಮೀ ರಾಷ್ಟ್ರದ ಮೂಲ ಉದ್ದೇಶಗಳಲ್ಲಿ ಒಳಗೊಂಡಿದೆಯೇ? ಆಳುವ ವ್ಯಕ್ತಿಯ ವ್ಯಕ್ತಿತ್ವ, ಚಾರಿತ್ರ್ಯ ಮತ್ತು ಧರ್ಮದ ಬಗ್ಗೆ ಅವನ ವರ್ತನೆಯು ಜನತೆಯ ಮನಸ್ಸಿನ ಮೇಲೆ ಅವರ ಜೀವನಗಳ ಮೇಲೆ ಮತ್ತು ರಾಷ್ಟ್ರದ ಧ್ಯೇಯೋದ್ದೇಶಗಳ ಮೇಲೆ ಏನಾದರೂ ಪರಿಣಾಮ ಬೀರುತ್ತದೆಯೇ? ಎಂಬ ಇನ್ನೊಂದು ಪ್ರಶ್ನೆಯ ಉತ್ತರವನ್ನು ಅವಲಂಬಿಸಿದೆ. ಈ ಎರಡನೆಯ ಪ್ರಶ್ನೆಗೆ 'ಹೌದು' ಎಂಬ ಉತ್ತರ ಮಾತ್ರ ಕೊಡಲು ಸಾಧ್ಯ. ಈ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ಇರಲು ಸಾಧ್ಯವೇ ಇಲ್ಲ. ಈ ಉತ್ತರ ವ್ಯಕ್ತವಾದ ಬಳಿಕ ಮೊದಲ ಪ್ರಶ್ನೆಯ ಉತ್ತರ ಕಂಡು ಕೊಳ್ಳುವುದು ಕಷ್ಟಸಾಧ್ಯವೇನಲ್ಲ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಒಂದು ಇಸ್ಲಾಮೀ ರಾಷ್ಟ್ರದ ಆಡಳಿತಗಾರನು ಜನತೆಯ ಮೇಲೆ ಅಕ್ರಮವೆಸಗಲಾರಂಭಿಸಿದಾಗಲೂ, ಧರ್ಮಕ್ಕೆ ವಿರುದ್ಧವಾದ (ಫಿಸ್ಕ್) ದುಷ್ಟಚಟುವಟಿಕೆಗಳಲ್ಲಿ (ಫುಜೂರ್) ನಿರತನಾದಾಗಲೂ, ಪಾಪ ಕಾರ್ಯಗಳನ್ನು ಆದೇಶಿಸ ತೊಡಗಿದಾಗಲೂ, ಪ್ರಸಕ್ತ ಯುಗದಲ್ಲಿ ಅಸ್ತಿತ್ವದಲ್ಲಿರುವ ಶಾಂತಿಯು ಪ್ರಜಾಸತ್ತಾತ್ಮಕ ವಿಧಾನಗಳ ಮೂಲಕ ಅವನನ್ನು ಅಧಿಕಾರದಿಂದ ಪದಚ್ಯುತಗೊಳಿಸಬಹುದು. ಏಕೆಂದರೆ ಒಬ್ಬ ಆಡಳಿತಗಾರನು ಈ ಬಗೆಯ ದುಷ್ಟತೆಯಲ್ಲಿ ನಿರತನಾದ ಬಳಿಕ ಅವನ ಆಡಳಿತದಲ್ಲಿ ಜನರ ಸೊತ್ತು ವಿತ್ತಗಳು ಮತ್ತವರ ಹಕ್ಕು ಸುರಕ್ಷಿತವಾಗಿರುವವು ಎಂದು ಭಾವಿಸುವುದಾಗಲೀ, ಅವನಿಂದಾಗಿ ಜನತೆಗೆ ದುಷ್ಟತೆ ಮತ್ತು ಚಾರಿತ್ರ್ಯ ಹೀನತೆಯ ಪ್ರೇರೇಪಣೆ ದೊರಕಲಾರದೆಂದು ಆಶಿಸುವುದಾಗಲೀ, ಅವನ ಕಾರಣ ಇಸ್ಲಾಮೀ ರಾಷ್ಟ್ರದ ಪಾವಿತ್ರ್ಯಕ್ಕೆ ಕಳಂಕ ಬರಲಾರದು ಅಥವಾ ಅದರ ಎಲ್ಲ ಧ್ಯೇಯೋದ್ದೇಶಗಳು ಈಡೇರುತ್ತಲಿರುವವು ಎಂದು ನಿರೀಕ್ಷಿಸುವುದಾಗಲೀ ಪರಮ ಮೂರ್ಖತನವೆನಿಸೀತು. ಹೀಗಿರುತ್ತಾ ಇಂಥ ವ್ಯಕ್ತಿಯನ್ನು ಉಚ್ಚಾಟಿಸಿ ಆ ಮೂಲಕ ದೇಶ ಮತ್ತು ಸಮಾಜವನ್ನು ಅವನ ದುಷ್ಟ ಕೈಗಳಿಂದ ರಕ್ಷಿಸಲು ಬೇಕಾದ ಸಾಮರ್ಥ್ಯ ಮತ್ತು ಸೌಕರ್ಯಗಳೂ ಲಭ್ಯವಿರುವಾಗ ಅವನನ್ನು ಖಿಲಾಫತ್ ಪದವಿಯಲ್ಲಿ ಯಥಾ ಪ್ರಕಾರ ಮುಂದುವರಿಯಲು ಬಿಡುವುದರಲ್ಲಿ ಯಾವ ಅರ್ಥವೂ ಇಲ್ಲ. ಖಿಲಾಫತ್ ವ್ಯವಸ್ಥೆಗೆ ಬಹಳ ವ್ಯಕ್ತವಾಗಿ ನಿರಂತರ ಹಾನಿ ಸಂಭವಿಸುತ್ತಿರುವಾಗಲೂ ಇಸ್ಲಾಮೀ ಶರೀಅತ್ ತನ್ನ ಅನುಯಾಯಿಗಳನ್ನು, ಈ ಹಾನಿಗಳನ್ನು ತಪ್ಪಿಸಲು ಶ್ರಮಿಸದಂತೆ ತಡೆಯುತ್ತದೆಂದು ಒಂದು ಕ್ಷಣದ ಮಟ್ಟಿಗಾದರೂ ಊಹಿಸಲು ಸಾಧ್ಯವಿದೆಯೇ?

ಈ ವಿಷಯ ಚರ್ಚಿಸುವಾಗ, ಹಿಂದೆ ಪ್ರಸ್ತಾಪಿಸಲಾಗಿರುವ ಒಬ್ಬ ಖಲೀಫ ನಮಾಝನ್ನು ಬಿಡುವ ತನಕ ಅಥವಾ ಸುವ್ಯಕ್ತ 'ಕುಫ್ರ್'ನಲ್ಲಿ ತೊಡಗುವ ತನಕ ಅವನನ್ನು ಖಿಲಾಫತ್‌ನಿಂದ ಇಳಿಸಲು ಯಾವುದೇ ಕ್ರಮ ಕೈಗೊಳ್ಳಬಾರದು ಎಂಬ ಅರ್ಥದ ಹದೀಸ್‌ಗಳ ಬಗ್ಗೆ ಗೊಂದಲಕ್ಕೊಳಗಾಗಬೇಕಾದ ಅಗತ್ಯವಿಲ್ಲ. ಈ ವಚನಗಳ ಅರ್ಥ ಬದಲಾಗುವುದಿಲ್ಲ. ಆದರೆ ಈ ಆದೇಶಗಳನ್ನು ಯಾವ ಉದ್ದೇಶದಿಂದ ಕೊಡಲಾಗಿದೆ ಎಂಬುದನ್ನು ಸರಿಯಾಗಿ

ಅರ್ಥೈಸಿಕೊಳ್ಳುವ ತನಕ, ಶರೀಅತ್‌ನ ನಿಜವಾದ ದೃಷ್ಟಿಕೋನವನ್ನು ಗ್ರಹಿಸಲು ಸಾಧ್ಯವಾಗದು. ಆದ್ದರಿಂದ ಮೊದಲು ಪ್ರಸ್ತುತ ಆದೇಶಗಳ ಹಿಂದೆ ಅಡಗಿರುವ ಉದ್ದೇಶವನ್ನು ತಿಳಿಯೋಣ.

ಈ ನಿಟ್ಟಿನಲ್ಲಿ ಇಮಾಮ್ ನವವೀ(ರ) ಅವರ ಈ ಕೆಳಗಿನ ಹೇಳಿಕೆಯೇ ಎಲ್ಲವನ್ನೂ ಸ್ಪಷ್ಟಪಡಿಸಲು ಪರ್ಯಾಪ್ತವಿದೆ;

ಒಬ್ಬ ಆಡಳಿತಗಾರನನ್ನು ಕೇವಲ 'ಫಿಸ್ಕ್'ನ ಆಧಾರದಲ್ಲಿ ಉಚ್ಚಾಟಿಸುವಂತಿಲ್ಲ ಎಂಬ ಬಗ್ಗೆ ಅಹ್ಲುಸ್ಸುನ್ನತ್‌ನವರ 'ಇಜ್ಮಾಅ್' (ಒಮ್ಮತ) ಇದೆ... ಇಂಥ ಸಂದರ್ಭದಲ್ಲಿ ಆಡಳಿತಗಾರನನ್ನು ಉಚ್ಚಾಟಿಸಬಾರದೆನ್ನಲು ಅಥವಾ ಅವನ ವಿರುದ್ಧ ಬಂಡಾಯವೇಳಬಾರದು ಎನ್ನಲು ಹಾಗೆ ಮಾಡುವುದರಿಂದ ಸಂಘರ್ಷ, ರಕ್ತಪಾತ, ಕ್ಷೋಭೆ ಮತ್ತು ಅಶಾಂತಿ ಉಂಟಾಗಬಹುದೆಂಬ ಭೀತಿಯೇ ಮುಖ್ಯ ಕಾರಣವಾಗಿದೆ ಎಂದು ವಿದ್ವಾಂಸರ ಅಭಿಪ್ರಾಯ. ಅವರ ಪ್ರಕಾರ, ಈ ರೀತಿ ಅವನ ಉಚ್ಚಾಟನೆಗೆ ಪ್ರಯತ್ನಿಸುವುದರ ಪರಿಣಾಮವಾಗಿ ಉಂಟಾಗುವ ನಷ್ಟವು ಅವನೇ ಖಿಲಾಫತ್ ಪದವಿಯಲ್ಲಿ ಮುಂದುವರಿಯುವುದರಿಂದ ಆಗುವ ಹಾನಿಗಿಂತ ಹೆಚ್ಚಿನದು.

(ಶರಹ್ ಮುಸ್ಲಿಮ್, ಕಿತಾಬುಲ್ ಇಮಾರಃ)

ಇದು ಕರ್ಮ ಭ್ರಷ್ಟ ಆಡಳಿತಗಾರರ ವಿಷಯವಾಯಿತು. ಅಕ್ರಮಿ ಆಡಳಿತಗಾರರ ಬಗ್ಗೆಯೂ ವಿದ್ವಾಂಸರು ಇದೇ ಅಭಿಪ್ರಾಯ ಸೂಚಿಸಿರುವರು. ಇಸ್ಲಾಮಿನ ಬಗ್ಗೆ ಸ್ವಲ್ಪವಾದರೂ ತಿಳುವಳಿಕೆ ಉಳ್ಳವರು, ಭ್ರಷ್ಟ ಹಾಗೂ ಅಕ್ರಮಿ ಆಡಳಿತಗಾರರ ವಿರುದ್ಧವು ಬಂಡಾಯವೇಳಬಾರದೆಂಬ ಆದೇಶಕ್ಕೆ ಪ್ರಸ್ತುತ ಭೀತಿಯ ಹೊರತು ಬೇರಾವುದೇ ಕಾರಣವಿದೆಯೆಂದು ಊಹಿಸಲೂ ಸಾಧ್ಯವಿಲ್ಲ, ಆದ್ದರಿಂದ ಕ್ಷೋಭೆ, ಅಶಾಂತಿ, ರಕ್ತಪಾತ ಮತ್ತು ಅಂತಃಕಲಹಗಳಿಗೆ ಕಾರಣವಾಗಬಹುದೆಂಬ ಸಾಧ್ಯತೆ ಇರುವಲ್ಲಿ ಮಾತ್ರ ಬಂಡಾಯ ನಿಷಿದ್ಧವಾಗಿದ್ದು ಈ ನಿಷೇಧ ಎಲ್ಲ ಕಾಲ ಮತ್ತು ಎಲ್ಲ ಪರಿಸ್ಥಿತಿಗಳಿಗೂ ಕಡ್ಡಾಯವಾಗಿ ಅನ್ವಯಿಸುವಂತಹ, ಪ್ರಶ್ನಾತೀತ ಸ್ವರೂಪದ್ದಲ್ಲ ಎಂಬುದನ್ನು ಒಪ್ಪಬೇಕಾಗುತ್ತದೆ. ಅಂದರೆ ಇಲ್ಲಿ ಶರೀಅತ್‌ನ ದೃಷ್ಟಿಯಲ್ಲಿ ಎರಡು ಅತ್ಯಂತ ಅನಪೇಕ್ಷಿತವಾದ ಕೆಡುಕುಗಳ ಪೈಕಿ ಒಂದನ್ನು ಅನಿವಾರ್ಯವಾಗಿ ಆಯ್ದುಕೊಳ್ಳಬೇಕಾದಂಥ ಧರ್ಮ ಸಂಕಟದ ಸನ್ನಿವೇಶವಿದೆ. ಒಂದೋ, ಆಡಳಿತಗಾರನ ಭ್ರಷ್ಟತೆ ಮತ್ತು ಅಕ್ರಮಗಳನ್ನು ಸಹಿಸಿಕೊಳ್ಳಬೇಕು ಇಲ್ಲವೇ. ಆತನನ್ನು ಬಲಪ್ರಯೋಗದಿಂದ ಉಚ್ಚಾಟಿಸಲು ಪ್ರಯತ್ನಿಸಿ ಅದರ ಪರಿಣಾಮವಾಗಿ ಉಂಟಾಗಬಹುದಾದ ಕ್ಷೋಭೆ ಮತ್ತು ರಕ್ತಪಾತವನ್ನು ಸಹಿಸಿಕೊಳ್ಳಬೇಕು. ಸಹಜವಾಗಿಯೇ ಮೊದಲ ಕೆಡುಕು ಎರಡನೆಯ ಕೆಡುಕಿಗಿಂತ ಸಣ್ಣ ಸ್ವರೂಪದ್ದಾಗಿದ್ದು ಅದರಲ್ಲಿರುವ ನಷ್ಟಗಳು ಎರಡನೆಯ ಮಾರ್ಗದಲ್ಲಿರುವ ನಷ್ಟಗಳಿಗಿಂತ ಕಡಿಮೆ. ಆದ್ದರಿಂದಲೇ ಶರೀಅತ್ ಭಾರವಾದ ಮನಸ್ಸಿನಿಂದ ಮೊದಲನೆಯ ಕೆಡುಕನ್ನು ಸಹಿಸಲು ತೀರ್ಮಾನಿಸಿದೆ. ದುಷ್ಟ ಆಡಳಿತಗಾರನನ್ನು ಉಚ್ಚಾಟಿಸಲು ಪ್ರಯತ್ನಿಸಿ ನಾಡಿನಲ್ಲಿ ಅರಾಜಕತೆ ಮತ್ತು ಮುಸ್ಲಿಮರ ರಕ್ತಪಾತಕ್ಕೆ ದಾರಿ ಮಾಡಿಕೊಡುವುದಕ್ಕಿಂತ ಆ ದುಷ್ಟ ಆಡಳಿತಗಾರನನ್ನು

ಸಹಿಸಿಕೊಳ್ಳುವುದೇ ಉತ್ತಮ ಎಂದು ಸೂಚಿಸಿದೆ. ಆದರೆ 'ವಿಶ್ವಾಸಕ್ಕೆ ಸಂಬಂಧಿಸಿದ ಕುಫ್ರ್' ಅಥವಾ ಬಹಿರಂಗವಾದ 'ಪ್ರಾಯೋಗಿಕ ಕುಫ್ರ್' ಸಂಭವಿಸಿದಾಗ ಶರೀಅತ್‌ನ ನಿಲುವು ಇದಕ್ಕೆ ತೀರಾ ವಿರುದ್ಧವಾಗಿದೆ. ಆಡಳಿತಗಾರನು ಅವನತಿಯ ಈ ಮಟ್ಟಕ್ಕೆ ಇಳಿದಾಗ ಅದರಿಂದ ಖಿಲಾಫತ್‌ನ ಮೂಲ ಉದ್ದೇಶಗಳೇ ಘಾಸಿಗೊಳ್ಳುವುವು. ಮಾತ್ರವಲ್ಲ ನಾಶವಾಗಿ ಬಿಡುವುದರಿಂದ ಮತ್ತು ಈ ವಿನಾಶವು ಮುಸ್ಲಿಮರ ರಕ್ತಪಾತಕ್ಕಿಂತ ಅಥವಾ ಇನ್ನಾವುದೇ ಕೆಡುಕಿಗಿಂತ ಘೋರ ಅಪರಾಧವಾಗಿರುವುದರಿಂದ ಅದು ಯಾವ ಬೆಲೆ ತೆತ್ತಾದರೂ ಅಂಥ ಆಡಳಿತಗಾರನನ್ನು ಇಳಿಸಿ ಬಿಡಲು ಆದೇಶಿಸುತ್ತದೆ. ಈ ಕೆಡುಕು ಶರೀಅತ್‌ನ ದೃಷ್ಟಿಯಲ್ಲಿ ಅಶಾಂತಿ ಮತ್ತು ರಕ್ತಪಾತಕ್ಕಿಂತಲೂ ಹೆಚ್ಚು ಘೋರ ಸ್ವರೂಪದ್ದಾಗಿದೆ. ಆದ್ದರಿಂದಲೇ ಇಂಥ ಪರಿಸ್ಥಿತಿಯಲ್ಲಿ ಅದು ಆಡಳಿತಗಾರನ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಇರುವ ಎಲ್ಲ ನಿಷೇಧ, ವಿರೋಧಗಳನ್ನು ಸಂಪೂರ್ಣ ಹಿಂದೆಗೆದುಕೊಳ್ಳುತ್ತದೆ.

ಇದೀಗ ಕ್ಷೋಭೆ ಮತ್ತು ರಕ್ತಪಾತದ ಭಯದಿಂದ ಮಾತ್ರ ಭ್ರಷ್ಟ ಹಾಗೂ ಅಕ್ರಮಿ ಆಡಳಿತಗಾರರ ವಿರುದ್ಧ ಕ್ರಮ ಕೈಗೊಳ್ಳದಂತೆ ತಡೆಯಲಾಗಿದೆ ಎಂಬುದು ಇಷ್ಟು ಸ್ಪಷ್ಟವಾಗಿ ತಿಳಿದ ಬಳಿಕ, ಇಂಥ ಭೀತಿ ಅಥವಾ ಸಾಧ್ಯತೆಗಳು ಇಲ್ಲದಿರುವಲ್ಲಿ ಪ್ರಸ್ತುತ ನಿಷೇಧವೂ ತನ್ನಿಂತಾನೇ ತೆರವಾಗುತ್ತದೆ ಎಂಬುದನ್ನು ಒಪ್ಪಲೇ ಬೇಕಾಗುತ್ತದೆ. ಅಂದರೆ, ಗೊಂದಲ, ರಕ್ತಪಾತಗಳಿಲ್ಲದೆಯೇ ಒಂದು ಸರಕಾರವನ್ನು ಬದಲಾಯಿಸಲು ಸಾಧ್ಯವಿರುವಲ್ಲಿ ಭ್ರಷ್ಟ ಹಾಗೂ ಅಕ್ರಮಿ ಆಡಳಿತಗಾರರನ್ನು ಅಧಿಕಾರದಲ್ಲಿ ಮುಂದುವರಿಯಲು ಬಿಡುವುದು ಸರಿಯಲ್ಲ. ಇಂಥ ಸಂದರ್ಭದಲ್ಲಿ ಆಡಳಿತಗಾರರನ್ನು ಉಚ್ಚಾಟಿಸಲೇಬೇಕಾದುದು ವಿವೇಕದ ಬೇಡಿಕೆಯಾಗಿರುವಂತೆ, ಶರೀಅತ್‌ನ ಆದೇಶವೂ ಆಗಿದೆ. ಹಾಫಿಝ್ ಇಬ್ನು ಹಜರ್(ರ) ಹೇಳುತ್ತಾರೆ;

ಇಬ್ನುತ್ತೀನ್ ಅವರು ದಾವೂದೀ ಅವರಿಂದ ಉಲ್ಲೇಖಿಸಿರುವಂತೆ, ಅಕ್ರಮಿ ಆಡಳಿತಗಾರರನ್ನು ಯಾವುದೇ ಕ್ಷೋಭೆ ಹಾಗೂ ಇನ್ನಷ್ಟು ದೌರ್ಜನ್ಯ ನಡೆಸದೆ ಉಚ್ಚಾಟಿಸಲು ಸಾಧ್ಯ ಎಂದಾದರೆ, ಅವರನ್ನು ಉಚ್ಚಾಟಿಸಬೇಕಾದುದು ಕಡ್ಡಾಯ (ವಾಜಿಬ್) ಆಗಿದೆ. ಅನ್ಯಥಾ, ಸಹಿಸಿಕೊಳ್ಳಬೇಕಾದುದು ಕಡ್ಡಾಯವಾಗಿದೆ ಎಂದು ವಿದ್ವಾಂಸರು ತೀರ್ಪು (ಫತ್ವಾ) ಕೊಟ್ಟಿದ್ದಾರೆ. (ಫತ್‌ಹುಲ್‌ಬಾರೀ ಭಾಗ-13, ಪುಟ-6)

ಹಾಗೆಯೇ ಇತರ ವಿದ್ವಾಂಸರ ಅಭಿಪ್ರಾಯವೇನೆಂಬುದನ್ನು ಇಮಾಮ್ ನವವಿ(ರ) ಅವರು ಸ್ಪಷ್ಟಪಡಿಸಿದ್ದಾರೆ;

ಇನ್ನು 'ಸಹನೆ ವಹಿಸಿರಿ' ಎಂಬ ಪ್ರವಾದಿವರ್ಯರ(ಸ) ಮಾತಿನ ಬಗ್ಗೆ ಹೇಳುವುದಾದರೆ, ಅದು ಈ ಕ್ರಮದಿಂದ (ಖಲೀಫರ ಉಚ್ಚಾಟನೆಗೆ ಪ್ರಯತ್ನಿಸುವುದರಿಂದ) ರಕ್ತಪಾತ, ಅಶಾಂತಿ ಅಥವಾ ಅಂಥ ಇನ್ನಾವುದಾದರೂ ವಿಪತ್ತು ಉಂಟಾಗುವ ಸಾಧ್ಯತೆಗೆ ಮಾತ್ರ ಸಂಬಂಧಿಸಿದೆ.

(ಶರಹ್ ಮುಸ್ಲಿಮ್, ಕಿತಾಬುಲ್ ಈಮಾನ್)

ಸ್ವಾಭಾವಿಕವಾಗಿ, ಅಕ್ರಮಿ ಹಾಗೂ ಭ್ರಷ್ಟ ಆಡಳಿತಗಾರರ ಉಚ್ಚಾಟನೆಯ ಬಗ್ಗೆ ಇದುವೇ ಬಹುತೇಕ ಎಲ್ಲ ವಿದ್ವಾಂಸರ ಅಭಿಪ್ರಾಯವಾಗಿದೆ. ಇಂದಿಗಿಂತ ಹತ್ತು-ಹನ್ನೆರಡು ಶತಮಾನಗಳ ಹಿಂದೆ ಮಾತ್ರವಲ್ಲ ತೀರಾ ಇತ್ತೀಚಿನ ಕಾಲದವರೆಗೂ, ಯಾವುದೇ ಸರಕಾರವನ್ನು ಬದಲಾಯಿಸುವುದು, ಅಷ್ಟೇ ಏಕೆ ಕೇವಲ ಅದಕ್ಕಾಗಿ ಪ್ರಯತ್ನಿಸುವುದು ಕೂಡಾ ಇಡೀ ರಾಷ್ಟ್ರಕ್ಕೇ ಬೆಂಕಿಕೊಟ್ಟು ಬಿಡುವಂತಹ ಘೋರ ಪರಿಣಾಮಗಳ ಕೃತ್ಯವಾಗಿತ್ತು. ಆದ್ದರಿಂದ ಸ್ವಾಭಾವಿಕವಾಗಿ ಪ್ರವಾದಿ ಮುಹಮ್ಮದ್(ಸ) ಅವರು ಒಬ್ಬ ಆಡಳಿತಗಾರನು ಅಕ್ರಮಿ ಮತ್ತು ಭ್ರಷ್ಟನಾಗಿದ್ದರೂ ಬಹಳ ಸಹನೆ ಸಂಯಮ ಪ್ರದರ್ಶಿಸುವಂತೆ ಆದೇಶಿಸಿದ್ದರು. ಆದರೆ ಇದೀಗ ಪರಿಸ್ಥಿತಿಯು ಭಿನ್ನವಾಗಿರುವುದರಿಂದ ಆ ಆದೇಶದ ಅನುಸರಣೆಗೆ ಸೂಕ್ತವಾದ ಪರಿಸ್ಥಿತಿ ಅಸ್ತಿತ್ವದಲ್ಲಿಲ್ಲ ಎಂಬುದನ್ನು ಅಂಗೀಕರಿಸಬೇಕಾಗುತ್ತದೆ. ಅಂದರೆ ಮತದಾನದ ಮೂಲಕ ಸರಕಾರಗಳನ್ನು ಚುನಾಯಿಸುವ ಅಥವಾ ಉಚ್ಚಾಟಿಸುವ ಶಾಂತಿಯುತ ಪ್ರಜಾಸತ್ತಾತ್ಮಕ ವಿಧಾನವು ಅಸ್ತಿತ್ವದಲ್ಲಿರುವ ಪ್ರಚಲಿತ ಕಾಲದಲ್ಲಿ ಈ ವಿಧಾನವನ್ನೇ ಬಳಸಿಕೊಳ್ಳಬೇಕಾದುದು ಸಾಕ್ಷಾತ್ ಧರ್ಮದ (ಇಸ್ಲಾಮಿನ) ಬೇಡಿಕೆಯಾಗಿದೆ. ಇಂಥ ಸೌಲಭ್ಯಗಳಿರುವಲ್ಲೆಲ್ಲಾ, ಈ ಸೌಲಭ್ಯದ ಪ್ರಯೋಜನ ಪಡೆದುಕೊಳ್ಳಬೇಕಾದುದು ಮುಸ್ಲಿಮ್ ವಿವೇಕವಂತರ ಕರ್ತವ್ಯ.. ಒಬ್ಬ ಖಲೀಫಾ, ಖಿಲಾಫತ್‌ಗೆ ಸಂಬಂಧಿಸಿದ ಹೊಣೆಗಾರಿಕೆಗಳನ್ನು ಈಡೇರಿಸುವಲ್ಲಿ ವಿಫಲನಾದಾಗ ಅವರು ಇದೇ ವಿಧಾನವನ್ನು ಬಳಸಿ ಆತನನ್ನು ಇಳಿಸಿ ಬೇರೊಬ್ಬ ಅರ್ಹ ವ್ಯಕ್ತಿಯನ್ನು ಆ ಪದವಿಗೆ ಆರಿಸಬಹುದು. ಏಕೆಂದರೆ ಈ ವಿಧಾನವನ್ನು ಬಳಸಿ ಸರಕಾರವನ್ನು ಬದಲಿಸುವಾಗ ಕ್ಷೋಭೆ, ಸಂಘರ್ಷ ಅಥವಾ ರಕ್ತಪಾತದ ಯಾವ ಸಾಧ್ಯತೆಗಳೂ ಇರುವುದಿಲ್ಲ, ಇಲ್ಲಿ ಒಂದೋ ಭ್ರಷ್ಟ, ಅಕ್ರಮಿ ಆಡಳಿತಗಾರನನ್ನು ಸಹಿಸಬೇಕು, ಇಲ್ಲವೇ ಅಂತಃಕಲಹ ಹಾಗೂ ರಕ್ತಪಾತವನ್ನು ಎದುರಿಸಬೇಕು ಎಂಬ ಎರಡು ವಿಪತ್ತುಗಳ ಪೈಕಿ ಒಂದನ್ನು ಅನಿವಾರ್ಯವಾಗಿ ಆಯ್ದುಕೊಳ್ಳಬೇಕಾದಂತಹ ಧರ್ಮ ಸಂಕಟಕ್ಕೆ ಆಸ್ಪದವೇ ಇಲ್ಲ, ಆದ್ದರಿಂದ ರಕ್ತಪಾತವನ್ನು ನಿವಾರಿಸಲಿಕ್ಕಾಗಿ ಅಕ್ರಮಿ ಆಡಳಿತಗಾರನನ್ನು ಸಹಿಸಿಕೊಳ್ಳುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಒಬ್ಬ ಖಲೀಫನಿಂದ ಏನಾದರೂ ತಪ್ಪು ಸಂಭವಿಸಿದಾಗ, ಪಾರ್ಲಿಮೆಂಟರಿ ವ್ಯವಸ್ಥೆಯನ್ನು ಬಳಸಿ ಅವನನ್ನು ಕೆಳಗಿಳಿಸಬೇಕು. ಮಾತ್ರವಲ್ಲ, ಅವನಿಂದ ಅಕ್ರಮ ಅಥವಾ ಭ್ರಷ್ಟತೆಯಂಥ ದೊಡ್ಡ ತಪ್ಪುಗಳು ಸಂಭವಿಸದಿದ್ದರೂ, ಆಡಳಿತವು ಅವನ ಕೈಯಲ್ಲೇ ಮುಂದುವರಿಯಬೇಕೇ ಅಥವಾ ಬೇಡವೇ ಎಂಬ ಬಗ್ಗೆ ಸೂಕ್ತ ಕಾಲಾವಧಿಯ ಅಂತರದಲ್ಲಿ ಜನಾಭಿಪ್ರಾಯವನ್ನು ಸಂಗ್ರಹಿಸುವ ವ್ಯವಸ್ಥೆಯನ್ನೂ ಮಾಡಬೇಕಾದ ಅಗತ್ಯವಿದೆ. ಏಕೆಂದರೆ ಅಧಿಕಾರದಲ್ಲಿ ಮುಂದುವರಿಯುತ್ತಿರುವ ವ್ಯಕ್ತಿಯಿಂದ, ಅವನನ್ನು ಪದಚ್ಯುತಗೊಳಿಸಲೇ ಬೇಕಾದಂಥ ದೊಡ್ಡ ತಪ್ಪುಗಳೇನಾದರೂ ಸಂಭವಿಸಿರಲಿ, ಇಲ್ಲದಿರಲಿ, ಈ ಅವಧಿಯಲ್ಲಿ ಆತನಿಗಿಂತ ಹೆಚ್ಚು ಜನಾನುರಾಗವುಳ್ಳ ಹಾಗೂ ಅರ್ಹತೆ, ಪ್ರತಿಭೆ ಮತ್ತು ದಕ್ಷತೆಗಳಲ್ಲಿ ಆತನಿಗಿಂತ

ಹೆಚ್ಚು ಸಮರ್ಥರೆಂದು ಜನರು ನಂಬುವಂತಹ ತಾವು ಖಲೀಫರಾದರೆ ಈಗಿನ ಖಲೀಫನಿಗಿಂತ ಉತ್ತಮವಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸಬಲ್ಲರೆಂದು ಜನರು ನಿರೀಕ್ಷಿಸುವಂತಹ ವ್ಯಕ್ತಿಗಳು ಸಮಾಜದಲ್ಲಿ ಗುರುತಿಸಲ್ಪಟ್ಟಿರುವ ಸಾಧ್ಯತೆಗಳು ಯಾವಾಗಲೂ ಇರುತ್ತವೆ. ಇಂಥ ಪರಿಸ್ಥಿತಿಯಲ್ಲಿ ಸರಕಾರವನ್ನು ಬದಲಿಸದೆ ಇರಲು ಯಾವ ಕಾರಣವೂ ಇಲ್ಲ. ಕೇವಲ ಈಗಾಗಲೇ ಒಬ್ಬನನ್ನು ಖಿಲಾಫತ್ ಪದವಿಯಲ್ಲಿ ಕೂರಿಸಲಾಗಿದೆ ಎಂಬ ಕಾರಣಕ್ಕಾಗಿ ಆತನಿಗಿಂತ ಹೆಚ್ಚು ಅರ್ಹರಾದ ವ್ಯಕ್ತಿಗಳು ಸಿಕ್ಕಾಗ, ಆ ಅರ್ಹ ವ್ಯಕ್ತಿಗಳಿಗೆ ಅಧಿಕಾರ ವರ್ಗಾಯಿಸದಿರುವುದು ಖಂಡಿತ ಸರಿಯಲ್ಲ. ಏಕೆಂದರೆ ಇಲ್ಲಿ ಮಹತ್ವ ಇರುವುದು, ಖಿಲಾಫತ್ ವ್ಯವಸ್ಥೆ ಅದರ ಧ್ಯೇಯೋದ್ದೇಶಗಳು ಮತ್ತು ಅದಕ್ಕೆ ಸಂಬಂಧಿಸಿದ ಯೋಗ್ಯತೆಗಳಿಗೇ ಹೊರತು ಯಾವುದಾದರೂ ವ್ಯಕ್ತಿ ಅಥವಾ ಅವನ ಹಕ್ಕುಗಳಿಗಲ್ಲ.

ಸ್ಪಷ್ಟವಾಗಿ ಹೇಳಬೇಕೆಂದರೆ, ಇಸ್ಲಾಮಿನ ದೃಷ್ಟಿಯಲ್ಲಿ ಆಡಳಿತ ಮತ್ತು ನೇತೃತ್ವಗಳು 'ಹೊಣೆಗಾರಿಕೆ'ಗಳೇ ಹೊರತು 'ಹಕ್ಕು'ಗಳಲ್ಲ. ಆದ್ದರಿಂದ ಒಬ್ಬ ವ್ಯಕ್ತಿಯನ್ನು ಖಿಲಾಫತ್‌ನ ಪದವಿಯಿಂದ ಕೆಳಗಿಳಿಸಿದ ಮಾತ್ರಕ್ಕೆ ಅವನ ಯಾವುದಾದರೂ ಹಕ್ಕನ್ನು ಕಿತ್ತುಕೊಂಡಂತಾಗುವುದಿಲ್ಲ. ಆ ಬಗ್ಗೆ ಅವನು ಕೊರಗಬೇಕಾಗಿಲ್ಲ. ಈ ಕ್ರಿಯೆ ಶರೀಅತ್‌ನ ಅಪೇಕ್ಷೆ ಮತ್ತು ಖಿಲಾಫತ್‌ನ ಧ್ಯೇಯೋದ್ದೇಶಗಳ ಹಿತಾಸಕ್ತಿಯ ದೃಷ್ಟಿಯಿಂದ ಅವನ ಹೆಗಲ ಮೇಲಿಂದ ಹೊಣೆಗಾರಿಕೆಗಳ ಹೊರೆಯನ್ನು ಇಳಿಸಿ ಬೇರೊಬ್ಬನ ಮೇಲೆ ಹೊರಿಸುವ ಕ್ರಿಯೆ ಮಾತ್ರವಾಗಿದೆ.

## ಖಿಲಾಫತ್: ಒಂದು ವಿಶ್ವ ವ್ಯವಸ್ಥೆ

ಖಿಲಾಫತ್ ವ್ಯವಸ್ಥೆಯ ಅಗತ್ಯ, ಮಹತ್ವ, ಸ್ವರೂಪ ಎಲ್ಲವೂ ಮೂಲತಃ ಧಾರ್ಮಿಕವಾಗಿದ್ದು, ಅದು ಸಂಪೂರ್ಣವಾಗಿ ಧಾರ್ಮಿಕ ಪದವಿಯೇ ಆಗಿರುವುದರಿಂದ ಮುಸ್ಲಿಮ್ ಜನವಾಸವುಳ್ಳ ಆದೇಶಗಳು ಎಷ್ಟು ದೂರದವರೆಗೆ ಸ್ಥಾಪಿಸಿದ್ದರೂ. ದಾರುಲ್ ಇಸ್ಲಾಮ್, ಅರ್ಥಾತ್ ಇಸ್ಲಾಮೀ ಸಾಮ್ರಾಜ್ಯದ ಗಡಿಗಳು ಎಷ್ಟೇ ವಿಶಾಲವಾಗಿದ್ದರೂ, ಎಲ್ಲ ಮುಸ್ಲಿಮರ ಖಲೀಫ ಮತ್ತು ಇಮಾಮ್ ಒಬ್ಬನೇ ಆಗಿರಬೇಕು. ಬೇರೆ ಬೇರೆ ಪ್ರದೇಶಗಳಿಗೆ ಬೇರೆ ಬೇರೆ ಇಮಾಮ್ ಅಥವಾ ಖಲೀಫಗಳನ್ನು ನೇಮಿಸುವುದು ಸರಿಯಲ್ಲ.

ಅಲ್ಲಾಮಾ ಮಾವರ್ದೀ ಅವರು ಈ ಕುರಿತು ಹೀಗೆ ಬರೆದಿರುವರು: ಏಕಕಾಲದಲ್ಲಿ ಸಮುದಾಯದೊಳಗೆ ಇಬ್ಬರು ಖಲೀಫರು ಇರುವುದು ಸಮ್ಮತವಲ್ಲ. (ಅಲ್ ಅಹ್ಕಾಮುಸ್ಸುಲ್ತಾನಿಯ್ಯ: ಪುಟ–7)

ಒಬ್ಬಿಬ್ಬರನ್ನು ಬಿಟ್ಟು ಮುಸ್ಲಿಮ್ ಸಮುದಾಯದ ಉಳಿದ ಎಲ್ಲ ವಿದ್ವಾಂಸರು ಈ ಬಗ್ಗೆ ಒಮ್ಮತ ಹೊಂದಿರುವರು. ಇಮಾಮ್ ನವವೀ(ರ) ಅವರು ಹೇಳುತ್ತಾರೆ:

'ದಾರುಲ್ ಇಸ್ಲಾಮ್' ಅರ್ಥಾತ್ ಇಸ್ಲಾಮೀ ಸಾಮ್ರಾಜ್ಯದ ಗಡಿಗಳು ಎಷ್ಟೇ ವಿಶಾಲವಿರಲಿ

ಅಥವಾ ಎಷ್ಟೇ ಸೀಮಿತವಿರಲಿ, ಏಕಕಾಲದಲ್ಲಿ ಇಬ್ಬರು ಖಲೀಫರು ಅಧಿಕಾರದಲ್ಲಿರುವುದು ಸಮ್ಮತವಲ್ಲ. (ಶರಹ್ ಮುಸ್ಲಿಮ್, ಕಿತಾಬುಲ್ ಇಮಾರಃ)

ಈ ನಿಯಮಕ್ಕೆ ಶರೀಅತ್‌ನಲ್ಲಿ ಬಹಳಷ್ಟು ಮಹತ್ವ ಕೊಡಲಾಗಿದೆ. ಒಬ್ಬ ಖಲೀಫನು ಅಧಿಕಾರದಲ್ಲಿರುವಾಗ ಇನ್ನೊಬ್ಬ ವ್ಯಕ್ತಿ ಇನ್ನೊಂದು ಪರ್ಯಾಯ ಖಿಲಾಫತ್‌ಗೆ ಬೈಅತ್ (ಜನಮತ) ತೆಗೆದುಕೊಳ್ಳಲಾರಂಭಿಸಿದರೆ ಅಂಥ ವ್ಯಕ್ತಿ ಶರೀಅತ್‌ನ ದೃಷ್ಟಿಯಲ್ಲಿ ಮರಣದಂಡನೆಗೆ ಅರ್ಹನಾಗುತ್ತಾನೆ. ಈ ಕುರಿತು ಪ್ರವಾದಿ ಮುಹಮ್ಮದ್(ಸ) ಬಹಳ ಸ್ಪಷ್ಟ ಆದೇಶ ಕೊಟ್ಟಿರುವರು:

ಖಿಲಾಫತ್‌ನ ಬೈಅತ್ ಇಬ್ಬರು ವ್ಯಕ್ತಿಗಳ ಕೈಯಲ್ಲಿ ಮಾಡಲ್ಪಟ್ಟರೆ ಆ ಪೈಕಿ ಅನಂತರದ (ಎರಡನೆಯ) ವ್ಯಕ್ತಿಯನ್ನು ಕೊಂದು ಬಿಡಬಹುದು. (ಆತನ ತಥಾಕಥಿತ ಖಿಲಾಫತ್‌ನಿಂದಾಗಿ ಹುಟ್ಟಬಹುದಾದ ಕ್ಷೋಭೆಯನ್ನು ನಿವಾರಿಸಲು ಬೇರೆ ಮಾರ್ಗಗಳಿಲ್ಲದಿದ್ದರೆ.)

(ಮುಸ್ಲಿಮ್, ಕಿತಾಬುಲ್ ಇಮಾರಃ)

ಒಟ್ಟಿನಲ್ಲಿ, ಐಕ್ಯ ಅಥವಾ ಏಕತೆಯು ಇಸ್ಲಾಮೀ ರಾಜಕೀಯ ವ್ಯವಸ್ಥೆಯಲ್ಲಿ ಅತಿ ಹೆಚ್ಚು ಮಹತ್ವವುಳ್ಳ ಒಂದು ನಿಯಮವಾಗಿದೆ. ಅದು ಸಮುದಾಯದಲ್ಲಿ ಏಕಕಾಲದಲ್ಲಿ ಒಂದಕ್ಕಿಂತ ಅಧಿಕ ಸಾಮಾಜಿಕ ವ್ಯವಸ್ಥೆಗಳು ಅಸ್ತಿತ್ವದಲ್ಲಿರುವುದನ್ನು ಉಗ್ರವಾಗಿ ವಿರೋಧಿಸುತ್ತದೆ. ಸ್ವಲ್ಪ ಆಳಕ್ಕೆ ಹೋಗಿ ನೋಡಿದರೆ ಈ ನಿಲುವು ಅನಿವಾರ್ಯ ಎಂಬುದು ಮನವರಿಕೆಯಾಗುತ್ತದೆ. ಇಸ್ಲಾಮೀ ವ್ಯವಸ್ಥೆಯ ಗುಣ, ಸ್ವರೂಪ, ಅದರ ಧ್ಯೇಯ ಮತ್ತು ಖಿಲಾಫತ್ ಸಂಸ್ಥೆಯ ಉದ್ದೇಶಗಳ ದೃಷ್ಟಿಯಿಂದ ಈ ಕ್ರಮ ಅನಿವಾರ್ಯ. ಈ ಹಿಂದೆಯೇ ವಿವರವಾಗಿ ತಿಳಿಸಲಾದಂತೆ ಇಸ್ಲಾಮ್ ತನ್ನ ಅನುಯಾಯಿಗಳಿಗೆ ಖಿಲಾಫತ್ ವ್ಯವಸ್ಥೆಯ ಸ್ಥಾಪನೆಗೆ ಶ್ರಮಿಸಬೇಕೆಂದು ಆದೇಶಿಸಿರುವುದು ಜಗತ್ತಿನ ರಾಜಕೀಯ ಕ್ಷೇತ್ರದಲ್ಲಿ ಇತರರ ಜೊತೆ ಮುಸ್ಲಿಮರೂ ಮೆರೆಯಬೇಕೆಂಬ ಉದ್ದೇಶದಿಂದಲೋ, ಕೆಲವು 'ಸಮರ್ಥ' ವ್ಯಕ್ತಿಗಳಲ್ಲಿರುವ ಅಧಿಕಾರದಾಹ ತಣಿಯಬೇಕೆಂಬ ಉದ್ದೇಶದಿಂದಲೋ ಅಥವಾ ಮುಸ್ಲಿಮರಲ್ಲಿನ ವಿವಿಧ ರಾಷ್ಟ್ರ ಮತ್ತು ಜನಾಂಗಗಳಿಗೆ ತಮ್ಮ ಕೀರ್ತಿ ಧ್ವಜ ಹಾರಿಸುವ ಅವಕಾಶ ಕೊಡಬೇಕೆಂಬ ದೃಷ್ಟಿಯಿಂದಲೋ ಸರ್ವಥಾ ಅಲ್ಲ. ಇದಕ್ಕೆ ತದ್ವಿರುದ್ಧವಾಗಿ, ಸ್ವತಃ ಇಸ್ಲಾಮೀ ವ್ಯವಸ್ಥೆಯನ್ನು ಆಳುವ ಸ್ಥಾನದಲ್ಲಿ ಕೂರಿಸುವುದು ಮತ್ತು ಆ ಮೂಲಕ ಮನುಷ್ಯ ಜೀವನದ ಎಲ್ಲ ಕ್ಷೇತ್ರಗಳ ಮೇಲೆ ಇಸ್ಲಾಮೀ ನಿಯಮಗಳ ಅನುಷ್ಠಾನಕ್ಕೆ ಇಸ್ಲಾಮಿನ ಸಂದೇಶ ಮತ್ತು ಚಟುವಟಿಕೆಯನ್ನು ಲೋಕದಾದ್ಯಂತ ವ್ಯಾಪಿಸುವುದು ಅದರ ಅನುಯಾಯಿ ಸಮುದಾಯವನ್ನು ಅವರ ಶತ್ರುಗಳಿಂದ ರಕ್ಷಿಸುವುದು ಮತ್ತು ಇಸ್ಲಾಮಿನ ಪ್ರಭಾವ ವಲಯವನ್ನು ವಿಸ್ತರಿಸುವುದೇ ಖಿಲಾಫತ್ ಸ್ಥಾಪನೆಗೆ ಶ್ರಮಿಸಬೇಕೆಂದು ಆದೇಶಿಸಿರುವುದರ ಉದ್ದೇಶವಾಗಿದೆ.

ಹೀಗಿರುತ್ತಾ, ಸಂಪೂರ್ಣ ಮುಸ್ಲಿಮ್ ಸಮುದಾಯವು ಒಂದು ಗುಂಪಾಗಿ, ಒಂದು ಜನಾಂಗವಾಗಿ, ಒಂದು ಸಂಘಟಿತ ರಾಜಕೀಯ ಶಕ್ತಿಯಾಗಿ ನಿಲ್ಲುವ ಬದಲು ವಿವಿಧ

ರಾಜಕೀಯ ಬಣಗಳಲ್ಲಿ ಹಂಚಿಹೋದರೆ ದಾರುಲ್ ಇಸ್ಲಾಮ್ ಅಥವಾ ಇಸ್ಲಾಮೀ ಸಾಮ್ರಾಜ್ಯವೆಂಬುದು ಹಲವು ವಿಚ್ಛಿನ್ನ ರಾಷ್ಟ್ರ ಮತ್ತು ಸರಕಾರಗಳಾಗಿ ವಿಚ್ಛಿದ್ರವಾಗುವುದು ಖಂಡಿತ. ಹೀಗೆ ಆಗಿ ಬಿಟ್ಟರೆ ಇಸ್ಲಾಮ್ ಬಲಗೊಳ್ಳುವ ಬದಲು ದುರ್ಬಲಗೊಳ್ಳುತ್ತದೆ. ಇದು ಈ ಸಮುದಾಯ ಒಂದೆಂಬ ವಾಸ್ತವಿಕತೆಯನ್ನು ಅಲ್ಲಗಳೆಯುವ ಪ್ರಕ್ರಿಯೆಯಾಗುತ್ತದೆ. ಕೇವಲ 'ಅಲ್ಲಾಹನ ಪಾಶ'ಕ್ಕೆ ಮಾತ್ರ ನಿಷ್ಠವಾಗಿದ್ದು, ಅದರ ಆಧಾರದಲ್ಲಿ ಒಂದಾಗಿ ಉಳಿಯಬೇಕಾಗಿದ್ದ ಸಮುದಾಯ, ಇದರ ಹೊರತಾಗಿ ಇತರ ಹಲವು ಬುನಾದಿಗಳ ಮೇಲೆ, ಇತರ ಅನೇಕ ಸಂಬಂಧಗಳ ಆಧಾರದಲ್ಲಿ ಹಲವು 'ಐಕ್ಯ'ಗಳನ್ನು ಸ್ಥಾಪಿಸಿದರೆ ಅದು ಈ ಸಮುದಾಯದಲ್ಲಿ ಬಿರುಕು ಉಂಟಾಗಿರುವುದರ ಸಂಕೇತವೆನಿಸುತ್ತದೆ. ಇಂಥ ಒಡೆದ ಮನೆ 'ಕುಫ್ರ್' (ದೇವಧಿಕ್ಕಾರ) ಮತ್ತು ಪಥಭ್ರಷ್ಟತೆಯ ಪ್ರಹಾರಗಳನ್ನು ಎದುರಿಸುವ ತನ್ನ ಮೂಲ ಕರ್ತವ್ಯವನ್ನು ಪಾಲಿಸುವಲ್ಲಿ ವಿಫಲವಾಗುವುದು ಖಚಿತ.

ಈ ರೀತಿಯ ಅವಸ್ಥೆಯು ಖಿಲಾಫತ್‌ನ ಸ್ಥಾಪನೆಯ ಹಿಂದಿರುವ ಮೂಲ ಉದ್ದೇಶಗಳಿಗೇ ಅಸಾಮಾನ್ಯ ಆಘಾತವನ್ನುಂಟು ಮಾಡುತ್ತದೆ. ಆದ್ದರಿಂದಲೇ ಇಸ್ಲಾಮ್ ಧರ್ಮವು ಮುಸ್ಲಿಮ್ ಜಗತ್ತು ಒಂದು ಸಂಪೂರ್ಣ ಏಕ ರಾಷ್ಟ್ರ ಆಗುವ ಬದಲು ಹಲವು ರಾಷ್ಟ್ರಗಳಾಗಿ ವಿಂಗಡಿಸಲ್ಪಡುವುದನ್ನು ಅಥವಾ ಕಾಮನ್‌ವೆಲ್ತ್ ಮಾದರಿಯಲ್ಲಿ ಹಲವು ರಾಷ್ಟ್ರಗಳ ಸೀಮಿತ ಸ್ವರೂಪದ ಒಕ್ಕೂಟವಾಗುವುದನ್ನು ಕೂಡಾ ಅನುಮತಿಸಿಲ್ಲ. ಇದಕ್ಕೆ ತದ್ವಿರುದ್ಧವಾಗಿ ಅದು, ಒಂದೇ ಸಮಾನ ಧ್ಯೇಯವುಳ್ಳ ಈ ಸಮುದಾಯ ರಾಜಕೀಯವಾಗಿಯೂ ಸದಾ ಒಂದೇ ಸಂಘಟಿತ ಸಮುದಾಯವಾಗಿ, ಅವಿಚ್ಛಿನ್ನ ಏಕ ರಾಷ್ಟ್ರವಾಗಿ ಉಳಿಯಬೇಕೆಂದು ಆದೇಶಿಸುತ್ತದೆ.

ಸಂಪೂರ್ಣ ಸಮುದಾಯವು ಇತರ ಕ್ಷೇತ್ರಗಳಂತೆ ರಾಜಕೀಯ ಕ್ಷೇತ್ರದಲ್ಲೂ ಒಂದೇ ಸಮುದಾಯವಾಗಿ, ಒಂದೇ ಜನಾಂಗವಾಗಿ ಉಳಿಯುವ ಆಡಳಿತಾತ್ಮಕ ಸ್ವರೂಪ ಏನಾಗಿರಬೇಕು? ಅದು ಸಂಯುಕ್ತ (United) ಸ್ವರೂಪದ ಆಡಳಿತವಾಗಿರಬೇಕೋ ಅಥವಾ ಒಕ್ಕೂಟ (Federal) ಸ್ವರೂಪದ ಆಡಳಿತವಾಗಿರಬೇಕೋ ಎಂಬ ಬಗ್ಗೆ ಈಗ ನಾವು ಗಮನಹರಿಸೋಣ.

ಈ ವಿಷಯದಲ್ಲಿ ನಾವು ಧರ್ಮದ ಸಾಮಾನ್ಯ ಸ್ವರೂಪ, ಸ್ವಭಾವ, ಅದರ ಸಾಮಾಜಿಕ ಆದೇಶಗಳ ದಿಕ್ಕು, ಖಿಲಾಫತ್‌ನ ಉದ್ದೇಶಗಳ ಹಿತಾಸಕ್ತಿ ಮತ್ತು ಪ್ರವಾದಿ ಮುಹಮ್ಮದ್‌ರ(ಸ) ಸಮೀಪ ಕಾಲದ ಇತಿಹಾಸವನ್ನು ನೋಡಿದರೆ ಇವೆಲ್ಲವೂ, ಸಂಯುಕ್ತ ಸ್ವರೂಪದ ಆಡಳಿತವನ್ನೇ ಸಮರ್ಥಿಸುತ್ತವೆ. ಆದರೆ ಈ 'ಸಮರ್ಥನೆ'ಯ ಮುಂದೆ ನಾವು, ಆಗ ಎಲ್ಲ ಮುಸ್ಲಿಮ್ ಪ್ರದೇಶಗಳೂ, ಭೌಗೋಳಿಕವಾಗಿ ಪರಸ್ಪರ ಅಂಟಿಕೊಂಡಿದ್ದು, ಆ ಪ್ರದೇಶಗಳ ರಾಜಕೀಯ ಪ್ರಭುತ್ವವು ಮುಸ್ಲಿಮರ ಕೈಯಲ್ಲೇ ಇತ್ತು ಎಂಬುದನ್ನು ಮತ್ತು ಭೌಗೋಳಿಕವಾಗಿ ಮುಸ್ಲಿಮ್ ರಾಷ್ಟ್ರಗಳ ನಡುವೆ ಅಂತರವಿದ್ದಲ್ಲಿಯೂ, ಅವರನ್ನು ಒಂದೇ ಆಡಳಿತದಡಿಯಲ್ಲಿ ಆಳಲು

ಡೆತಡೆ ಇರಲಿಲ್ಲ ಎಂಬ ಅಂಶವನ್ನು ಕಡೆಗಣಿಸುವಂತಿಲ್ಲ.

ಅಂಥ ಸನ್ನಿವೇಶದಲ್ಲಿ ಯಾವುದು ಪ್ರಾಯೋಗಿಕವಾಗಿತ್ತೋ ಅದುವೇ ಅದಕ್ಕೆ ವಿರುದ್ಧವಾದ ಸನ್ನಿವೇಶದಲ್ಲಿ ಪ್ರಾಯೋಗಿಕವಾಗಿರಬೇಕಾಗಿಲ್ಲ. ಅಂದರೆ ಪರಿಸ್ಥಿತಿಯು ಪ್ರಸ್ತುತ ಸನ್ನಿವೇಶಕ್ಕೆ ತದ್ವಿರುದ್ಧವಾಗಿದ್ದು, ಮುಸ್ಲಿಮ್ ಬಾಹುಳ್ಯದ ಪ್ರದೇಶಗಳು ಭೌಗೋಳಿಕವಾಗಿ ಪರಸ್ಪರರಿಗೆ ಅಂಟಿ ಕೊಂಡಿರದೆ, ಅವುಗಳ ಮಧ್ಯೆ ಮುಸ್ಲಿಮ್ ರಾಷ್ಟ್ರಗಳ ಸಂಯುಕ್ತ ಇಸ್ಲಾಮೀ ಅಧಿಕಾರಕ್ಕೆ ಅಡೆತಡೆಗಳನ್ನು ನಿರ್ಮಿಸಬಲ್ಲ, ಪ್ರತಿಕೂಲ ಮುಸ್ಲಿಮೇತರ ರಾಷ್ಟ್ರಗಳಿದ್ದರೆ ಅಥವಾ ರಾಷ್ಟ್ರಗಳೆಲ್ಲಾ ಭೌಗೋಳಿಕವಾಗಿ ನಿಕಟವಾಗಿದ್ದರೂ ಆ ಪೈಕಿ ಕೆಲವು ದೇಶಗಳಲ್ಲಿ ಮುಸ್ಲಿಮ್ ಬಾಹುಳ್ಯದ ಹೊರತಾಗಿಯೂ ಮುಸ್ಲಿಮೇತರ ಸರಕಾರಗಳ ಅಧೀನದಲ್ಲಿರುವುದರಿಂದ ಪ್ರಯೋಗಿಕವಾಗಿ ಸ್ವತಂತ್ರ ಮುಸ್ಲಿಮ್ ರಾಷ್ಟ್ರಗಳ ಮಧ್ಯೆ ಭೌಗೋಳಿಕ ಅಂತರ ನಿರ್ಮಿಸಿದ್ದರೆ ಅಂತಹ ಪರಿಸ್ಥಿತಿಯಲ್ಲಿ ಸಂಯುಕ್ತ ಆಡಳಿತವನ್ನು ಅನಿವಾರ್ಯವೆಂದು ಭಾವಿಸಬೇಕಾಗಿಲ್ಲ. ಪ್ರಯೋಗಿಕತೆಯ ದೃಷ್ಟಿಯಿಂದ ಮಾತ್ರವಲ್ಲ ಶರೀಅತ್‌ನಲ್ಲೇ ಇರುವ ಅವಕಾಶಗಳ ದೃಷ್ಟಿಯಿಂದಲೂ ಸಂಯುಕ್ತ ಆಡಳಿತದ ಅನಿವಾರ್ಯತೆಯಿಂದ ನಾವು ಮುಕ್ತರಾಗಬಹುದು.

'ಅಬ್ದುಲ್ ಕೈಸ್' ಎಂಬ ಗೋತ್ರದ ಜನರು ಇಸ್ಲಾಮ್ ಧರ್ಮ ಸ್ವೀಕರಿಸಿದರು. ಅವರ ಒಂದು ನಿಯೋಗವು ಪ್ರವಾದಿ ಮುಹಮ್ಮದ್(ಸ)ರ ಬಳಿ ಬಂದು ಹೀಗೆಂದಿತು: ಅಲ್ಲಾಹನ ಸಂದೇಶವಾಹಕರೇ! ನಮ್ಮ ದೇಶ ಮತ್ತು ನಿಮ್ಮ ದೇಶದ ಮಧ್ಯೆ ಮಿಝುರ್ ಪ್ರಾಂತ್ಯದ ದೇವಧಿಕ್ಕಾರಿಗಳು ಅಡ್ಡಗೋಡೆಯಂತಿದ್ದಾರೆ. ಆದ್ದರಿಂದ ನಮಗೆ ನಾವಿಚ್ಛಿಸಿದಾಗಲೆಲ್ಲಾ ತಮ್ಮ ಬಳಿ ಬಂದು ಆಗಾಗ ಮಾರ್ಗದರ್ಶನ ಪಡೆಯಲು ಸಾಧ್ಯವಾಗಲಾರದು. ಕೇವಲ ನಾಲ್ಕು ಪವಿತ್ರ ತಿಂಗಳುಗಳಲ್ಲಿ ಮಾತ್ರ ನಮಗೆ ನಿಮ್ಮ ಬಳಿ ಬರಲು ಸಾಧ್ಯ. ಆದ್ದರಿಂದ ನಮಗೆ ಧರ್ಮದ ಕೆಲವು ಅತ್ಯಾವಶ್ಯಕವಾದ ಆದೇಶಗಳನ್ನು ಕಲಿಸಿಕೊಡಿರಿ. ನಾವು ಸ್ವತಃ ಅವುಗಳನ್ನು ಪಾಲಿಸುವೆವು ಮತ್ತು ನಮ್ಮ ನಾಡಿಗೆ ಹೋಗಿ ಅಲ್ಲಿ ಇತರರನ್ನು ಈ ಸಂದೇಶದೆಡೆಗೆ ಆಹ್ವಾನಿಸುವೆವು ಎಂದರು. ಪ್ರತ್ಯುತ್ತರವಾಗಿ ಪ್ರವಾದಿ ಮುಹಮ್ಮದ್(ಸ) ಅವರು, ಆ ನಿಯೋಗಕ್ಕೆ ಕೊಟ್ಟ ಹಲವು ಪ್ರಾಮುಖ್ಯ ಆದೇಶಗಳ ಪೈಕಿ ಒಂದು ಹೀಗಿತ್ತು;

...ನಿಮಗೆ ಸಿಗುವ ಯುದ್ಧ ಸೊತ್ತುಗಳಲ್ಲಿ 1/4 ಅಂಶವನ್ನು (ಕೇಂದ್ರಕ್ಕೆ) ತಲುಪಿಸುತ್ತಾ ಇರಬೇಕು. (ಮುಸ್ಲಿಮ್, ಭಾಗ- 1, ಕಿತಾಬುಲ್ ಈಮಾನ್)

ಸ್ವಲ್ಪ ಚಿಂತಿಸಿ ನೋಡಿ. ಈ ಆದೇಶದಲ್ಲಿ ಅಡಗಿರುವ ಅರ್ಥಗಳೇನು? ಪ್ರವಾದಿ ವರ್ಯರು(ಸ) ಈ ಜನರಿಗೆ ಪ್ರತಿಕೂಲವಾಗಿರುವ ಮಿಝುರ್‌ನ ದೇವಧಿಕ್ಕಾರಿಗಳ ಜೊತೆ ಅವರಿಗೆ ಸಾಧ್ಯವಾದಾಗಲೆಲ್ಲಾ ಜಿಹಾದ್ ಮಾಡುವ ಸ್ವಾತಂತ್ರ್ಯ ಕೊಟ್ಟಿರುವರು. ಅದಕ್ಕಾಗಿ ಅವರು ಆಗಾಗ ಇಸ್ಲಾಮೀ ಆಡಳಿತ ಕೇಂದ್ರದಿಂದ ಅನುಮತಿ ಪಡೆಯಬೇಕಾಗಿಲ್ಲ. ನಿಜವಾಗಿ ಸಂಯುಕ್ತ ಆಡಳಿತದಲ್ಲಾದರೆ ಅವರ ಅಧೀನವಿರುವ ಯಾವುದೇ ಪ್ರಾಂತ್ಯದಲ್ಲಿ ಯಾವುದೇ ರೀತಿಯ ಯುದ್ಧ ಕಾರ್ಯಾಚರಣೆ ನಡೆಯಬೇಕಿದ್ದರೆ ಆ ಪ್ರಾಂತ್ಯದ ಸ್ಥಳೀಯ ಅಧಿಕಾರಿಗಳು

ಆದಕ್ಕೆ ಕೇಂದ್ರ ಆಡಳಿತದಿಂದ ಪೂರ್ವಾನುಮತಿ ಪಡಯಲೇಬೇಕು. ಆದರೆ ಇಲ್ಲಿ ಪ್ರವಾ
ಮುಹಮ್ಮದ್(ಸ) ಅವರು ಅಬ್ದುಲ್ ಕೈಸ್ ಗೋತ್ರದ ಜನರಿಗೆ ಕೇಂದ್ರದ ಅನುವ
ಪಡೆಯದೆಯೇ ಯುದ್ಧ ಕಾರ್ಯಾಚರಣೆಗಳನ್ನು ನಡೆಸಲು ಅನುಮತಿ ಕೊಟ್ಟಿರುವು
ಪರಿಸ್ಥಿತಿಯು ತೀರಾ ಪ್ರತಿಕೂಲವಾಗಿರುವಾಗ ಇಸ್ಲಾಮೀ ಆಡಳಿತವನ್ನು ಸಂಯುಕ್ತ ಆಡಳಿ
ಬದಲು 'ಫೆಡರಲ್ ಆಡಳಿತ'ದ ರೂಪದಲ್ಲೂ ನಡೆಸಬಹುದು ಎಂಬುದನ್ನು ಸೂಚಿಸುತ್ತ
ಇಲ್ಲಿ ಪ್ರವಾದಿ ಮುಹಮ್ಮದ್(ಸ) ಅವರು ಪ್ರಸ್ತುತ ಗೋತ್ರದ ಜನರಿಗೆ ಕೊಟ್ಟಿರುವ
ಅಧಿಕಾರಗಳು, ಅದರಲ್ಲೂ ಯುದ್ಧದಂತಹ ಅತ್ಯಂತ ಮಹತ್ವದ ವಿಷಯಗಳಲ್ಲಿ ಕೊಟ್ಟಿರ
ವ್ಯಾಪಕ ಅಧಿಕಾರಗಳು ಒಂದು ಫೆಡರಲ್ ಆಡಳಿತದಲ್ಲಿ ಪ್ರಾಂತೀಯ ಸರಕಾರಗ
ಇರುವಂತಹ ಅಧಿಕಾರಗಳನ್ನೇ ಹೋಲುತ್ತದೆ.

ಒಟ್ಟಿನಲ್ಲಿ ಜಾಗತಿಕ ಮುಸ್ಲಿಮ್ ಸಮುದಾಯದ ಮಟ್ಟಿಗೆ, ಅಪೇಕ್ಷಿತ ಹಾಗೂ ಅತ್ಯುತ್ತ
ಆಡಳಿತ ಸಂಯುಕ್ತ ಆಡಳಿತವೇ ಆಗಿದೆ. ಆದರೆ ವಿಶೇಷ ಪರಿಸ್ಥಿತಿಗಳು ಮತ್ತು ಹಿತಾಸಕ್ತಿ
ಹಿನ್ನೆಲೆಯಲ್ಲಿ ಫೆಡರಲ್ ಆಡಳಿತ ರಚನೆಗೂ ಅವರಿಗೆ ಅನುಮತಿ ಇದೆ.

# ಸಾಮುದಾಯಿಕ ಛಿದ್ರತೆಯ ಧಾರ್ಮಿಕ ಬೇಡಿಕೆಗಳು

## ಮೂಹಿಕ ವ್ಯವಸ್ಥೆ: ಪುನರ್ ಸ್ಥಾಪನೆಯ ಅಗತ್ಯ

ಮುಸ್ಲಿಮ್ ಸಮುದಾಯಕ್ಕೆ ಒಂದು ಸುಸಂಘಟಿತ ಸಾಮೂಹಿಕ ವ್ಯವಸ್ಥೆ ಎಷ್ಟು ತ್ಯ ಮತ್ತು ಅದರ ಕಾರಣಗಳೇನು ಎಂಬುದನ್ನು ಈಗಾಗಲೇ ವಿವರಿಸಿದೆವು. ಜಗತ್ತಿನಲ್ಲಿ ಾವುದೇ ಜನಾಂಗವು, ಯಾವಾಗಲೂ ತನ್ನ ಅಪೇಕ್ಷಿತ ಸ್ಥಿತಿಯಲ್ಲೇ ಇರುವುದಿಲ್ಲ. ುಸ್ಲಿಮ್ ಸಮಾಜ ಕೂಡಾ ತನ್ನ ಅಪೇಕ್ಷಿತ ಗುಣಕ್ಕೆ ವಿರುದ್ಧವಾಗಿ ಸಾಮೂಹಿಕ ವ್ಯವಸ್ಥೆ ಮತ್ತು ಘಟನೆಯನ್ನು ಕಳೆದುಕೊಂಡು, ಕೇವಲ ವ್ಯಕ್ತಿಗಳ ಗುಂಪಾಗಿ, ಸಂಘಟನೆ ಚಲನೆ ಇಲ್ಲದೆ ಅಸ್ತಿತ್ವದ ಉದ್ದೇಶವನ್ನೇ ಕಳಕೊಂಡಿರುವ ಪರಿಸ್ಥಿತಿಗೆ ತುತ್ತಾಗಬಹುದು. ಸದ್ಯ ಮುಸ್ಲಿಮ್ ುದಾಯ ಅದೇ ಸ್ಥಿತಿಯಲ್ಲಿ ಬಹುಕಾಲದಿಂದ ಸಿಕ್ಕಿಕೊಂಡಿದೆ. ಸದ್ಯ ಈ ಪರಿಸ್ಥಿತಿ ಇಸ್ಲಾಮಿನ ಷ್ಟಿಯಲ್ಲಿ ಅತ್ಯಂತ ಅನಪೇಕ್ಷಿತ, ಅಸಹನೀಯ ಎಂದೆಲ್ಲಾ ಹೇಳುವುದರಿಂದ ಯಾವುದೇ ಯೋಜನವಾಗದು. ಆದ್ದರಿಂದ ಇಂಥ ಪರಿಸ್ಥಿತಿಯನ್ನು ಅಂಗೀಕರಿಸಿಕೊಂಡು, ಮುಸ್ಲಿಮ್ ುದಾಯದ ಸದಸ್ಯರು ಈ ಸನ್ನಿವೇಶದಲ್ಲಿ ಏನು ಮಾಡಬೇಕು ಮತ್ತು ಅವರ ಮುಂದಿನ ಕ್ಷೆ ಏನಾಗಿರಬೇಕು ಎಂಬ ಪ್ರಶ್ನೆಗಳಿಗೆ ಉತ್ತರ ಕಂಡು ಹುಡುಕಬೇಕಾದುದು, ವೈಚಾರಿಕ ಷ್ಟಿಯಿಂದಲೂ, ಪ್ರಾಯೋಗಿಕ ದೃಷ್ಟಿಯಿಂದಲೂ ಬಹಳ ಆವಶ್ಯಕವಾಗಿದೆ.

ಪ್ರಥಮವಾಗಿ ಬುದ್ಧಿಯ ಆಧಾರದಲ್ಲೇ ಈ ಪ್ರಶ್ನೆಗೆ ಉತ್ತರ ಹುಡುಕಲು ುತ್ನಿಸೋಣ. ಈ ಮೊದಲು ಮಂಡಿಸಲಾಗಿರುವ ಎಲ್ಲ ವಾದಗಳನ್ನು ನೋಡಿದರೆ, ್ಯಂತ ಬಲಾಢ್ಯವಾದ ಸುಸಂಘಟಿತ ಹಾಗೂ ಸುಸ್ಥಿರ ಸಾಮೂಹಿಕ ವ್ಯವಸ್ಥೆ ಇಸ್ಲಾಮಿಗೆ ಭಾವಿಕವಾಗಿ ಅಪೇಕ್ಷಿತವಾಗಿರುವುದು ಮಾತ್ರವಲ್ಲದೆ ಪ್ರಾಯೋಗಿಕವಾಗಿ ಅನಿವಾರ್ಯವೂ ದೆ. ಇದಿಲ್ಲದೆ ಮುಸ್ಲಿಮ್ ಸಮುದಾಯ ಮಾದರೀ ಸಮುದಾಯವಾಗುವಂತಿಲ್ಲ, ಲ್ಲದಿದ್ದರೆ ಇಸ್ಲಾಮ್ ಮಾನವ ಕುಲಕ್ಕೆ ಏನನ್ನು ಕೊಡಬಯಸುತ್ತದೋ ಅದನ್ನು ಕೊಡಲು ಧ್ಯವಿಲ್ಲ, ಅದಿಲ್ಲದಿದ್ದರೆ, ಮನುಷ್ಯ ಬದುಕಿನ ಅತ್ಯಂತ ಪ್ರಾಮುಖ್ಯ ರಂಗಗಳ ಬಗ್ಗೆ ಸ್ಲಾಮ್ ಕೊಡುವ ಆದೇಶ, ಮಾರ್ಗದರ್ಶನಗಳು ಕೇವಲ ಪುಸ್ತಕ ಮತ್ತು ಪಠಣಗಳಿಗೆ ಮಿತವಾಗಿ ಬಿಡುತ್ತವೆ. ಪ್ರಾಯೋಗಿಕ ಜಗತ್ತಿನಲ್ಲಿ ಅವುಗಳ ಬಳಕೆ ಅಸಾಧ್ಯವಾಗುತ್ತದೆ. ಈ ತು ವಿವರವಾದ ಸಾಧಾರ ವಿಶ್ಲೇಷಣೆಗಳು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ನಮ್ಮ

ಮುಂದೆ ಬಂದಿವೆ. ಹೀಗಿರುವಾಗ ಮುಸ್ಲಿಮರು ಮಾಡಬೇಕಾದುದೇನು? ಅವರು ಕೇ
ಒಂದು ಜನಜಾತ್ರೆಯಾಗಿ ಮುಂದುವರಿಯುವ ಬದಲು (ಶಿಸ್ತು ಮತ್ತು ಐಕ್ಯದಿಂದ ಬೆಸೆ
ಒಂದು 'ಜಮಾಅತ್' (ಸಂಘಟನೆ) ಆಗಬೇಕು. 'ಅಲ್ ಜಮಾಅತ್' ಎಂದು ಕರೆಯಲ್ಪಡ
ಅರ್ಹವಾಗುವ, ಏಕ ಸ್ವರೂಪ ಮತ್ತು ಏಕ ದಿಕ್ಕುಳ್ಳ, ತಮ್ಮ ಗುರಿಯನ್ನು ಸಾಧಿಸಬಲ್ಲ, ತ
ಉದ್ದೇಶವನ್ನು ಈಡೇರಿಸಬಲ್ಲ ಬಲಾಢ್ಯ ಸಂಘಟನೆಯಾಗಬೇಕು. ಇದುವೇ ಬುದ್ಧಿ ಕೊಡ
ಉತ್ತರ.

ಇನ್ನು ನಾವು ಈ ಕುರಿತು ಶರೀಅತ್‌ನ ಉತ್ತರ ಏನು ಎಂಬುದನ್ನು ನೋಡೋ
ಏಕೆಂದರೆ ನಮ್ಮ ಮಟ್ಟಿಗೆ ಯಾವುದೇ ವಿಷಯದಲ್ಲಿ ಶರೀಅತ್‌ನ ತೀರ್ಮಾನವೇ ಅಂತಿ
ತೀರ್ಮಾನವಾಗಿರುತ್ತದೆ. ಇದಕ್ಕಾಗಿ ನಾವು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮ
(ಸ)ರ ಆದರ್ಶವನ್ನು ನೋಡಿದರೆ ಮೊದಲು ನಮಗೆ ಪವಿತ್ರ ಕುರ್‌ಆನ್‌ನಿಂದ ಈ ಕೆಳ
ಆದೇಶಗಳು ಸಿಗುತ್ತವೆ;

''ಸತ್ಯವಿಶ್ವಾಸಿಗಳೇ!... ನೀವೆಲ್ಲರೂ ಒಟ್ಟಾಗಿ ಅಲ್ಲಾಹನ ಪಾಶವನ್ನು ಭದ್ರವ
ಹಿಡಿಯಿರಿ. ಪ್ರತ್ಯಪ್ರತ್ಯೇಕವಾಗಿ ಇರಬೇಡಿರಿ.'' (ಸೂರಃ ಆಲಿ ಇಮ್ರಾನ್)

''ಸತ್ಯವಿಶ್ವಾಸಿಗಳೇ! ನೀವೆಲ್ಲರೂ ಸಂಪೂರ್ಣವಾಗಿ ಇಸ್ಲಾಮ್(ಧರ್ಮಾನುಸರಣೆ)
ಪ್ರವೇಶಿಸಿರಿ.'' (ಸೂರಃ ಅಲ್‌ಬಕರಃ)

ಈ ಎರಡು ವಾಕ್ಯಗಳ ಪೈಕಿ ಮೊದಲ ವಾಕ್ಯವು ನಾವು ಚರ್ಚೆಗೆತ್ತಿರ
ವಿಷಯದ ಬಗ್ಗೆ ಬಹಳ ಸ್ಪಷ್ಟ ಮಾರ್ಗದರ್ಶನ ಕೊಡುತ್ತದೆ. ಎಲ್ಲ ಮುಸಲ್ಮಾನರೂ ಸ
ಸಂಘಟಿತರಾಗಿ ಒಂದಾಗಿರಬೇಕು. ಯಾವಾಗಲೂ ಅಲ್ಲಾಹನ ಪಾಶ ಅವರನ್ನು ಪರ
ನಿಕಟವಾಗಿಡಬೇಕೆಂಬುದೇ ಈ ವಾಕ್ಯ ನೇರವಾಗಿ ಕೊಡುವ ಆದೇಶ. ಎರಡನೆ ವಾಕ್ಯ
ಪರೋಕ್ಷವಾಗಿ ಇದನ್ನೇ ಆದೇಶಿಸುತ್ತದೆ. ಏಕೆಂದರೆ ಪ್ರತಿಯೊಬ್ಬ ಮುಸ್ಲಿಮನು ತನ
ಇಸ್ಲಾಮಿನ ಅಥವಾ ಅಲ್ಲಾಹನ ಮತ್ತು ಪ್ರವಾದಿಯ(ಸ) ಅನುಸರಣೆಗೆ ಸಂಪೂರ್ಣವ
ಅರ್ಪಿಸಿ ಬಿಟ್ಟ ಬಳಿಕ ಅಂಥ ಮುಸ್ಲಿಮರ ಸಮಾಜವು ಅಸಂಘಟಿತ ಸ್ಥಿತಿಯಲ್ಲಿ ಉಳಿಯ
ಸಾಧ್ಯವೇ ಇಲ್ಲ. ಸಮಾಜವು ಸಂಘಟಿತವಾಗಿ ಬಾಳಬೇಕಾದುದು ಅತ್ಯಗತ್ಯ ಎಂ
ಪ್ರತಿಪಾದಿಸುವ ಹಾಗೂ ಅದಕ್ಕಾಗಿ ನೇತೃತ್ವ, ಅನುಸರಣೆ, ಆಜ್ಞಾಪಾಲನೆ ಮತ್ತಿತರ ಎಲ್ಲ ಅವ
ಆದೇಶಗಳನ್ನು ಸವಿಸ್ತಾರವಾಗಿ ಕೊಟ್ಟಿರುವ ಸತ್ಯ ಧರ್ಮಕ್ಕೆ ಎಲ್ಲ ಮುಸಲ್ಮಾನರೂ ತಮ್ಮ
ಸಂಪೂರ್ಣವಾಗಿ ಅರ್ಪಿಸಿಕೊಂಡರೆ, ಅವರ ಸಮಾಜ ಒಂದು 'ಅಭೇದ್ಯ ಗೋಡೆ'ಯ
ಮಾರ್ಪಡುವುದರಲ್ಲಿ ಸಂದೇಹವಿಲ್ಲ. ಈ ವಾಕ್ಯ ಒಂದೆಡೆ ಸಂಪೂರ್ಣ ಧರ್ಮಾನುಸರ
ಕರೆಕೊಟ್ಟರೆ ಇನ್ನೊಂದೆಡೆ ಪರೋಕ್ಷವಾಗಿ ಎಲ್ಲ ಧರ್ಮಾನುಯಾಯಿಗಳೂ ಸಂಘಟಿತರಾ
ಐಕ್ಯದಲ್ಲಿರಬೇಕೆಂದೂ ಹೇಳುತ್ತದೆ.

ಇವು ಎಲ್ಲ ಕಾಲ, ಪರಿಸ್ಥಿತಿಗಳಿಗೂ ಅನ್ವಯಿಸುವ ಸಾಮಾನ್ಯ ಆದೇಶ

ಯಾವುದಾದರೂ ವಿಶಿಷ್ಟ ಕಾಲ ಅಥವಾ ಪರಿಸ್ಥಿತಿಗೆ ಸೀಮಿತವಲ್ಲ. ಯಾವುದೇ ಕಾಲದಲ್ಲಿ ಜಗತ್ತಿನ ಯಾವುದೇ ಭಾಗದಲ್ಲಿ ಜೀವಿಸುವ ಮುಸ್ಲಿಮರಿಗೆ ಈ ಆದೇಶಗಳು ಮಾತ್ರ ಅನ್ವಯವಾಗುತ್ತವೆ. ಈ ಆದೇಶಗಳು ಕೇವಲ ಸಹಾಬಿಗಳ ಕಾಲಕ್ಕೆ ಮಾತ್ರ ಅನ್ವಯಿಸುತ್ತವೆ ಎನ್ನಲು ಈ ವಾಕ್ಯಗಳಲ್ಲಿ ಅಂಥ ಯಾವ ಸೂಚನೆಯೂ ಇಲ್ಲ. ಆದ್ದರಿಂದ ಇವು ಮುಸ್ಲಿಮ್ ಸಮಾಜ 'ಹಬ್ಲುಲ್ಲಾಹ್'(ಅಲ್ಲಾಹನ ಪಾಶ)ದ ಆಧಾರದಲ್ಲಿ ಅತ್ಯಂತ ಸಂಘಟಿತವಾಗಿದ್ದ ಪ್ರಥಮ ಹಿಜರಿ ಶತಮಾನದ ಮುಸ್ಲಿಮರಿಗೆ ಅನ್ವಯಿಸುವಂತೆಯೇ, ಮುಸ್ಲಿಮ್ ಸಮಾಜವು ವಿಚ್ಛಿದ್ರವಾಗಿರುವ ಇಂದಿನ 14ನೇ ಹಿಜರಿ ಶತಮಾನದ ಮುಸ್ಲಿಮರಿಗೂ ಅನ್ವಯಿಸುತ್ತದೆ. ಮಾತ್ರವಲ್ಲ ಅಂದಿನ ಐಕ್ಯದ ಯುಗಕ್ಕೆ ಹೋಲಿಸಿದರೆ, ಈ ವಾಕ್ಯಗಳು ಇಂದಿನ ವಿಚ್ಛಿದ್ರತೆಯ ಯುಗದಲ್ಲಿರುವ ಮುಸ್ಲಿಮರಿಗೆ ಅಂದಿಗಿಂತ ಹೆಚ್ಚು ವ್ಯಾಪಕವಾಗಿ, ಹೆಚ್ಚು ತೀವ್ರವಾಗಿ, ಹೆಚ್ಚು ಆಳವಾಗಿ ಅನ್ವಯಿಸುತ್ತದೆ. ಏಕೆಂದರೆ ಅವರ ಮಟ್ಟಿಗೆ ಇದು ಕೇವಲ ಒಂದು ಬೋಧನೆಯಾಗಿದ್ದರೆ ಇಂದಿನ ಮುಸ್ಲಿಮರ ಮಟ್ಟಿಗೆ ಇದೊಂದು ತುರ್ತು ಆಜ್ಞೆಯಾಗಿದೆ. ಒಬ್ಬ ಆರೋಗ್ಯವಂತ ವ್ಯಕ್ತಿಗಿಂತ ಒಬ್ಬ ರೋಗಗ್ರಸ್ಥ ವ್ಯಕ್ತಿಗೆ ಆರೋಗ್ಯ ರಕ್ಷಣೆಯ ಬಗೆಗಿನ ಆದೇಶಗಳ ಪಾಲನೆ ಬಹಳ ಹೆಚ್ಚು ಆವಶ್ಯಕವಾಗಿರುತ್ತದೆ.

ಪವಿತ್ರ ಕುರ್‌ಆನ್‌ನ ಬಳಿಕ ಇದೀಗ ಈ ಕುರಿತು ಪ್ರವಾದಿ ಮುಹಮ್ಮದ್(ಸ) ಅವರ ಆದೇಶ ಏನೆಂಬುದನ್ನು ನೋಡೋಣ. ಒಂದು ಸಂದರ್ಭದಲ್ಲಿ ಸಮುದಾಯದ ವಿಚ್ಛಿದ್ರತೆಯ ಬಗ್ಗೆ ನೇರವಾಗಿ ಪ್ರಸ್ತಾಪಿಸುತ್ತಾ ಅವರು ಹೇಳಿದರು:

ನನ್ನ ಅನಂತರ ಬದುಕಿರುವವರು ಈ ಸಮುದಾಯದಲ್ಲಿ ಹಲವು ಬಗೆಯ ಭಿನ್ನಾಭಿಪ್ರಾಯಗಳು ತಲೆಯೆತ್ತುವುದನ್ನು ಕಾಣಲಿರುವರು. ಆಗ ನೀವು ನನ್ನ 'ಸುನ್ನತ್' ಮತ್ತು ನನ್ನ ಅನಂತರದ ಸನ್ಮಾರ್ಗದಲ್ಲಿ ಇರುವ ಖಲೀಫಗಳ 'ಸುನ್ನತ್' ಅನ್ನು ಬಲವಾಗಿ (ಬಿಗಿಯಾಗಿ) ಹಿಡಿಯಿರಿ. (ಅಬೂದಾವೂದ್, ಭಾಗ- 2)

ಇದು ಪ್ರವಾದಿ ಮುಹಮ್ಮದ್(ಸ) ಅವರ ಅತ್ಯಂತ ಅರ್ಥಗರ್ಭಿತ ಹಾಗೂ ತಾತ್ವಿಕ ಬೋಧನೆಗಳಲ್ಲಿ ಒಂದಾಗಿದೆ. ಸಮಾಜದೊಳಗೆ ಯಾವುದೇ ಸಂದರ್ಭದಲ್ಲಿ ಯಾವುದೇ ಸ್ವರೂಪದ ಭಿನ್ನಾಭಿಪ್ರಾಯ ಉಂಟಾದರೂ ನೀವು ಪ್ರವಾದಿಯ ಸುನ್ನತ್ ಮತ್ತು ಅವರ ಬಳಿಕದ 'ಖುಲಫಾವುರ್ರಾಶಿದೀನ್'ಗಳ ಸುನ್ನತ್ತನ್ನು ಬಲವಾಗಿ ಅವಲಂಬಿಸಿಕೊಂಡಿರಬೇಕು. ಅದರ ಹೊರತು ಬೇರಾವುದೇ ರಕ್ಷಣಾ ಮಾರ್ಗ ನಿಮಗಿಲ್ಲ ಎಂದು ಈ ವಚನವು ಪ್ರತಿಯೊಬ್ಬ ಮುಸ್ಲಿಮನನ್ನು ಎಚ್ಚರಿಸುತ್ತದೆ.

ಈ ಹದೀಸ್‌ನಲ್ಲಿ 'ಸುನ್ನತ್' ಎಂಬ ಪದ ಯಾವ ಅರ್ಥದಲ್ಲಿ ಬಳಸಲ್ಪಟ್ಟಿದೆ ಎಂಬುದನ್ನು ತಿಳಿದುಕೊಳ್ಳಬೇಕಾದುದು ಅಗತ್ಯ. ನಿಜವಾಗಿ ಇಲ್ಲಿ ಈ ಪದವು ಕರ್ಮಶಾಸ್ತ್ರದಲ್ಲಿ ಬಳಸಲಾಗುವಂತೆ ಸೀಮಿತ ಅರ್ಥದಲ್ಲಿ ಬಳಸಲ್ಪಟ್ಟಿಲ್ಲ. ಸ್ವತಃ ಈ ಹದೀಸ್‌ನಲ್ಲೇ ಹಾಗೆ ಹೇಳಲು ಬೇಕಾದ ಪುರಾವೆಗಳಿವೆ, ಇದರಲ್ಲಿ 'ಅಲೈಕುಮ್ ಬಿ ಸುನ್ನತೀ' ಎಂದು ಮಾತ್ರ

ಹೇಳದೆ 'ವ ಸುನ್ನತು ಖುಲಫಾಇರ್ರಾಶಿದೀನಲ್ ಮಹ್ದಿಯ್ಯೀನ್' ಎಂದೂ ಹೇಳಲಾಗಿದೆ. ಅಂದರೆ ಭಿನ್ನಾಭಿಪ್ರಾಯಗಳು ತಲೆದೋರಿದಾಗ ಪ್ರವಾದಿಯ(ಸ) ಸುನ್ನತ್‌ನ ಜೊತೆಗೇ ಅವರ ಅನಂತರದ ಖುಲಫಾವುರ್ರಾಶಿದೀನ್‌ರ ಸುನ್ನತ್ ಅನ್ನು ಬಲವಾಗಿ ಅವಲಂಬಿಸಲು ಆಜ್ಞಾಪಿಸಲಾಗಿದೆ. ಸಾಮಾನ್ಯವಾಗಿ ಕರ್ಮಶಾಸ್ತ್ರದಲ್ಲಿ ಸುನ್ನತ್ ಎಂಬ ಪದವನ್ನು ಕೇವಲ ಪ್ರವಾದಿ ಮುಹಮ್ಮದ್(ಸ)ರ ಮಾತು ಅಥವಾ ಕೃತಿಗೆ ಸಂಬಂಧಿಸಿದ ವಿಷಯಗಳಿಗೆ ಮಾತ್ರ ಬಳಸಲಾಗುತ್ತದೆ. ಖುಲಫಾವುರ್ರಾಶಿದೀನ್ ಅಥವಾ ಇತರ ಸಹಾಬಿಗಳ ವಚನ ಅಥವಾ ಕರ್ಮಗಳ ಬಗ್ಗೆ ಹೇಳುವಾಗ ಅದನ್ನು ಮತ್ತು 'ಇಜ್ತಿಹಾದ್'ಗಳನ್ನು ಸುನ್ನತ್ ಎಂದು ಕರೆಯಲಾಗುವುದಿಲ್ಲ, ಆದ್ದರಿಂದ ಇಲ್ಲಿ 'ಸುನ್ನತ್' ಎಂಬ ಪದವನ್ನು ನಿಘಂಟಿನಲ್ಲಿ ಇರುವಂಥ ಅರ್ಥದಲ್ಲೇ ಬಳಸಲಾಗಿದೆ ಎಂಬುದನ್ನು ಒಪ್ಪಬೇಕಾಗುತ್ತದೆ. ಅಂದರೆ, ಇಲ್ಲಿ 'ಸುನ್ನತ್' ಪದವನ್ನು ನೀತಿ, ನಿಲುವು, ವಿಧಾನ, ಕ್ರಮ ಇತ್ಯಾದಿ ಅರ್ಥದಲ್ಲಿ ಉಪಯೋಗಿಸಲಾಗಿದೆ. ಇತರ ಹಲವಾರು ಹದೀಸ್‌ಗಳಲ್ಲೂ ಈ ಪದವನ್ನು ಇದೇ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ಪ್ರವಾದಿ ಮುಹಮ್ಮದ್(ಸ) ಅವರು ನಿಜವಾಗಿ, ಹೆಚ್ಚಿನೆಲ್ಲಾ ಸಂದರ್ಭಗಳಲ್ಲಿ ಈ ಪದವನ್ನು ಈ ವಿಶಾಲ ಅರ್ಥದಲ್ಲೇ ಬಳಸಿದ್ದರು. ಈ ಅರ್ಥದಂತೆ, ಪ್ರವಾದಿ ಮುಹಮ್ಮದ್(ಸ) ಅವರು ಪ್ರವಾದಿಯೆಂಬ ನೆಲೆಯಲ್ಲಿ ಹಾಗೂ ಖುಲಫಾವುರ್ರಾಶಿದೀನ್‌ಗಳು ಖುಲಫಾವುರ್ರಾಶಿದೀನ್ ಗಳೆಂಬ ನೆಲೆಯಲ್ಲಿ ಜೀವನದ ವಿವಿಧ ಹಂತಗಳಲ್ಲಿ ತಳೆದ ನಿಲುವುಗಳೆಲ್ಲಾ ಪ್ರವಾದಿ ವರ್ಯರ(ಸ) ಖುಲಫಾವುರ್ರಾಶಿದೀನ್‌ಗಳ 'ಸುನ್ನತ್'ಗಳೆನಿಸಿ ಕೊಳ್ಳುತ್ತವೆ. ಇವು ಆರಾಧನೆ, ಸಾಮಾಜಿಕ ಶಿಷ್ಟಾಚಾರಗಳು, ನಾಗರಿಕ ಅಥವಾ ಪೌರನೀತಿ ನಿಯಮಗಳು, ರಾಜಕೀಯ ಆಡಳಿತ ಮತ್ತಿತರ ಎಲ್ಲ ವಿಷಯಗಳಿಗೂ ಅನ್ವಯಿಸುತ್ತವೆ.

ಇದಿಷ್ಟು ಸ್ಪಷ್ಟವಾದ ಬಳಿಕ ಪ್ರವಾದಿವರ್ಯರ(ಸ) ಪ್ರಸ್ತುತ ವಚನದ ಬಗ್ಗೆ, ಧರ್ಮದ ಅನುಸರಣೆ ಅದರ ಸ್ಥಾಪನೆ ಮತ್ತು ಅದರ ಒಟ್ಟು ಆಕ್ಷೇಪಗಳನ್ನು ಈಡೇರಿಸುವ ವಿಷಯದಲ್ಲಿ ನಿಮ್ಮ ಮುಂದೆ ನಾನು ಏನೆಲ್ಲಾ ಮಾಡುತ್ತಿರುವೆನೋ ಮತ್ತು ನನ್ನ ಬಳಿಕ ನನ್ನನ್ನು ಅನುಸರಿಸುತ್ತ ಖುಲಫಾವುರ್ರಾಶಿದೀನ್‌ಗಳು ಏನೇನು ಮಾಡುವರೋ ಅದನ್ನು ಅನುಕರಿಸುವುದು ನಿಮ ಕರ್ತವ್ಯ. ವಿಶೇಷವಾಗಿ ಸಮುದಾಯದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿದಾಗ, ನೀವು ಹಾಗೆ ಮಾಡಬೇಕಾದ ಅಗತ್ಯ ಇನ್ನಷ್ಟು ತೀವ್ರವಾಗುತ್ತದೆ ಎಂದು ಹೇಳುವುದು ಇದರ ಇಂಗಿ ಎಂದು ದೃಢವಾಗಿ ಹೇಳಬಹುದು.

ಸ್ವಲ್ಪ ಚಿಂತಿಸಿ ನೋಡಿ. ಮುಸ್ಲಿಮ್ ಸಮುದಾಯವು ಸಾಮಾಜಿಕ ವ್ಯವಸ್ಥೆ ಮತ್ತ ಸಂಘಟನೆಯಿಂದ ವಂಚಿತವಾಗಿರುವ ಈ ಅವಸ್ಥೆ ವಿಚ್ಛಿದ್ರತೆಯಲ್ಲವೇ? ಇದನ್ನು ಕೇವ ವಿಚ್ಛಿದ್ರತೆಯ ಸ್ಥಿತಿ ಮಾತ್ರ ಎಂದೂ ಹೇಳುವಂತಿಲ್ಲ, ಒಂದು ಸಮುದಾಯವು ಹಲವ ಬಗೆಯ ಉನ್ನತೆ ಮತ್ತು ವಿಚ್ಛಿದ್ರತೆಗಳ ಫಲಿತಾಂಶವಾಗಿ ತಲುಪಬಹುದಾದ ಅವನತಿಯ ಕೊನೆಯ ಹಂತ ಎಂದೇ ಹೇಳಬೇಕಾಗುತ್ತದೆ.ಕೇವಲ ಒಂದು ಭಿನ್ನಾಭಿಪ್ರಾಯ ತೀ

ಎತ್ತಿದ ತಕ್ಷಣ ಪ್ರವಾದಿವರ್ಯರ(ಸ) ಮತ್ತು ಖುಲಫಾವುರ್ರಾಶಿದೀನ್‌ಗಳ ಆದರ್ಶವನ್ನು ಕಚ್ಚಿ ಹಿಡಿಯಬೇಕಾದುದು ಅಥವಾ ಅದನ್ನು ನೆಚ್ಚಿಕೊಳ್ಳಬೇಕಾದುದು ಆವಶ್ಯಕ ಎಂದ ಮೇಲೆ ಇಂಥ ಹಲವಾರು ಭಿನ್ನತೆಗಳು ಮತ್ತು ಅವುಗಳ ವಿನಾಶಕಾರೀ ಪರಿಣಾಮಗಳು ಕೂಡಾ ವ್ಯಕ್ತವಾಗಿರುವಾಗ ಹಾಗೆ ಮಾಡುವುದು ಆವಶ್ಯಕ ಮಾತ್ರವಲ್ಲ ಅನಿವಾರ್ಯವಾಗಿ ಬಿಡುತ್ತದೆ. ಇಂಥ ಯಾವುದಾದರೂ ವಿಷಯದಲ್ಲಿ ಸ್ವತಃ ಪ್ರವಾದಿ ಮುಹಮ್ಮದ್(ಸ) ಮತ್ತು ಖುಲಫಾವುರ್ರಾಶಿದೀನ್‌ಗಳ ನಿಲವು ಏನಾಗಿತ್ತು ಅಥವಾ ತಾತ್ವಿಕವಾಗಿ ಅವರು ಇಂಥ ಸನ್ನಿವೇಶಗಳಲ್ಲಿ ಎಂಥ ನಿಲುವು ತಳೆಯಲು ಸಾಧ್ಯವಿತ್ತು ಎಂಬುದನ್ನೀಗ ನೋಡೋಣ.

ಪ್ರವಾದಿವರ್ಯರ(ಸ) ಜೀವನದಲ್ಲಾಗಲಿ, ಖುಲಫಾವುರ್ರಾಶಿದೀನ್‌ಗಳ ಬದುಕಿನಲ್ಲಾಗಲೀ ನೇರವಾಗಿ ಸಾಮುದಾಯಿಕ ವಿಚ್ಛಿದ್ರತೆಯೊಂದಿಗೆ ಸಂಬಂಧವುಳ್ಳ ಯಾವುದೇ ವಿಧಾನ ನಿಲುವು ಅಥವಾ ಆದರ್ಶವನ್ನು ಕಾಣಲು ನಮಗೆ ಸಾಧ್ಯವಿಲ್ಲ. ಏಕೆಂದರೆ ಪ್ರವಾದಿವರ್ಯರ(ಸ) ಬದುಕಿನಲ್ಲಂತೂ ಇಂಥ ಅಪವಿತ್ರ ಬೆಳವಣಿಗೆ ಉಂಟಾಗುವುದೇ ಅಸಂಭವನೀಯವಾಗಿತ್ತು. ಆದ್ದರಿಂದ ಇಂದು ಇರುವಂಥ ತೀವ್ರ ಸಾಮುದಾಯಿಕ ವಿಚ್ಛಿದ್ರತೆಯ ಸನ್ನಿವೇಶದಲ್ಲಿ ಪ್ರವಾದಿ(ಸ) ಏನು ಮಾಡಿದ್ದಾರೆಂಬುದನ್ನು ಹುಡುಕಲು ಪ್ರಯತ್ನಿಸುವುದು ವ್ಯರ್ಥ. ಪ್ರವಾದಿವರ್ಯರು(ಸ) ವಸ್ತುತಃ ಒಂದು ಹೊಸ ಸಮುದಾಯವನ್ನು ಕಟ್ಟಿ ಬೆಳೆಸಿದ್ದರು. ಆದ್ದರಿಂದ ನಾವು ಸಮುದಾಯಿಕ ವಿಚ್ಛಿದ್ರತೆಯ ಪರಿಹಾರವನ್ನು, ಈ ಸಮುದಾಯವನ್ನು ಏಕೀಕರಿಸಲು ಪ್ರವಾದಿ(ಸ) ಬಳಸಿದ ಸೂತ್ರಗಳಲ್ಲೇ ಹುಡುಕಬೇಕಾಗುತ್ತದೆ. ಈ ನಿಟ್ಟಿನಲ್ಲಿ ನಾವು ಪ್ರಥಮವಾಗಿ ಅವರು ಈ ಸಮುದಾಯವನ್ನು ಹೇಗೆ ಕಟ್ಟಿದರೆಂಬುದನ್ನು ಪರಿಶೀಲಿಸಿ ಆ ಬಳಿಕ ಅದೇ ಬುನಾದಿಗಳಲ್ಲಿ ನಮ್ಮ ಪ್ರಚಲಿತ ಸಮಾಜದ ಪುನರ್ರಚನೆಗೆ ಪ್ರಯತ್ನಿಸಬೇಕಾಗಿದೆ. ಭಿನ್ನಾಭಿಪ್ರಾಯಗಳು ತಲೆ ಎತ್ತಿದಾಗ ಪ್ರವಾದಿ (ಸ) ರ ಆದರ್ಶವನ್ನು ಅವಲಂಬಿಸುವುದೆಂದರೆ ಇದುವೇ.

ಇನ್ನು ಪ್ರವಾದಿ ಮುಹಮ್ಮದ್(ಸ) ಅವರು ಈ ಸಮುದಾಯದ ರಚನೆ ಹೇಗೆ ಮಾಡಿದರೆಂಬುದನ್ನು ಸವಿಸ್ತಾರವಾಗಿ ವಿವರಿಸಬೇಕಾದ ಅಗತ್ಯವಿಲ್ಲ. ಸ್ವಲ್ಪವಾದರೂ ತಿಳುವಳಿಕೆಯಿರುವ ಎಲ್ಲರಿಗೂ ತಿಳಿದಿರುವಂತೆ, ಜನರು ಕೇವಲ 'ಲಾಇಲಾಹಇಲ್ಲಲ್ಲಾಹ್' ಎಂಬ ಮೂಲ ಮಂತ್ರ ಪಠಿಸಿ ವೈಯಕ್ತಿಕ ಸ್ತರದಲ್ಲಿ ನಮಾಝ್, ಉಪವಾಸ ಮತ್ತಿತರ ಆರಾಧನಾ ಕರ್ಮಗಳನ್ನು ಪಾಲಿಸುತ್ತಾ ಇದ್ದರೆ ಸಾಕೆಂದು ಪ್ರವಾದಿ ಮುಹಮ್ಮದ್(ಸ) ಬೋಧಿಸಿರಲಿಲ್ಲ. ಅವರು ಪ್ರತಿಪಾದಿಸಿದ ಧರ್ಮವು ಇದಕ್ಕಿಂತ ಬಹಳ ಆಚೆ ಇನ್ನೂ ಹಲವಾರು ಕರ್ತವ್ಯಗಳನ್ನು ಹೇರುತ್ತಿತ್ತು. 'ಅಲ್ಲಾಹನ ಪಾಶವನ್ನು ಭದ್ರವಾಗಿ ಹಿಡಿಯಿರಿ, ವಿಚ್ಛಿದ್ರರಾಗದಿರಿ' ಎಂಬ ಪವಿತ್ರ ಕುರ್‌ಆನ್‌ನ ಆದೇಶದ ವಿಶ್ಲೇಷಣೆಯನ್ನು ನಾವು ಪ್ರವಾದಿ ಮುಹಮ್ಮದ್(ಸ)ರ ಪ್ರಾಯೋಗಿಕ ಬದುಕಿನಲ್ಲಿ ನೋಡ ಬಯಸುವುದಾದರೆ, ನಮಗೆ ಧಾರಾಳ ಉದಾಹರಣೆಗಳು ಸಿಗುತ್ತವೆ. ಅವರ ಕಾಲದಲ್ಲಿ ಇಸ್ಲಾಮ್ ಸ್ವೀಕರಿಸಿದ ಪ್ರತಿಯೊಬ್ಬ ವ್ಯಕ್ತಿಯು ಒಂದು ಸಂಘಟನೆಯ ಅಂಗವಾಗಿರುತ್ತಿದ್ದನು. ಅಂತಹ ಎಲ್ಲ ವ್ಯಕ್ತಿಗಳನ್ನು ಪ್ರವಾದಿವರ್ಯರು(ಸ), ಸರದಲ್ಲಿ

ಮಣಿಗಳನ್ನು ಪೋಣಿಸುವಂತೆ ಒಂದು ನಿಶ್ಚಿತ, ಸಂಘಟಿತ ಶಿಸ್ತಿಗೆ ಬದ್ಧಗೊಳಿಸುತ್ತಿದ್ದರು. ಪ್ರವಾದಿವರ್ಯರು(ಸ) ಮದೀನಾಕ್ಕೆ ಹೋಗಿ ಬಹಳ ವರ್ಷಗಳು ಕಳೆದ ಬಳಿಕವೂ ಮಕ್ಕಾದಲ್ಲಿ ಇಸ್ಲಾಮ್ ಸ್ವೀಕರಿಸುವವರು ತಮ್ಮ ಮನೆ ಮಠಗಳನ್ನು ಬಿಟ್ಟು ಮದೀನಾಕ್ಕೆ ಹೋಗಬೇಕೆಂಬ ನಿಯಮವಿತ್ತು. ಅಂದರೆ, ಕೇವಲ ವೈಚಾರಿಕ ಮತ್ತು ಪ್ರಾಯೋಗಿಕವಾಗಿ ಒಂದು ಸಂಘಟಿತ ಗುಂಪಾಗಿ ಬಿಟ್ಟರೆ ಮಾತ್ರ ಸಾಲದು, ಅಂದಿನ ಪರಿಸ್ಥಿತಿಯಲ್ಲಿ, ಬಾಹ್ಯ ಹಾಗೂ ಶಾರೀರಿಕವಾಗಿಯೂ ಮುಸ್ಲಿಮರು ಒಂದು ಸಂಘಟಿತ ಗುಂಪಾಗಿ ಒಂದೆಡೆ ಸೇರಿ ಬದುಕಬೇಕಾದುದು ಧರ್ಮ ಮತ್ತು ವಿಶ್ವಾಸದ ಬೇಡಿಕೆಯಾಗಿತ್ತು. ಇಸ್ಲಾಮೀ ಶಕ್ತಿಯು ರಾಜಕೀಯವಾಗಿ ಸಾಕಷ್ಟು ಸುಭದ್ರವಾಗಿ; ಬಹುದೇವಾರಾಧಕ ಸತ್ಯಧಿಕ್ಕಾರಿ ಶಕ್ತಿಗಳು ಇಸ್ಲಾಮಿನ ಸ್ಥಾಪನೆಗೆ ಅಡ್ಡ ಬರಲಾರವು ಎಂಬ ಆತ್ಮವಿಶ್ವಾಸ ಹುಟ್ಟಿಕೊಳ್ಳುವ ತನಕವೂ ಪ್ರವಾದಿವರ್ಯರು(ಸ) ಈ ಆದೇಶವನ್ನು ಹಿಂದೆಗೆದು ಕೊಂಡಿರಲಿಲ್ಲ. ಮಕ್ಕಾ ವಿಜಯದ ಬಳಿಕ ಅಂಥ ಅಪೇಕ್ಷಿತ ಸುಭದ್ರ ಸ್ಥಿತಿ ನಿರ್ಮಾಣವಾದ ಬಳಿಕವಷ್ಟೇ ಪ್ರವಾದಿ(ಸ), ಇನ್ನು ಮುಂದೆ ಯಾರೂ ಮದೀನಾ ನಗರಕ್ಕೆ ವಲಸೆ ಬರಬೇಕಾಗಿಲ್ಲವೆಂದೂ ತಾವಿರುವ ಸ್ಥಳಗಳಲ್ಲೇ ಸಾಮುದಾಯಿಕ ಸಂಘಟನೆಯ ಅಂಗವಾಗಿ ಬದುಕುತ್ತಾ ಅಲ್ಲೇ ತಮ್ಮ ವೈಯಕ್ತಿಕ ಮತ್ತು ಸಾಮಾಜಿಕ ಕರ್ತವ್ಯಗಳನ್ನು ಈಡೇರಿಸಬಹುದೆಂದೂ ಘೋಷಿಸಿದರು. (ವಿಜಯದ ಬಳಿಕ ವಲಸೆ ಇಲ್ಲ)

ಪ್ರವಾದಿ ಮುಹಮ್ಮದ್(ಸ) ಅವರ ಈ ನಿಲುವು, ಒಂದು ವೇಳೆ ಅವರ ಜೀವನಾವಧಿಯಲ್ಲಿ ಸಾಮುದಾಯಿಕ ವಿಚ್ಛಿದ್ರತೆಯ ಸಮಸ್ಯೆ ಉದ್ಭವಿಸಿದ್ದರೆ ಅವರು ಯಾವ ಕ್ರಮ ಕೈಗೊಳ್ಳುತ್ತಿದ್ದರು ಎಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಅಂಥ ಸನ್ನಿವೇಶ ಉದ್ಭವಿಸಿದ್ದರೆ ಅವರು ಮತ್ತೆ ಐಕ್ಯ ಮತ್ತು ಸಂಘಟನೆಯನ್ನು ಸ್ಥಾಪಿಸಲು ಯಾವ ಕ್ರಮ ಕೈಗೊಳ್ಳಲಿಕೂ ಹಿಂಜರಿಯುತ್ತಿರಲಿಲ್ಲ ಎಂಬುದಕ್ಕೆ ಈ ನಿಲುವು ಸಾಕ್ಷಿಯಾಗಿದೆ. ಆದ್ದರಿಂದ ಮುಸ್ಲಿಮ ಸಮುದಾಯ ಭಿನ್ನತೆ, ಬಿಕ್ಕಟ್ಟುಗಳಿಗೆ ತುತ್ತಾದಾಗಲೆಲ್ಲಾ ಯಾವ ಬೆಲೆತೆತ್ತಾದರೂ ಈ ಬಿರುಕಿನ ಸ್ಥಿತಿಯಿಂದ ಹೊರಬಂದು ಮತ್ತೆ ಅಭೇದ್ಯವಾಗಿ ಸುಸಂಘಟಿತರಾಗಬೇಕಾದುದ ಸಮುದಾಯದ ಆದ್ಯ ಕರ್ತವ್ಯ ಎಂಬುದೇ ನಮಗೆ ಪ್ರವಾದಿ ಮುಹಮ್ಮದ್(ಸ) ಆದರ್ಶದಿಂ ಸಿಗುವ ಪಾಠ.

ಪ್ರವಾದಿ(ಸ) ಆದರ್ಶದ ನಂತರ ಇದೀಗ ನಾವು ಈ ವಿಷಯದಲ್ಲಿ 'ಖುಲಫಾಉ ರ್ರಾಶಿದೀನ್'ರ ಆದರ್ಶ ಏನೆಂಬುದನ್ನು ನೋಡೋಣ. ಸಹಜವಾಗಿಯೇ ಖಿಲಾಫತ್‌ ಕಾಲಾವಧಿಯ ಸ್ವರೂಪವು ಪ್ರವಾದಿತ್ವದ ಅವಧಿಯ ಸ್ವರೂಪಕ್ಕಿಂತ ಭಿನ್ನವಾಗಿತ್ತು. ಇದರ ಸಾಮುದಾಯಿಕ ಭಿನ್ನತೆ ಮತ್ತು ವಿಚ್ಛಿದ್ರತೆಗೆ ಪ್ರಾಯೋಗಿಕವಾಗಿ ಅವಕಾಶವಿತ್ತು. ಅಲ್ಲ ಒಂದು ಸ್ತರದಲ್ಲಿ ಅಂಥ ಭಿನ್ನತೆ ತಲೆದೋರಿತ್ತು ಕೂಡಾ. ಆದ್ದರಿಂದ ಈ ವಿಷಯದ ಖುಲಫಾವುರ್ರಾಶಿದೀನ್‌ಗಳ ಆದರ್ಶದಿಂದ ನಮಗೆ ನೇರ ಮಾರ್ಗದರ್ಶನ ಸಿಗಬಲ್ಲುದು.

ಖಲೀಫಾಗಳ ಸರಣಿಯಲ್ಲಿ ಹ. ಅಬೂಬಕರ್(ರ) ಪ್ರಥಮರು. ಅವರು ಪ್ರಥಮ ಖಲೀಫಾ ಮಾತ್ರವಲ್ಲ, ಅವರ ಆದರ್ಶದಲ್ಲಿ ನಮಗೆ ಅತ್ಯಂತ ನಿಚ್ಚಳವಾದ ಮಾರ್ಗದರ್ಶನವೂ ಸಿಗುತ್ತದೆ. ಆದ್ದರಿಂದ ಈ ವಿಷಯದಲ್ಲಿ ಅವರ ಆದರ್ಶದ ಒಂದು ಸಮೀಕ್ಷೆ ಬಹಳ ಉಪಯುಕ್ತವಾದೀತು.

ಪ್ರವಾದಿ ಮುಹಮ್ಮದ್(ಸ)ರ ನಿಧನದ ನಂತರ ಅಬೂಬಕರ್ ಸಿದ್ದೀಕ್(ರ) ಅವರು ಮುಸ್ಲಿಮ್ ಸಮುದಾಯದ ನಾಯಕರಾದಾಗ, ನಾಮಮಾತ್ರಕ್ಕೆ ಇಸ್ಲಾಮ್ ಸ್ವೀಕರಿಸಿದ್ದ ಕೆಲವು ಬುಡಕಟ್ಟು ಜನಾಂಗಗಳ ಜನರು ಝಕಾತ್ ಪಾವತಿ ಮಾಡಲು ನಿರಾಕರಿಸತೊಡಗಿದರು. ಅವರು ಈ ವಿಷಯದಲ್ಲಿ ಸರಕಾರದ ನಿಯಮವನ್ನು ಸ್ಪಷ್ಟವಾಗಿ ಉಲ್ಲಂಘಿಸಿದರು. ಇದರಿಂದ ಎಂಥ ಸಂಕೀರ್ಣ ಸನ್ನಿವೇಶ ನಿರ್ಮಾಣವಾಯಿತೆಂದರೆ 'ಧರ್ಮದ ವಿಷಯದಲ್ಲಿ ಬಹಳ ಕಠಿಣರು' ಎಂದೇ ಖ್ಯಾತವಾಗಿದ್ದ ಉಮರ್(ರ)ರಂಥ ವ್ಯಕ್ತಿಗಳು ಕೂಡ, ಈ ಅಪರಾಧ ಎಸಗುತ್ತಿರುವವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳುವುದು ಸರಿಯಲ್ಲವೆಂದೇ ಅಭಿಪ್ರಾಯ ಪಟ್ಟರು. ಆದರೆ ಅಬೂಬಕರ್(ರ)ರ ದೃಷ್ಟಿಯಲ್ಲಿ, ಜನರ ಈ ನೀತಿಯನ್ನು ಸಹಿಸಿಕೊಳ್ಳಲು ಧರ್ಮದೊಳಗೆ ಯಾವುದೇ ಅವಕಾಶ ಇರಲಿಲ್ಲ, ಅವರು ಅಸಾಮಾನ್ಯ ಧೈರ್ಯ ಮತ್ತು ಸ್ಥಿರಚಿತ್ತತೆ ಪ್ರದರ್ಶಿಸುತ್ತಾ, ಬಹಳ ಸ್ಪಷ್ಟವಾಗಿ ದೇವನಾಣೆ! ಇವರು ಪ್ರವಾದಿ ಮುಹಮ್ಮದ್(ಸ) ರಿಗೆ ನೀಡುತ್ತಿದ್ದ ಒಂಟೆಯನ್ನು ಕಟ್ಟುವ ಒಂದು ಹಗ್ಗವನ್ನು ಕೂಡಾ ನನ್ನ ಸರಕಾರಕ್ಕೆ ಕೊಡಲು ನಿರಾಕರಿಸಿದರೆ ನಾನು ಅದಕ್ಕಾಗಿ ಅವರೊಡನೆ ಯುದ್ಧ ಮಾಡುವೆನು ಎಂದು ಘೋಷಿಸಿ ಬಿಟ್ಟರು. (ಮುಸ್ಲಿಮ್, ಸಂಪುಟ- 1)

ಈ ಘೋಷಣೆಯನ್ನು ಸೂಕ್ಷ್ಮವಾಗಿ ಗಮನಿಸಿನೋಡಿ. ಇಲ್ಲಿ ಹ. ಅಬೂಬಕರ್ ಸಿದ್ದೀಕ್(ರ) ಹೇಳಿರುವುದು, ತಮ್ಮ ಸಂಪತ್ತಿನಿಂದ ಝಕಾತ್ ತೆಗೆದು ದಾನ ಮಾಡಲು ನಿರಾಕರಿಸುವ ಜನರ ವಿರುದ್ಧ ಯುದ್ಧ ಸಾರುವೆನೆಂದಲ್ಲ, ಯಾರಾದರೂ ತಮ್ಮ ಝಕಾತ್‌ನ ಮೊತ್ತವನ್ನು ತಮ್ಮ ಸರಕಾರಕ್ಕೆ ಒಪ್ಪಿಸಲು ನಿರಾಕರಿಸಿದರೆ ಅದಕ್ಕಾಗಿ ತಾನು ಅವರೊಡನೆ ಯುದ್ಧ ಮಾಡುವೆನೆಂದು ಎಚ್ಚರಿಸುತ್ತಿದ್ದಾರೆ. ಅಂದರೆ ಅವರ ದೃಷ್ಟಿಯಲ್ಲಿ ಜನರು ವೈಯಕ್ತಿಕ ನೆಲೆಯಲ್ಲಿ ತಮ್ಮ ಸಂಪತ್ತಿನ ಝಕಾತನ್ನು ಪ್ರತ್ಯೇಕಿಸಿ ದಾನ ಮಾಡಲು ಒಪ್ಪಿದರೂ, ಅವರು ಝಕಾತನ್ನು ಸರಕಾರೀ 'ಬೈತುಲ್ ಮಾಲ್'(ಬೊಕ್ಕಸ)ಗೆ ಒಪ್ಪಿಸಲು ನಿರಾಕರಿಸಿದರೆ, ಈ ನಿರಾಕರಣೆ ಅಂಥವರ ವಿರುದ್ಧ ಯುದ್ಧವನ್ನೂ ಸಾರಬಹುದಾದಷ್ಟು ಘೋರ ಅಪರಾಧವಾಗಿದೆ. ಬಹಳ ಸ್ಪಷ್ಟವಾಗಿ ಗೋಚರಿಸುತ್ತಿರು ವಂತೆ, ಇದು ಇಸ್ಲಾಮೀ ಸಾಮೂಹಿಕ ವ್ಯವಸ್ಥೆಗೆ ಸಂಬಂಧಿಸಿದ ಒಂದು ಸಮಸ್ಯೆಯಾಗಿತ್ತು. ಝಕಾತ್ ಪಾವತಿಸಲು ನಿರಾಕರಿಸುವವರ ಧೋರಣೆಯು ಈ ವ್ಯವಸ್ಥೆಯಲ್ಲಿ ಬಿರುಕು ಮೂಡಿಸು ವಂಥ ಧೋರಣೆಯಾಗಿತ್ತು. ವ್ಯವಸ್ಥೆಯನ್ನು ಅಂಥ ಬಿರುಕಿನಿಂದ ರಕ್ಷಿಸುವುದೇ ಹಝ್ರತ್ ಅಬೂಬಕರ್(ರ)ರ ಯುದ್ಧ ಘೋಷಣೆಯ ಉದ್ದೇಶವಾಗಿತ್ತು. ಇದರಿಂದ, ಸಾಮಾಜಿಕ ವ್ಯವಸ್ಥೆಯಲ್ಲಿ ಬಿಕ್ಕಟ್ಟು ಮೂಡಿಸುವ ಯಾವುದೇ ಬೆಳವಣಿಗೆಯನ್ನು

ಎಂದೂ ಸಹಿಸಬಾರದು ಮತ್ತು ಯಾವ ಬೆಲೆ ತೆತ್ತಾದರೂ ಅದನ್ನು ತಡೆಗಟ್ಟಲೇಬೇಕೆಂಬುದೇ ಹ. ಅಬೂಬಕರ್(ರ) ಅವರ ಧೋರಣೆಯಾಗಿತ್ತು ಎಂಬ ವಿಷಯವು ಸ್ಪಷ್ಟವಾಗುತ್ತದೆ.

ಇನ್ನೊಂದು ಉಲ್ಲೇಖದಲ್ಲಿ ಈ ಕುರಿತು ಇನ್ನಷ್ಟು ವಿವರಗಳು ಸಿಗುತ್ತವೆ. ಅದರಂತೆ ಹ. ಉಮರ್(ರ) ಅವರು ಪ್ರವಾದಿಯ ಪ್ರತಿನಿಧಿಯವರೇ! ಆ ಜನರೊಂದಿಗೆ ಸಮನ್ವಯ ಮಾಡಿಕೊಳ್ಳಿ. ಅವರ ಜೊತೆ ನಯವಾಗಿ ವರ್ತಿಸಿ ಎಂದು ಅಬೂಬಕರ್(ರ)ರಿಗೆ ಸೂಚಿಸಿದಾಗ ಆ ಪ್ರಥಮ ಖಲೀಫಾ ಕೊಟ್ಟ ಉತ್ತರ ಹೀಗಿತ್ತು;

ಉಮರ್! ಅಜ್ಞಾನ ಕಾಲದಲ್ಲಿ ಅಷ್ಟು ಕಠಿಣರಾಗಿದ್ದ ನೀವು ಇದೀಗ ಇಸ್ಲಾಮಿನ ವಿಷಯದಲ್ಲಿ ಇಷ್ಟು ದುರ್ಬಲರಾಗುತ್ತಿರುವಿರಾ? ನಿಸ್ಸಂದೇಹವಾಗಿಯೂ ಈಗ ದೇವವಾಣಿ ಅವತೀರ್ಣಗೊಳ್ಳುವ ಪರಂಪರೆ ಮುಕ್ತಾಯವಾಗಿದೆ. ಅಲ್ಲಾಹನ ಧರ್ಮ ಪರಿಪೂರ್ಣಗೊಂಡಿದೆ. ಅಂಥ ಧರ್ಮವನ್ನು ನಾನು ಜೀವಂತವಿರುವಾಗಲೇ ಅಪೂರ್ಣವಾಗಲು ಬಿಡಬೇಕೇ? (ಮಿಶ್ಕಾತ್, ಭಾಗ–ಮನಾಕಿಬ್ ಅಬೂಬಕರ್(ರ))

ಹ. ಅಬೂಬಕರ್(ರ) ಅವರ ಮಾತಿನಿಂದ ಈ ವಿಷಯದಲ್ಲಿ ಇನ್ನೊಂದು ಅಂಶದ ಬಗ್ಗೆಯೂ ಮಾರ್ಗದರ್ಶನ ಸಿಗುತ್ತದೆ. ಅದೇನೆಂದರೆ ಅವರ ದೃಷ್ಟಿಯಲ್ಲಿ, ಅಲ್ಲಾಹನು ಸಂಪೂರ್ಣಗೊಳಿಸಿರುವ ಧರ್ಮದ ಬೇಡಿಕೆಗಳ ಪೈಕಿ ಯಾವುದಾದರೂ ಒಂದು ಬೇಡಿಕೆ ಯನ್ನು ಪೂರೈಸಲು ನಿರಾಕರಿಸಿದರೆ ಅದರಿಂದ ಧರ್ಮವನ್ನು ಅಪೂರ್ಣಗೊಳಿಸಿದಂತಾಗುತ್ತದೆ ಇಂಥ ಗಂಭೀರ ವಿಷಯಗಳಲ್ಲಿ ಸಹನೆ, ಸಹಿಷ್ಣುತೆ ತೋರುವುದು ಖಂಡಿತ ಒಬ್ಬ ಸತ್ ವಿಶ್ವಾಸಿಗೆ ಭೂಷಣವಲ್ಲ, ಇಂಥ ಸನ್ನಿವೇಶಗಳಲ್ಲಿ ಪ್ರತಿಯೊಬ್ಬನೂ, ಧರ್ಮದ ಆ ಬೇಡಿಕೆ ಯನ್ನು ತಾನು ಈಡೇರಿಸಬೇಕಾದುದು ಇತರರು ಈಡೇರಿಸುವಂತೆ ನೋಡಿಕೊಳ್ಳಬೇಕಾದುದ ಮತ್ತು ಈ ಪೂರ್ಣ ಧರ್ಮವು ಅಪೂರ್ಣ ಧರ್ಮವಾಗಿ ಬಿಡುವ ಅಪಾಯದಿಂದ ರಕ್ಷಿಸಬೇಕಾದುದು ತನ್ನ ಕರ್ತವ್ಯವೆಂದು ಪರಿಗಣಿಸಬೇಕು. ಒಟ್ಟಿನಲ್ಲಿ ಧರ್ಮವನ್ನು ಅಪೂರ್ಣ ಗೊಳಿಸುವ ಪ್ರಯತ್ನಗಳು ನಡೆದಾಗ ಅಥವಾ ಅಂಥ ಪ್ರಯತ್ನಗಳು ಯಶಸ್ವಿಯಾದಾಗ ಧರ್ಮದ ಸಂಪೂರ್ಣತೆಯನ್ನು ರಕ್ಷಿಸಲಿಕ್ಕಾಗಿ ಅಥವಾ ಅದಕ್ಕೆ ಮತ್ತೆ ಸಂಪೂರ್ಣತೆಯನ ಗಳಿಸಿಕೊಡುವುದಕ್ಕಾಗಿ ಗರಿಷ್ಠ ಪ್ರಯತ್ನ ಮಾಡಬೇಕೆಂಬುದೇ ಖಲೀಫರ ಆದರ್ಶ ಎಂದಾಯಿತು

ಈಗ ಯೋಚಿಸಿ, ಸಮುದಾಯದ ಐಕ್ಯವು ಮುರಿದು, ಅಲ್ಲಾಹನ ಪಾಶವನ ಭದ್ರವಾಗಿ ಹಿಡಿಯಿರಿ, ವಿಚ್ಛಿದ್ರರಾಗದಿರಿ ಎಂಬಂಥ ಧರ್ಮದ ಮೂಲಭೂತ ಬೇಡಿಕೆಗಳ ಮರೆಯಲ್ಪಟ್ಟಾಗ ಧರ್ಮವು ಪೂರ್ಣವಾಗಿರುವುದೇ ಅಥವಾ ಅದನ್ನು ಅಪೂರ್ಣವೆನ್ನಬೇಕೇ ಕೇವಲ ಕೆಲವು ಬುಡಕಟ್ಟಿನ ಜನರು ಝಕಾತ್ ಪಾವತಿಸಲು ನಿರಾಕರಿಸಿದ್ದು ಧರ್ಮವನ ಅಪೂರ್ಣಗೊಳಿಸುವ ಕೃತ್ಯ ಎನಿಸಿಕೊಂಡ ಮೇಲೆ, ಸಂಪೂರ್ಣ ಸಮುದಾಯ ನಾಯಕತ್ವವಿಲ್ಲದೆ, ವ್ಯವಸ್ಥೆಯಿಲ್ಲದೆ, ಶರೀಅತ್‌ನ ಅಸಂಖ್ಯ ಆದೇಶಗಳು ಸಂಪೂರ್ಣವಾ

ಅನೂರ್ಜಿತಗೊಂಡ ಸ್ಥಿತಿಯಲ್ಲಿ, ಧರ್ಮವು ಅಪೂರ್ಣವಾಗಿದೆ ಎಂದು ಮಾತ್ರವಲ್ಲ, ಅದು ವಿಕಲಗೊಂಡಿದೆಯೆಂದೇ ಹೇಳಬೇಕಾಗುತ್ತದೆ. ಇಂಥ ಸನ್ನಿವೇಶದಲ್ಲಿ, ಸಮುದಾಯವನ್ನು ಮತ್ತೆ ಸುಸಂಘಟಿತವಾಗಿ ಕಟ್ಟಲು ಮತ್ತು ಅದು ಕಳಕೊಂಡಿರುವ ವ್ಯವಸ್ಥಿತ ಬದುಕನ್ನು ಮರಳಿ ಪಡೆಯಲು ಹೆಣಗಾಡಬೇಕೆಂಬುದೇ ಪ್ರವಾದಿ ಮುಹಮ್ಮದ್(ಸ) ಅವರ ಆದರ್ಶವಾಗಿದೆ.

ಒಮ್ಮೆ ಪ್ರವಾದಿ ಮುಹಮ್ಮದ್(ಸ) ಹೇಳಿದರು: ಧರ್ಮ 'ಅಜ್ಞಾತ' ಸ್ಥಿತಿಯಲ್ಲಿ ಆರಂಭವಾಯಿತು. ಅದು ಪುನಃ ಅಜ್ಞಾತ ಸ್ಥಿತಿಗೆ ಮರಳುವುದು. ಅಂಥ ಸನ್ನಿವೇಶದಲ್ಲಿ ನನ್ನ ಆದರ್ಶಗಳ ಪೈಕಿ ಯಾವುದನ್ನು ಜನರು ಕೆಡಿಸಿರುವರೋ ಅದನ್ನು ಮತ್ತೆ ಸರಿಪಡಿಸುವ ಅಜ್ಞಾತರಿಗೆ ಅಭಿನಂದನೆಗಳು. (ತಿರ್ಮಿದಿ, ಸಂಪುಟ– 2, ಪುಟ– 96)

ಈ ಪ್ರವಾದಿ ವಚನವನ್ನು ಗಮನವಿಟ್ಟು ಅಭ್ಯಸಿಸಿದರೆ ಇದರಲ್ಲಿ ಅಭಿನಂದನಾರ್ಹರೆಂದು ಗುರುತಿಸಿರುವ ವ್ಯಕ್ತಿಗಳು ಯಾರು, ಎಂಥವರೆಂಬುದು ತಿಳಿಯುತ್ತದೆ. ಅಜ್ಞಾನಿಗಳು ಮತ್ತು ದುಷ್ಟರು ಪ್ರವಾದಿ ಮುಹಮ್ಮದ್(ಸ)ರ ಆದರ್ಶಗಳನ್ನು ಮರೆತು ಧರ್ಮದಲ್ಲಿ ಹಲವು ವಿಕೃತಿಗಳನ್ನು ಮಾಡಿರಬಹುದು. ಈ ರೀತಿ ವಿಕೃತಿಗೊಳಗಾದ ಧರ್ಮದ ಅಂಗಗಳನ್ನೆಲ್ಲಾ ಮತ್ತೆ ಸರಿಪಡಿಸಿ ಯಥಾಸ್ಥಿತಿಗೆ ತರುವವರೇ ಅಭಿನಂದನಾರ್ಹರು. ಈ ಪ್ರವಾದಿ ವಚನವು ಒಂದು ಭವಿಷ್ಯವಾಣಿಯಾಗಿರುವುದಕ್ಕಿಂತ ಹೆಚ್ಚಾಗಿ ಒಂದು ಪ್ರಾಮುಖ್ಯ ಆದೇಶವಾಗಿದೆ. ಧರ್ಮದ ಯಾವುದೇ ಅಂಗಕ್ಕೆ ಹಾನಿಯಾದಾಗ ಪ್ರಜ್ಞಾವಂತ ಮುಸ್ಲಿಮರು ಆ ಬಗ್ಗೆ ನಿರ್ಲಿಪ್ತರಾಗಿರಬಾರದು. ಆ ಅಂಗವನ್ನು ರಕ್ಷಿಸಲು ಸರ್ವ ಪ್ರಯತ್ನ ನಡೆಸಬೇಕು. ಲೋಕದಲ್ಲಿ ಸಜ್ಜನ ದಾಸನಾಗಿ ಬಾಳಲು ಪ್ರವಾದಿವರ್ಯರು(ಸ) ತೋರಿಸಿ ಹೋದ ಜೀವನ ಕ್ರಮದ ಯಾವ ಅಂಗವನ್ನೂ ಕಾಲದ ಪ್ರಹಾರಗಳಿಗೆ ತುತ್ತಾಗಿ ಶಿಥಿಲಗೊಳ್ಳಲು ಬಿಡಬಾರದು. ಈ ಬಗ್ಗೆ ತೋರುವ ಅಸಡ್ಡೆ ಮತ್ತು ನಿರ್ಲಕ್ಷ್ಯ ಮನುಷ್ಯನ ಈಮಾನ್(ಸತ್ಯವಿಶ್ವಾಸ)ಗೇ ಮಾರಕವಾಗಿರುತ್ತದೆ. ಒಂದು ವಸ್ತು ಕಾನೂನಿನ ಅಥವಾ ಕರ್ಮಶಾಸ್ತ್ರದ ದೃಷ್ಟಿಯಲ್ಲಿ ಎಷ್ಟೇ ಸಣ್ಣದಾಗಿರಬಹುದು, ಆದರೆ ಪ್ರವಾದಿವರ್ಯರ(ಸ) ನಿಶ್ಶರ್ತ ಅನುಸರಣೆಗೆ ಬದ್ಧರಾಗಿರುವ ಮುಸ್ಲಿಮರು ಒಂದು ವಸ್ತು ಪ್ರವಾದಿಯ(ಸ) ಸುನ್ನತ್ ಎಂದು ತಿಳಿದ ಮೇಲೆ ಯಾವ ಕಾರಣಕ್ಕೂ ಅದನ್ನು ಅಳಿಯಲು ಬಿಡಲಾರರು, ಅದು ಅಳಿಯುವುದನ್ನು ಸಹಿಸಲಾರರು.

ಈಗ ಮತ್ತೆ ಚಿಂತಿಸಿ ನೋಡಿ ಸಣ್ಣ ಸುನ್ನತ್‌ಗಳಿಗೇ ಇಷ್ಟು ಮಹತ್ವವಿರುವಾಗ, ಸಮುದಾಯವು ಅಲ್ಲಲ್ಲಿ ಛಿದ್ರಗೊಂಡು ಬಿಟ್ಟಿರುವುದು, ಶರೀಅತ್‌ನ ಅಸಂಖ್ಯ ಆದೇಶಗಳು ಜನಜೀವನದೊಂದಿಗೆ ಸಂಬಂಧವೇ ಇಲ್ಲದೆ ಅನೂರ್ಜಿತ ಸ್ಥಿತಿಯಲ್ಲಿರುವುದು ಧರ್ಮದ ಪಾಲಿಗೆ ಎಷ್ಟು ದೊಡ್ಡ ವೈಫಲ್ಯ? ಇದು ಪ್ರವಾದಿಯವರ(ಸ) ಆದರ್ಶಗಳ ಮಟ್ಟಿಗೆ ಎಷ್ಟು ದೊಡ್ಡ ನಷ್ಟ? ಖಂಡಿತವಾಗಿಯೂ ಇದು ಧರ್ಮ, ಶರೀಅತ್ ಮತ್ತು ಪ್ರವಾದಿವರ್ಯರ(ಸ) ಆದರ್ಶಗಳ ಮಟ್ಟಿಗೆ ವಿವರಿಸಲಸಾಧ್ಯವಾದಷ್ಟು ದೊಡ್ಡ ನಷ್ಟ ಮತ್ತು ವೈಫಲ್ಯವಾಗಿದೆ.

ಹಾಗಾದರೆ ಇಂಥ ಸನ್ನಿವೇಶದಲ್ಲಿ ಪ್ರಸ್ತುತ ಹದೀಸ್‌ನಲ್ಲಿ ಅಭಿನಂದನಾರ್ಹ ಅಜ್ಞಾತರೆಂದು ಕರೆಯಲ್ಪಟ್ಟವರು ಮಾಡಬೇಕಾದ ಸೇವೆಯೇನು? ಅವರ ಕರ್ತವ್ಯವೇನು? ವಿಚ್ಛಿದ್ರ ಸಮುದಾಯವನ್ನು ಮತ್ತೆ ಸಂಘಟಿಸಿ, ಅಪೇಕ್ಷಿತ ಸಾಮೂಹಿಕ ವ್ಯವಸ್ಥೆಯನ್ನು ಪುನಃ ಸ್ಥಾಪಿಸುವುದನ್ನು ತನ್ನ ಆದ್ಯ ಕರ್ತವ್ಯವೆಂದು ಪರಿಗಣಿಸಿ ಅದಕ್ಕಾಗಿ ಸಾಧ್ಯವಿರುವ ಎಲ್ಲ ವಿಧಾನಗಳಿಂದ ಪರಿಶ್ರಮಿಸಬೇಕಾದುದೇ ಅವರ ಕರ್ತವ್ಯ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ನ ಅನಂತರ ನಾವು ಕರ್ಮಶಾಸ್ತ್ರ ಮತ್ತು ತತ್ವಶಾಸ್ತ್ರದ ದೃಷ್ಟಿಯಿಂದ ನೋಡಿದರೆ ನಮಗೆ ಇದಕ್ಕಿಂತ ಭಿನ್ನವಾದ ಯಾವುದೇ ಅಭಿಪ್ರಾಯಸಿಗುವುದಿಲ್ಲ. ಈ ಮೊದಲು 'ರಾಷ್ಟ್ರ ವ್ಯವಸ್ಥೆಯ ಧಾರ್ಮಿಕ ಅಗತ್ಯ' ಎಂಬ ಅಧ್ಯಾಯದಲ್ಲಿ, ಖಿಲಾಫತ್‌ನ ಸ್ಥಾಪನೆ ಕಡ್ಡಾಯವೆಂಬ ಬಗ್ಗೆ ಒಮ್ಮತ (ಇಜ್ಮಾಅ್) ಇದೆ ಎಂಬ ದೊಡ್ಡ ದೊಡ್ಡ ವಿದ್ವಾಂಸರ ಅಭಿಪ್ರಾಯವನ್ನು ವಿವರವಾಗಿ ತಿಳಿಸಲಾಗಿತ್ತು. 'ಅಲ್ಲಾಮಾತಫ್ತಾಝಾನಿ'ಯವರು ಖಿಲಾಫತ್‌ನ ಸ್ಥಾಪನೆ ಯಾಕೆ ಕಡ್ಡಾಯವೆಂಬುದನ್ನು ವಿವರಿಸುತ್ತಾ 'ಧರ್ಮದ ಹಲವು ಕಡ್ಡಾಯ ಕರ್ತವ್ಯಗಳನ್ನು ನಿರ್ವಹಿಸಬೇಕಾದರೆ ಈ ವ್ಯವಸ್ಥೆ ಅಸ್ತಿತ್ವದಲ್ಲಿರಬೇಕಾದುದು ಅನಿವಾರ್ಯ ಎಂದಿರುವರು. ಈ ರೀತಿ ನಾವು ಎರಡು ವಾಸ್ತವಿಕತೆಗಳನ್ನು (1.ಧಾರ್ಮಿಕ ಕರ್ತವ್ಯಗಳ ಪಾಲನೆಯ ಅಗತ್ಯ. 2.ಅದಕ್ಕೆ ಒಂದು ಸಂಘಟಿತ ವ್ಯವಸ್ಥೆಯ ಅನಿವಾರ್ಯತೆ) ಅಂಗೀಕರಿಸಿದರೆ ಈ ಅಂಗೀಕಾರದ ನೇರ ಪರಿಣಾಮವಾಗಿ ನಾವು ಇನ್ನೊಂದು ವಾಸ್ತವಿಕತೆಯನ್ನೂ ಅಂಗೀಕರಿಸಲೇ ಬೇಕಾಗುತ್ತದೆ. ಅದೇನೆಂದರೆ ಸಮುದಾಯದೊಳಗೆ ಇಂಥ ಅಪೇಕ್ಷಿತ ಸಂಘಟಿತ ಸಾಮೂಹಿಕ ವ್ಯವಸ್ಥೆಯು ಅಸ್ತಿತ್ವದಲ್ಲಿ ಇಲ್ಲದಿದ್ದರೆ ಅದನ್ನು ಮತ್ತೆ ಸ್ಥಾಪಿಸಲಿಕ್ಕಾಗಿ ಪ್ರಯತ್ನಿಸಬೇಕಾದುದು ನಮ್ಮೆಲ್ಲರ ಕರ್ತವ್ಯವಾಗಿದೆ. ಏಕೆಂದರೆ, ಸಾಮುದಾಯಿಕ ಐಕ್ಯ, ಸಂಘಟನೆ ಮತ್ತು ಸಂಘಟಿತ ವ್ಯವಸ್ಥೆಯನ್ನು ಪುನಃ ಸ್ಥಾಪಿಸದೆ ಖಿಲಾಫತ್ ವ್ಯವಸ್ಥೆಯನ್ನು ತರಲು ಸಾಧ್ಯವಿಲ್ಲ. ಸ್ತಂಭ ಅಥವಾ ಗೋಡೆಗಳಿಲ್ಲದೆ ಚಪ್ಪರ ನಿರ್ಮಿಸುವುದು ಅಸಾಧ್ಯವಾಗಿರುವಂತೆಯೇ ಸಂಘಟಿತ ಸಾಮೂಹಿಕ ವ್ಯವಸ್ಥೆಯನ್ನು ಸ್ಥಾಪಿಸದೆ ಖಿಲಾಫತ್ ಮತ್ತು ಇಮಾಮತ್‌ನ ಸ್ಥಾಪನೆ ಅಸಾಧ್ಯ.

ಒಂದು ಕರ್ತವ್ಯವನ್ನು ನಿರ್ವಹಿಸಲು ಯಾವುದಾದರೊಂದು ವಸ್ತು ಅನಿವಾರ್ಯವಾಗಿದ್ದರೆ ಆ ವಸ್ತುವಿನ ಏರ್ಪಾಟು ಮಾಡಬೇಕಾದುದು ಕೂಡಾ ಕರ್ತವ್ಯ ಎಂಬುದು ಒಂದು ಸರ್ವಾಂಗೀಕೃತ ನಿಯಮ. ಅದೆಷ್ಟೋ ಧಾರ್ಮಿಕ ಕರ್ತವ್ಯಗಳ ಪಾಲನೆಗೆ, ಒಬ್ಬ ಇಮಾಮ್‌ನ ನೇಮಕಾತಿ ಅನಿವಾರ್ಯವಾಗಿದೆ. ಒಬ್ಬ (ಜಾಗತಿಕ) ಇಮಾಮ್‌ನ ನೇಮಕವಾಗಬೇಕಾದರೆ ಸಮುದಾಯವು (ಜಾಗತಿಕ ಮಟ್ಟದಲ್ಲಿ) ಒಂದು ವ್ಯವಸ್ಥಿತ ಸಂಘಟನೆಯಾಗಬೇಕಾದುದು ಅನಿವಾರ್ಯವಾಗಿದೆ. ಒಂದು ವಿಷಯವು ಅಗತ್ಯ ಆಗಿರುವುದೇ, ಎರಡನೆಯ ವಿಷಯವು ಅಗತ್ಯವೆಂಬುದಕ್ಕಿರುವ ಪುರಾವೆಯಾಗಿದೆ. ಈ ಎರಡನೆಯ ವಿಷಯವೂ ಅಗತ್ಯವಾಗಿರುವಾಗ ಮೂರನೆಯ ವಿಷಯವು ತನ್ನಿಂತಾನೇ ಅಗತ್ಯವಾಗಿ ಬಿಡುತ್ತದೆ.

## ಸಾಮೂಹಿಕ ವ್ಯವಸ್ಥೆಯ ಪುನಃ ಸ್ಥಾಪನೆಯ ವಿಧಾನ

ಈ ಹಂತದಲ್ಲಿ ಸಹಜವಾಗಿಯೇ ನಮಗೆ, ಸಾಮೂಹಿಕ ವ್ಯವಸ್ಥೆಯನ್ನು ಪುನಃಸ್ಥಾಪಿಸುವ ಬಗೆ ಹೇಗೆ? ಎಂಬ ಪ್ರಶ್ನೆ ಎದುರಾಗುತ್ತದೆ. ಒಂದು ಜನಜಾತ್ರೆಯಾಗಿ ಮಾರ್ಪಟ್ಟಿರುವ ಈ ಅಸಂಘಟಿತ ಸಮುದಾಯವನ್ನು ಪುನಃ 'ಅಲ್ ಜಮಾಅತ್' ಆಗಿ ಸಂಘಟಿಸುವುದೆಂತು? ಈ ಸಮುದಾಯವು ತಾನು ಕಳಕೊಂಡ ಶಿಸ್ತು ಐಕ್ಯ ಮತ್ತು ಸುಸಜ್ಜಿತ ಸಂಘಟನೆಯನ್ನು ಹೇಗೆ ಮರಳಿ ಗಳಿಸಬಲ್ಲುದು? ಎಂಬ ಪ್ರಶ್ನೆ ನಮ್ಮನ್ನು ಕಾಡುತ್ತದೆ. ವಸ್ತುತಃ ಮಹತ್ವಪೂರ್ಣವಾಗಿರುವ ಈ ಪ್ರಶ್ನೆಗಳು ವಿಶೇಷವಾಗಿ ಇಂದಿನ ಅನೈಕ್ಯದ ವಾತಾವರಣದಲ್ಲಿ ಇನ್ನಷ್ಟು ಮಹತ್ವ ಪಡೆದಿದೆ. ವಿಚಾರವಂತರು ಬಹುಕಾಲದಿಂದ ಈ ಪ್ರಶ್ನೆ ಕೇಳುತ್ತಿದ್ದಾರಲ್ಲದೆ ಅದರ ಉತ್ತರ ಹುಡುಕಲೂ ಪ್ರಯತ್ನಿಸಿದ್ದಾರೆ. ಆದರೆ ಈ ಪ್ರಶ್ನೆಗಳಿಗೆ ಈ ವರೆಗೆ ಹಲವರು ಮುಂದಿಟ್ಟ ಉತ್ತರಗಳು, ಅವು ಸಮಸ್ಯೆಯನ್ನು ಬಗೆಹರಿಸುವ ಬದಲು ಇನ್ನಷ್ಟು ಜಟಿಲಗೊಳಿಸಿವೆ. ತಪ್ಪು ಉತ್ತರಗಳಿಂದಾಗಿ ಪರಿಸ್ಥಿತಿಯ ಸಂಕೀರ್ಣತೆ ಮತ್ತಷ್ಟು ಹೆಚ್ಚಿದೆ. ಆದ್ದರಿಂದ ಈ ಕುರಿತು ಬಹಳ ಎಚ್ಚರಿಕೆಯಿಂದ, ಅತ್ಯಂತ ವಸ್ತುನಿಷ್ಠವಾಗಿ ಆಲೋಚಿಸಬೇಕಾದ ಅಗತ್ಯವಿದೆ.

ನಾವು ಈ ಕುರಿತು ಚಿಂತನೆ ಆರಂಭಿಸುವಾಗ ಬಹಳ ಮೂಲಭೂತ ಸ್ವರೂಪದ ಹಾಗೂ ಸರ್ವಸಮ್ಮತವೆನ್ನಬಹುದಾದ 3 ವಾಸ್ತವಿಕತೆಗಳನ್ನು ಮರೆಯಬಾರದು.

1. ಮುಸ್ಲಿಮ್ ಸಮುದಾಯಕ್ಕೆ ಅಗತ್ಯವಿರುವುದು ಕೇವಲ ಒಂದು ನಾಮಮಾತ್ರ ಅನಿಯಂತ್ರಿತ ಸಂಘಟನೆಯಲ್ಲ, ಅದಕ್ಕೆ ಒಂದು ವಿಶಿಷ್ಟ ಸಂಘಟನೆ ಮತ್ತು ಒಂದು ವಿಶಿಷ್ಟ ಐಕ್ಯದ ಅಗತ್ಯವಿದೆ. ಅಲ್ಲಾಹನ ಪಾಶವೇ ಆ ಸಂಘಟನೆ ಮತ್ತು ಐಕ್ಯದ ಮೂಲ ಆಧಾರವಾಗಿರಬೇಕು. ಸತ್ಯದ ಸಾಕ್ಷ್ಯ, ಒಳಿತಿನ ಸ್ಥಾಪನೆ-ಕೆಡುಕಿನ ಮೂಲೋತ್ಪಾಟನೆ ಮತ್ತು 'ಧರ್ಮ ಸಂಸ್ಥಾಪನೆ' ಮಾತ್ರ ಅದರ ಜೀವನೋದ್ದೇಶವಾಗಿರಬೇಕು.

2. ಸಂಘಟಿತ ಸಾಮೂಹಿಕ ವ್ಯವಸ್ಥೆಯ ಸ್ಥಾಪನೆಯು ಒಂದು 'ಧಾರ್ಮಿಕ' ಅಗತ್ಯವಾಗಿರುವಂತೆಯೇ ಅದನ್ನು ಸ್ಥಾಪಿಸುವ ವಿಧಾನವೂ ಅಪ್ಪಟವಾಗಿ ಧಾರ್ಮಿಕವಾಗಿರಬೇಕು. ಅಂದರೆ ಅವರಿವರ ತತ್ವ ಸಿದ್ಧಾಂತಗಳ ಆಧಾರದಲ್ಲಿ ಅದನ್ನು ಸ್ಥಾಪಿಸುವ ಬದಲು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ದತ್ತವಾದ ವಿಚಾರ ಮತ್ತು ಸೂತ್ರಗಳ ಆಧಾರದಲ್ಲಿ ಅದು ಕಟ್ಟಲ್ಪಡಬೇಕು.

3. ಸಮುದಾಯವು ವಿಚ್ಛಿದ್ರವಾಗಿರುವ ಸ್ಥಿತಿಯಲ್ಲಿ ನಮ್ಮ ಧೋರಣೆ ಏನಾಗಿರಬೇಕೆಂಬ ಬಗ್ಗೆ ಪ್ರವಾದಿವರ್ಯರ(ಸ) ಸುನ್ನತ್‌ಗಳಲ್ಲಿ ನಮಗೆ ಹೆಚ್ಚು ವಿವರವಾದ ಮಾರ್ಗದರ್ಶನ ಸಿಗುವುದು ಅಸಾಧ್ಯವಾಗಿರುವಂತೆಯೇ ಸಾಮೂಹಿಕತೆಯ ಪುನಃಸ್ಥಾಪನೆ ಹೇಗೆ ಮಾಡಬೇಕೆಂಬ ಬಗ್ಗೆಯೂ ಹೆಚ್ಚು ವಿವರವಾದ ಮಾರ್ಗದರ್ಶನ ನಮಗೆ ಪ್ರವಾದಿಚರ್ಯೆಯಿಂದ ಸಿಗಲಾರದು. ಯಾಕೆಂದರೆ ಪ್ರವಾದಿ ಮುಹಮ್ಮದ್(ಸ) ಅವರು ಕಾರ್ಯ ನಿರ್ವಹಿಸಿದಂಥ ಸನ್ನಿವೇಶವು ಇಂದಿನಂತೆ ಮುಸ್ಲಿಮ್ ಸಮುದಾಯವು ಛಿದ್ರವಾಗಿರುವಂಥ ಸನ್ನಿವೇಶವಾಗಿರಲಿಲ್ಲ, ಅದು

ಒಂದು ಭಿನ್ನ ಸನ್ನಿವೇಶವಾಗಿತ್ತು. ನಮ್ಮ ಮುಂದೆ ಬಹುಕಾಲದಿಂದ ಐಕ್ಯ ಕಳೆದು ಕೊಂಡಿರುವ ಒಂದು ಸಮುದಾಯವನ್ನು ಸಂಘಟಿಸುವ ಸಮಸ್ಯೆ ಇದೆ. ಪ್ರವಾದಿವರ್ಯರ(ಸ) ಮುಂದೆ ಒಂದು ನೂತನ ಸಮುದಾಯವನ್ನು ಸಂಘಟಿಸುವ ಸಮಸ್ಯೆ ಇತ್ತು. ಈ ನಿಟ್ಟಿನಲ್ಲಿ ನಮಗೆ ಹೆಚ್ಚೆಂದರೆ ಪ್ರವಾದಿ ಮುಹಮ್ಮದ್(ಸ) ಅವರು ಮುಸ್ಲಿಮ್ ಸಮುದಾಯವು ಸಂಘಟಿತವಾಗಿ ಬದುಕುವ ಮಹತ್ವದ ಬಗ್ಗೆ ಕೊಟ್ಟಿರುವ ಆದೇಶಗಳಿಂದ ಮಾರ್ಗದರ್ಶನ ಸಿಗಬಹುದು. ನಮ್ಮ ಮತ್ತು ಅವರ ಕಾಲದ ನಡುವಣ ವ್ಯತ್ಯಾಸಗಳಿಂದಾಗಿ, ಸುನ್ನತ್‌ನಂತೆಯೇ ಪವಿತ್ರ ಕುರ್‌ಆನ್‌ನಿಂದಲೂ ನೇರವಾಗಿ ಸವಿಸ್ತಾರ ಮಾರ್ಗದರ್ಶನ ಲಭ್ಯವಾಗುವುದು ಅಸಾಧ್ಯ. ಏಕೆಂದರೆ ಪವಿತ್ರ ಕುರ್‌ಆನ್ ಜಗತ್ತಿನ ಉಳಿದೆಲ್ಲ ತಾತ್ವಿಕ ಗ್ರಂಥಗಳಿಗಿಂತ ಭಿನ್ನವಾಗಿದೆ. ಬೇರೆ ತಾತ್ವಿಕ, ಸೈದ್ಧಾಂತಿಕ ಗ್ರಂಥಗಳಲ್ಲಿ ಪ್ರತ್ಯಪ್ರತ್ಯೇಕವಾಗಿ ಒಂದೊಂದೇ ವಿಷಯವನ್ನೆತ್ತಿ ಆ ಬಗ್ಗೆ ವಿಚಾರಗಳನ್ನಿಡಲಾಗುತ್ತದೆ. ಓದುವವರ ಜೀವನದ ಪ್ರಾಯೋಗಿಕ ಸಮಸ್ಯೆಗಳ ಬಗ್ಗೆ ಅವುಗಳಿಗೆ ವಿಶೇಷ ಕಾಳಜಿ ಇರುವುದಿಲ್ಲ, ಕೆಲವೊಮ್ಮೆ ಅವುಗಳ ಅಭಿಸಂಬೋಧಿತರು ಯಾರೆಂಬುದೇ ನಿರ್ದಿಷ್ಟವಾಗಿರುವುದಿಲ್ಲ. ಆದರೆ ಪವಿತ್ರ ಕುರ್‌ಆನ್ ಹಾಗಲ್ಲ, ಮಾನವ ಕುಲವನ್ನು ವಿಜಯ ಮತ್ತು ವಿಮೋಚನೆಯೆಡೆಗೆ ಸಾಗಿಸುವ ನಿರ್ದಿಷ್ಟ ಗುರಿ ಅದರ ಮುಂದಿದೆ. ನಿಶ್ಚಿತ ಅಭಿಸಂಬೋಧಿತರು ಮತ್ತು ನಿರ್ದಿಷ್ಟ ಧ್ಯೇಯ ಅದಕ್ಕಿದೆ. ಅದು ಹೇಳುವ ಪ್ರತಿಯೊಂದು ಮಾತು ಕಾಲದ ಅಗತ್ಯಕ್ಕೆ ಅನುಸಾರವಾಗಿರುತ್ತದೆ. ಆದ್ದರಿಂದ ಪವಿತ್ರ ಕುರ್‌ಆನ್ ಮುಸ್ಲಿಮ್ ಸಮಾಜದಲ್ಲಿ ಸಾಮೂಹಿಕತೆ ಮತ್ತು ಸಂಘಟನೆಯ ಸ್ಥಾಪನೆಯ ವಿಷಯದಲ್ಲಿ ಒಂದು ಶಿಥಿಲ ಸಮಾಜದ ಪುನರ್ರಚನೆಯನ್ನು ಕೇಂದ್ರವಾಗಿಟ್ಟು ಚರ್ಚಿಸುವ ಬದಲು, ಒಂದು ನೂತನ ಸಮಾಜದ ರಚನೆಯ ಸಮಸ್ಯೆಯನ್ನು ಮುಂದಿಟ್ಟುಕೊಂಡು ಆ ಕುರಿತು ಚರ್ಚೆ ನಡೆಸಿರುವುದು ಬಹಳ ಸ್ವಾಭಾವಿಕವಾಗಿದೆ.

ಈ ಮೂರು ಸುಸ್ಪಷ್ಟ ವಾಸ್ತವಗಳನ್ನು ಗಮನದಲ್ಲಿಟ್ಟುಕೊಂಡು, ಈ ಸಮುದಾಯವನ್ನು ಪುನಃ ಸಂಘಟಿಸುವ ನಿಟ್ಟಿನಲ್ಲಿ ನಮಗೆ ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ನಿಂದ ಸಿಗಬಹುದಾದ ಮಾರ್ಗದರ್ಶನ ಏನೆಂಬುದನ್ನು ಗಮನಿಸಿರಿ

ಮುಸ್ಲಿಮ್ ಸಮುದಾಯವನ್ನು ಪ್ರಥಮವಾಗಿ ಸಂಘಟಿಸುವಾಗ ಅದಕ್ಕೆ ಬೇಕಾಗಿ ಪವಿತ್ರ ಕುರ್‌ಆನ್ ನೀಡಿದ ಆದೇಶಗಳನ್ನು ನಾವು ಈ ಹಿಂದಿನ ಅಧ್ಯಾಯಗಳಲ್ಲೇ ಅಭ್ಯಸಿಸಿದ್ದಾಯಿತು. ಅಲ್ಲದೆ ಅಲ್ಲಿ ಪ್ರವಾದಿ(ಸ) ಈ ಆದೇಶಗಳನ್ನು ಯಾವ ರೀತಿ ಅನುಷ್ಠಾನಕ್ಕೆ ತಂದರೆಂಬುದನ್ನು ನೋಡಿದ್ದಾಯಿತು. ಈಗ ಅವೆಲ್ಲವನ್ನೂ ಮುಂದಿಟ್ಟುಕೊಂಡು, ಇಂದಿನ ಪರಿಸ್ಥಿತಿಯಲ್ಲಿ ನಮ್ಮ ಮುಂದಿರುವ ಸಮಸ್ಯೆಯನ್ನು ಪರಿಹರಿಸುವ ನಿಟ್ಟಿನಲ್ಲೂ ಅದೇ ಆದೇಶಗಳು ಪರ್ಯಾಪ್ತವಾಗುತ್ತವೆಯೇ ಎಂದು ನೋಡಬೇಕು. ಹೌದು ಎಂದಾದರೆ ಎಷ್ಟರ ಮಟ್ಟಿಗೆ ಪರ್ಯಾಪ್ತವಾಗುತ್ತದೆ ಎಂಬುದುನ್ನು ಗಮನಿಸಬೇಕು.

ಈ ನಿಟ್ಟಿನಲ್ಲಿ ಒಂದು ಸ್ಪಷ್ಟ ತೀರ್ಮಾನಕ್ಕೆ ತಲುಪಬೇಕಿದ್ದರೆ, ಪವಿತ್ರ ಕುರ್‌ಆನ್‌ನ ಪ್ರಸ್ತುತ ಆದೇಶಗಳು, ಅವುಗಳ ಶೈಲಿ ಮತ್ತು ಪ್ರವಾದಿ ಮುಹಮ್ಮದ್(ಸ) ಅವರು ಈ ನಿಟ್ಟಿನಲ್ಲಿ

ಅನುಸರಿಸಿದ ಕಾರ್ಯವಿಧಾನದ ಆಂತರಿಕ ಸ್ವರೂಪವನ್ನು ಸೂಕ್ಷ್ಮವಾಗಿ ಗಮನಿಸಬೇಕಾದುದು ಅಗತ್ಯ. ಅಂದರೆ ಅವೆಲ್ಲಾ ಒಂದು ತೀರಾ ವಿಶಿಷ್ಟ ಪರಿಸ್ಥಿತಿಯಲ್ಲಿ ಕೊಡಲಾದ ಆದೇಶಗಳು ಮತ್ತು ಅನುಸರಿಸಿದ ವಿಧಾನಗಳಾಗಿದ್ದರೂ, ಬೇರೆ ಪರಿಸ್ಥಿತಿಗಳಿಗೆ ಅನ್ವಯವಾಗುವಷ್ಟು ವಿಶಾಲತೆ ಅವುಗಳಲ್ಲಿ ಇದೆಯೇ ಎಂಬುದನ್ನು ನೋಡಿದಾಗ ನಿಜವಾಗಿಯೂ ಅವುಗಳಲ್ಲಿ ಅಂಥ ವಿಶಾಲತೆ ಇರುವುದನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಏಕೆಂದರೆ ಪವಿತ್ರ ಕುರ್‌ಆನ್‌ನ ಪ್ರಸ್ತುತ ಆದೇಶಗಳಲ್ಲಿ ಅವೆಲ್ಲಾ ಮೂಲಭೂತವಾಗಿ ಕೇವಲ ಒಂದು ಹೊಸ ಸಮುದಾಯದ ನಿರ್ಮಾಣಕ್ಕೆ ಮಾತ್ರ ಸಂಬಂಧಿಸಿದ ವಾಕ್ಯಗಳಾಗಿವೆಯೆಂದೋ ಅಥವಾ ಅಸ್ತಿತ್ವದಲ್ಲಿರುವ ಮುಸ್ಲಿಮ್ ಸಮಾಜದ ಸುಧಾರಣೆ ಮತ್ತು ಪುನರ್ ನಿರ್ಮಾಣಕ್ಕೆ ಅವು ಅನ್ವಯವಾಗುವುದಿಲ್ಲವೆಂದೋ ಮತ್ತು ಅದಕ್ಕಾಗಿ ಬೇರೆಯೇ ನಿಯಮಗಳನ್ನು ಅನುಸರಿಸಬೇಕಾದೀತೆಂದೋ ಎಂಬ ಯಾವ ಸೂಚನೆಯೂ ಅವುಗಳಲ್ಲಿಲ್ಲ. ಇದಕ್ಕೆ ತದ್ವಿರುದ್ಧವಾಗಿ ಆ ಎಲ್ಲ ವಾಕ್ಯಗಳಲ್ಲೂ, ಎಲ್ಲ ಪರಿಸ್ಥಿತಿಗಳಿಗೂ ಅನ್ವಯವಾಗುವಂಥ ಸಾಮಾನ್ಯ ಆದೇಶಗಳ ಲಕ್ಷಣಗಳೇ ಇರುವುದನ್ನು ನಾವು ಗುರುತಿಸಬಹುದು. ಅಲ್ಲದೆ ಅವುಗಳ ಶೈಲಿ ಕೂಡಾ ಎಲ್ಲ ಸ್ಥಿತಿಗಳಿಗೆ ಅನ್ವಯವಾಗುವಂತಿದೆ. ಅವುಗಳಲ್ಲಿ ಎಲ್ಲೂ, ಪ್ರವಾದಿವರ್ಯರೇ(ಸ)! ನೀವು ಮುಸ್ಲಿಮ್ ಸಮಾಜವನ್ನು ಇಂತಿಂಥ ಬುನಾದಿಗಳಲ್ಲಿ ಕಟ್ಟಿ ಬೆಳೆಸಿರಿ ಅಥವಾ ಪ್ರವಾದಿಯ ಸಂಗತಿಗಳೇ! ನೀವು ಇಂತಿಂಥ ವಿಧಾನಗಳ ಮೂಲಕ ನಿಮ್ಮನ್ನು ಸಂಘಟಿಸಿಕೊಳ್ಳಿರಿ ಎಂಬ ಕೇಂದ್ರೀಕೃತ ಶೈಲಿಯನ್ನು ಅನುಸರಿಸಲಾಗಿಲ್ಲ. ಬದಲಾಗಿ, ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡುತ್ತಾ ಇರಿ... ನೀವೆಲ್ಲರೂ ಅಲ್ಲಾಹನ ಪಾಶವನ್ನು ಭದ್ರವಾಗಿ ಹಿಡಿಯಿರಿ ಮತ್ತು ವಿಚ್ಛಿದ್ರರಾಗದಿರಿ ಎಂಬ ಎಲ್ಲ ಕಾಲಗಳಿಗೂ ಅನ್ವಯಿಸುವ ಶೈಲಿಯನ್ನೇ ಬಳಸಲಾಗಿದೆ. 'ಸತ್ಯವಿಶ್ವಾಸಿಗಳು' ಯಾವ ಕಾಲ ಮತ್ತು ಯಾವ ಪರಿಸ್ಥಿತಿಯಲ್ಲಿ ವಾಸಿಸುವ ಸತ್ಯವಿಶ್ವಾಸಿಗಳಾಗಿದ್ದರೂ, ಪ್ರಥಮ ಹಂತದಲ್ಲಿರುವವರಾಗಿದ್ದರೂ, ಅನಂತರದ ಹಂತಗಳಲ್ಲಿರುವವರಾಗಿದ್ದರೂ ಅವರು ಸಂಘಟಿತರಾಗಿರಬೇಕು ಎಂಬ ಧ್ವನಿ ಇಲ್ಲಿ ಸುಸ್ಪಷ್ಟವಾಗಿದೆ. ನೀವು ಇನ್ನೂ ಸಂಘಟಿತರಾಗಿಲ್ಲವೆಂದಾದರೆ ಸಂಘಟಿತರಾಗಲು ಆರಂಭಿಸಿ. ಒಮ್ಮೆ ಸಂಘಟಿತರಾಗಿದ್ದು ಆ ಬಳಿಕ ವಿಚ್ಛಿದ್ರತೆಗೆ ಒಳಗಾಗಿದ್ದರೆ ಪುನಃ ವಿಚ್ಛಿದ್ರತೆಯನ್ನು ತೊರೆದು ಸಂಘಟಿತರಾಗಿರಿ ಎಂಬ ವಿಶಾಲ ಆದೇಶ ಇದರಲ್ಲಿ ಅಡಕವಾಗಿದೆ.

ಇಲ್ಲಿ ನಾವು ಬುದ್ಧಿಯನ್ನು ಉಪಯೋಗಿಸಿ ತರ್ಕ ನಡೆಸಿದರೂ ಈ ತೀರ್ಮಾನಕ್ಕೆ ತಲುಪುತ್ತೇವೆ. ಏಕೆಂದರೆ ಸಮುದಾಯ ತೀರಾ ಪ್ರಾಥಮಿಕ ಹಂತದಲ್ಲಿದ್ದು ಅದನ್ನು ಹೊಸದಾಗಿ ಸಂಘಟಿಸುವ ಅಗತ್ಯವಿದ್ದರೂ ಅಥವಾ ಒಮ್ಮೆ ತನ್ನ ಸಂಘಟನೆಯನ್ನು ಕಳಕೊಂಡ ಸಮುದಾಯವನ್ನು ಪುನಃ ಸಂಘಟಿಸುವ ಅಗತ್ಯವಿದ್ದರೂ ಇವೆರಡರ ಉದ್ದೇಶ ಒಂದೇ ಎಂದ ಮೇಲೆ ಮತ್ತೆ ಉಳಿಯುವ ವ್ಯತ್ಯಾಸವೇನು? ಮೊದಲನೆಯ ಸ್ಥಿತಿಯಲ್ಲಿ ಸಂಘಟನೆಯ 'ಸದಸ್ಯ'ರನ್ನು ಹೊರಗಿನಿಂದ ತಂದು ಒಂದೆಡೆ ಸೇರಿಸಲಾಗುತ್ತದೆ. ಎರಡನೆಯ ಸನ್ನಿವೇಶದಲ್ಲಿ ಒಳಗಿನಿಂದಲೇ ದೂರ ದೂರ ಹರಡಿರುವ 'ಸದಸ್ಯ'ರನ್ನು ಮತ್ತೆ ಒಂದೆಡೆ ಕಲೆಹಾಕಲಾಗುತ್ತದೆ.

ಇವೆರಡರ ಮಧ್ಯೆ ಮೂಲಭೂತವಾಗಿ ವ್ಯತ್ಯಾಸವೇನಿದೆ? ವ್ಯಕ್ತಿಗಳ ನೈತಿಕ, ಸಾಮಾಜಿಕ, ಧಾರ್ಮಿಕ ಮತ್ತಿತರ ಹಕ್ಕುಗಳ ವಿಷಯದಲ್ಲಿ ಮಾತ್ರ ಒಳಗಿನವರು ಮತ್ತು ಹೊರಗಿನವರೆಂಬ ಆಧಾರದಲ್ಲಿ ಕೆಲವು ವ್ಯತ್ಯಾಸಗಳಿರಬಹುದು. ಒಬ್ಬ ವ್ಯಕ್ತಿ ಅವಿಧೇಯ ಮುಸ್ಲಿಮ್ ಆಗಿದ್ದರೂ, ಒಬ್ಬ ಮುಸ್ಲಿಮೇತರನಿಗೆ ಹೋಲಿಸಿದರೆ ಅವನಿಗೆ ಹೆಚ್ಚು ಹಕ್ಕುಗಳಿರುವುವು. ಇದುವೇ ಪ್ರಧಾನ ವ್ಯತ್ಯಾಸ. ಈ ವ್ಯತ್ಯಾಸ ಎಷ್ಟೇ ದೊಡ್ಡದಿದ್ದರೂ ಮುಸ್ಲಿಮ್ ಸಮುದಾಯದ ಪುನರ್ ರೂಪೀಕರಣದ ಮೂಲಭೂತ ತತ್ವಗಳನ್ನು ಈ ವ್ಯತ್ಯಾಸ ಯಾವ ರೀತಿಯಲ್ಲೂ ಬಾಧಿಸುವುದಿಲ್ಲ, ಬಾಧಿಸುವುದು ಅಂತಿರಲಿ, ಈ ವ್ಯತ್ಯಾಸಕ್ಕೂ ಆ ತತ್ವಗಳಿಗೂ ಯಾವುದೇ ವಿಶೇಷ ಸಂಬಂಧ ಕೂಡಾ ಇಲ್ಲ,

ಹೀಗೆ ಎಲ್ಲ ರೀತಿಯಲ್ಲೂ, ಮುಸ್ಲಿಮ್ ಸಮಾಜವನ್ನು ಮೂಲಭೂತವಾಗಿ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯಲ್ಲಿ ಪ್ರತಿಪಾದಿಸಲ್ಪಟ್ಟಿರುವ ಸೂತ್ರಗಳ ಆಧಾರದಲ್ಲಿ ಮತ್ತೆ ಸಂಘಟಿಸಲು ಸಾಧ್ಯವಿದೆ. ಆ ಸೂತ್ರಗಳ ಸಾರಾಂಶವನ್ನು ನಾವು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ತಿಳಿಯಬಹುದು.

1. ಪ್ರಥಮವಾಗಿ 'ರುಜೂಅ್ ಇಲಲ್ ಹಕ್' ಅರ್ಥಾತ್ 'ಸತ್ಯದೆಡೆಗೆ ಮರಳಿರಿ' ಎಂಬ ಕರೆಯೊಂದಿಗೆ ಕಾರ್ಯಾರಂಭ ಮಾಡಬೇಕು. ಮುಸ್ಲಿಮ್ ಸಮಾಜದಲ್ಲಿ ಜಾಗೃತಿ ಬೆಳೆಸಬೇಕು, ಭೂಮಿಯಲ್ಲಿ ಅವರ ಅಸ್ತಿತ್ವದ ಉದ್ದೇಶವೇನು? ಅವರು ತಮ್ಮದೆನ್ನುವ ಧರ್ಮವು ಅವರನ್ನು ಯಾವ ಸ್ಥಾನದಲ್ಲಿ ಕಾಣಬಯಸುತ್ತದೆ, ಸಾಮೂಹಿಕ ಕ್ಷೇತ್ರದ ಯಾವ ಪವಿತ್ರ ಕಾರ್ಯಾಚರಣೆಯಲ್ಲಿ ಅವರು ನಿರತರಾಗಿರಬೇಕೆಂದು ಆ ಧರ್ಮ ಅಪೇಕ್ಷಿಸುತ್ತದೆ? ಎಂಬುದನ್ನು ಅವರಿಗೆ ಚೆನ್ನಾಗಿ ಮನವರಿಕೆ ಮಾಡಿಸಬೇಕು. ಈ ಕರೆ ಅಥವಾ ಆಮಂತ್ರಣವನ್ನು ಸ್ವೀಕರಿಸಿ ಮುಂದೆ ಬರುವ ಆಯ್ದ, ಪ್ರಜ್ಞಾವಂತ ಮಂದಿಗೆ, ನೀವು ಸಂಪೂರ್ಣವಾಗಿ ನಿಮ್ಮನ್ನು ಅಲ್ಲಾಹನಿಗೆ ಸಮರ್ಪಿಸಿ ಬಿಡಬೇಕೆಂಬುದೇ ನಿಮ್ಮ ಒಡೆಯನಾದ ಅಲ್ಲಾಹನ ಆದೇಶ ಮತ್ತು ಅಪೇಕ್ಷೆ. ಅವನ ಮೆಚ್ಚುಗೆ ಮಾತ್ರ ನಿಮ್ಮ ಧ್ಯೇಯವಾಗಿರಬೇಕು, ಬೇರಾವುದರ ಬಗ್ಗೆಯೂ ನಿಮಗೆ ಒಲವು ಇರಬಾರದು ಎಂಬುದನ್ನು ಮನವರಿಕೆ ಮಾಡಿಸಬೇಕು. (''ಅಲ್ಲಾಹನನ್ನು ಭಯಪಡಬೇಕಾದ ರೀತಿಯಲ್ಲಿ ಭಯಪಡಿರಿ... ನೀವು ಮುಸ್ಲಿಮ್ ಅಲ್ಲದ ಸ್ಥಿತಿಯಲ್ಲಿ ಮರಣ ಹೊಂದದಿರಿ.'' ಪವಿತ್ರ ಕುರ್‌ಆನ್)

2. ಈ ಕರೆಯನ್ನು ವೈಚಾರಿಕವಾಗಿ ಮತ್ತು ಮನಃಪೂರ್ವಕವಾಗಿ ಅಂಗೀಕರಿಸಿ, ಪ್ರಾಯೋಗಿಕವಾಗಿ ತಮ್ಮನ್ನು ಅಲ್ಲಾಹನ ವಶಕ್ಕೆ ಅರ್ಪಿಸಿಕೊಳ್ಳಲು ಸನ್ನದ್ಧರಾಗುವ ಜನರಿಗೆ, ನೀವು ಒಂದೊಮ್ಮೆ ಮರೆತು ಬಿಟ್ಟಿದ್ದ ಯಾವ ಜೀವನೋದ್ದೇಶವನ್ನು ಈ ಮೂಲಕ ಮತ್ತೆ ಅಂಗೀಕರಿಸಿರುವಿರೋ, ಅದೊಂದು ಅತ್ಯುನ್ನತ ಉದ್ದೇಶವಾಗಿರುವುದರ ಜೊತೆಗೇ ಒಂದು ಅತ್ಯಂತ ಕಠಿಣ ಕಾರ್ಯಾಚರಣೆಯೂ ಹೌದು ಎಂಬುದನ್ನು ಮನವರಿಕೆ ಮಾಡಿಸಬೇಕು. ನಿಮ್ಮಂಥವರೆಲ್ಲರೂ ಸಂಘಟಿತರಾಗಿ, ಒಂದು ಅಭೇದ್ಯ ಗೋಡೆಯಂತೆ ಬಲವಾದ ಐಕ್ಯ

ಸ್ಥಾಪಿಸುವ ತನಕ ಪ್ರಸ್ತುತ ಉದ್ದೇಶವನ್ನು ಸಾಧಿಸಲು ನಿಮ್ಮಿಂದ ಸಾಧ್ಯವಾಗದು. ಮುಸ್ಲಿಮ್ ಮತ್ತು ಸತ್ಯವಿಶ್ವಾಸಿಗಳೆಂಬ ನೆಲೆಯಲ್ಲೂ ಆ ರೀತಿ ಸಂಘಟಿತರಾಗಬೇಕಾದುದು ನಿಮ್ಮ ಅನಿವಾರ್ಯ ಕರ್ತವ್ಯ ಎಂಬುದನ್ನೂ ಅವರಿಗೆ ತಿಳಿಸಬೇಕು. ಕೇವಲ ವೈಯಕ್ತಿಕ ನೆಲೆಯಲ್ಲಿ ನೀವು ಪ್ರತ್ಯಪ್ರತ್ಯೇಕವಾಗಿ ಮುಸ್ಲಿಮ್ ಮತ್ತು 'ಮುತ್ತಕೀ' (ಸತ್ಯಸಂಧ, ದೇವಭಕ್ತ)ಗಳಾದರೆ ಸಾಲದು, ಈ ಗುಣಗಳ ಸಾಕ್ಷಾತ್ ಪ್ರತೀಕವಾದ ಒಂದು ಸಂಘಟಿತ ಶಕ್ತಿಯಾಗಿ, ಸಮೂಹವಾಗಿ ಮಾರ್ಪಡಬೇಕು ಎಂಬುದನ್ನೂ ಅವರಿಗೆ ಮನವರಿಕೆ ಮಾಡಿಸಬೇಕು. ಸತ್ಯದೆಡೆಗೆ ಮರಳಬೇಕೆಂಬ ಆಮಂತ್ರಣಕ್ಕೆ ಪ್ರಾಮಾಣಿಕವಾಗಿ ಓಗೊಟ್ಟು ಈ ಸತ್ಯವನ್ನು ಮನಸಾರೆ ಅಂಗೀಕರಿಸಿರುವ ಜನರು ಈ ಎಲ್ಲ ಬೇಡಿಕೆಗಳನ್ನೂ ಖಂಡಿತ ಅಂಗೀಕರಿಸುವರು. ಈ ರೀತಿ ಒಂದು ಶಿಸ್ತುಬದ್ಧ ಸಂಘಟನೆಯಾಗಿ ಮಾರ್ಪಟ್ಟವರು, 'ಹಬ್ಲುಲ್ಲಾಹ್' (ಅಲ್ಲಾಹನ ಪಾಶ ಅರ್ಥಾತ್ ಅಲ್ಲಾಹನ ಧರ್ಮ) ಮತ್ತು 'ದುಖೂಲ್ ಫಿಸ್ಸಿಲ್ಮ್'(ಸಂಪೂರ್ಣ ಧರ್ಮಾನುಸರಣೆ) ಗಳೇ ತಮ್ಮನ್ನು ಪರಸ್ಪರ ಜೋಡಿಸುವ ಬುನಾದಿ ಎಂಬುದನ್ನು ನೆನಪಿಡಬೇಕು. ಇವುಗಳ ಹೊರತು ಬೇರಾವುದಾದರೂ ಆಧಾರದಲ್ಲಿ ಸಂಘಟಿತರಾಗ ಬಯಸುವವರನ್ನು ಅಲ್ಲಾಹನ ಮೆಚ್ಚುಗೆ ಮತ್ತು ಪರಲೋಕದ ವಿಜಯದ ಹೊರತು ಬೇರೇನನ್ನಾದರೂ ತನ್ನ ಧ್ಯೇಯ ಅಥವಾ ಪ್ರೇರಕ ಎಂದು ಪರಿಗಣಿಸುವವರನ್ನು ಈ ಸಂಘಟನೆಯಲ್ಲಿ ಸೇರಿಸಿಕೊಳ್ಳಬಾರದು. ಹಾಗೆಯೇ 'ಸತ್ಯ ಸಾಕ್ಷ್ಯ' (ಶಹಾದತ್ ಹಕ್) ಒಳಿತಿನ ಆದೇಶ (ಅಮ್ರ್ ಬಿಲ್ ಮಅ್‌ರೂಫ್) ಕೆಡುಕಿನ ತಡೆ (ನಹೀ ಅನಿಲ್ ಮುಂಕರ್) ಮತ್ತು 'ಧರ್ಮಸಂಸ್ಥಾಪನೆ' (ಇಕಾಮತುದ್ದೀನ್)ನ ಕರ್ತವ್ಯಗಳ ಈಡೇರಿಕೆಯ ಬದಲು ಬೇರಾವುದಾದರೂ ಉದ್ದೇಶದಿಂದ ಬರುವವರನ್ನೂ ಈ ಸಂಘಟನೆಯಿಂದ ದೂರವಿಡಬೇಕು.

3. ಹೀಗೆ ಸ್ಥಾಪಿಸಲ್ಪಡುವ ಸಂಘಟನೆಯ ಮೇಲೆ ಅತ್ಯಂತ ಮಹತ್ವದ ಎರಡು ಹೊಣೆಗಾರಿಕೆಗಳಿರುವವು. ಒಂದು ಕ್ಷಣದ ಮಟ್ಟಿಗೂ ಆ ಸಂಘಟನೆ ಆ ಹೊಣೆಗಾರಿಕೆಗಳನ್ನು ಕಡೆಗಣಿಸಬಾರದು. ಆ ಕರ್ತವ್ಯಗಳು ಯಾವಾಗಲೂ ಅದರ ಗಮನದಲ್ಲಿರಬೇಕು ಮಾತ್ರವಲ್ಲ ಅದರ ಎಲ್ಲ ಚಟುವಟಿಕೆಗಳ ಕೇಂದ್ರ ಬಿಂದು ಆ ಹೊಣೆಗಾರಿಕೆಗಳೇ ಆಗಿರಬೇಕು. ಆ ಕರ್ತವ್ಯಗಳೇನೆಂದರೆ ಮೊದಲನೆಯದಾಗಿ ಸಮುದಾಯದ ಇತರ ವ್ಯಕ್ತಿಗಳಿಗೆ ಸತ್ಯದೆಡೆಗೆ ಮರಳಬೇಕೆಂಬ ಕರೆ ಕೊಡುತ್ತಿರುವುದು, ಎರಡನೆಯದಾಗಿ ಸಂಘಟನೆಯಲ್ಲಿ ಆಗಲೇ ಸೇರಿಕೊಂಡಿರುವ ವ್ಯಕ್ತಿಗಳ ಸಮಗ್ರ ತರಬೇತಿ ಮಾಡುವುದು. ಈ ಎರಡೂ ಕಾರ್ಯಗಳ ಮಹತ್ವ ಮತ್ತು ಅಗತ್ಯವು ಹೆಚ್ಚು ವಿವರಿಸುವ ಅಗತ್ಯವೇ ಇಲ್ಲದಷ್ಟು ಸ್ಪಷ್ಟವಾಗಿದೆ. ಇಲ್ಲಿ ಮೊದಲನೆಯ ಕಾರ್ಯದ ಉದ್ದೇಶ ಸಂಘಟನೆಯನ್ನು ಬಲಪಡಿಸುವುದು, ವಿಸ್ತರಿಸುವುದು ಮತ್ತು ಕ್ರಮೇಣ ಸಮುದಾಯದ ಒಂದೊಂದು ಅಂಗವನ್ನು ತನ್ನೊಳಗೆ ಲೀನಗೊಳಿಸಲು ಸಮರ್ಥವಾಗುವಷ್ಟು ದೊಡ್ಡ ಹೆಮ್ಮರವಾಗಿ ಬೆಳೆಸುವುದೇ ಆಗಿದೆ. ಇನ್ನು ಎರಡನೆಯ ಕರ್ತವ್ಯದ ಉದ್ದೇಶವು, ಸಂಘಟನೆಯನ್ನು ಆಂತರಿಕವಾಗಿ ಬಲಾಢ್ಯಗೊಳಿಸುವುದು ಹಾಗೂ ಅದನ್ನು

ಅಭಿವೃದ್ಧಿಶೀಲವಾಗಿಡುವುದಾಗಿದೆ. ಈ ತರಬೇತಿಯ ಮೂಲಕ ಸಂಘಟನೆಯ ಜೊತೆಗಿರುವ ವ್ಯಕ್ತಿಗಳ ವಿಶ್ವಾಸ, ಶ್ರದ್ಧೆ ಮತ್ತು ಅವರ ಸ್ಫೂರ್ತಿಯನ್ನು ಸದಾ ಪ್ರಜ್ವಲವಾಗಿಡಲಾಗುತ್ತದೆ. ಅಲ್ಲದೆ ಯಾವ ಉದ್ದೇಶಕ್ಕಾಗಿ ಅವರು ಸಂಘಟನೆಯ ಜೊತೆ ಸೇರಿರುವರೋ ಆ ಉದ್ದೇಶವನ್ನು ಎಂದೂ ಮರೆಯದಂತೆ, ಅವರ ಉದ್ದೇಶವಾಗಲೀ, ಪ್ರೇರಣೆಗಳಾಗಲೀ ದುರ್ಬಲವಾಗದಂತೆ ಮತ್ತು ಬದಲಾಗದಂತೆ ನೋಡಿಕೊಳ್ಳುವುದೂ ಈ ತರಬೇತಿಯ ಉದ್ದೇಶವಾಗಿದೆ.

## ಪುನರ್‍ರಚನೆಯ ಪ್ರಾಯೋಗಿಕ ರೂಪ

ಸಮುದಾಯದ ಸಂಘಟನೆಯ ವಿಧಾನದ ಬಗ್ಗೆ ಚರ್ಚಿಸಿ ಒಂದು ನಿರ್ಧಾರಕ್ಕೆ ಬಂದ ಬಳಿಕ ತಾತ್ವಿಕವಾಗಿ ಚರ್ಚೆ ಪೂರ್ಣಗೊಳ್ಳಲು ಸಾಮುದಾಯಿಕ ಸಂಘಟನೆಯ ಪುನರ್‍ರಚನೆಯ ಪ್ರಾಯೋಗಿಕ ರೂಪ ಏನು? ಮತ್ತು ಅದನ್ನು ಹೇಗೆ ಸಾಧಿಸಬೇಕು ಎಂಬ ಪ್ರಶ್ನೆ ಉಳಿಯುತ್ತದೆ. ಒಬ್ಬ ಪ್ರವಾದಿಯ ಉಪಸ್ಥಿತಿಯಲ್ಲಿ ಈ ಪ್ರಶ್ನೆ ಒಂದು ಸಮಸ್ಯೆಯಾಗಿರುವುದಿಲ್ಲ ಆದರೆ ಸಮುದಾಯವಾಗಿರುವಾಗ ಇದೊಂದು ಗಂಭೀರ ಸಮಸ್ಯೆಯಾಗಿರುತ್ತದೆ. ಇಲ್ಲಿ ಸಂಘಟನೆಯ ವಿಧಾನದ ಮೊದಲ ತತ್ವವನ್ನು ಅನುಷ್ಠಾನಿಸುವ ವಿಷಯ ಮಾತ್ರ ಬಹಳ ಸ್ಪಷ್ಟವಾಗಿದೆ. ಏಕೆಂದರೆ ಸಮಾಜದಲ್ಲಿ ಈ ಕುರಿತಾದ ಕರ್ತವ್ಯ ಪ್ರಜ್ಞೆ ಮೂಡುವುದನ್ನು ಮತ್ತು ಒಬ್ಬ ಅಥವಾ ಕೆಲವು ವ್ಯಕ್ತಿಗಳು 'ಸತ್ಯದೆಡೆಗೆ ಮರಳುವ' ಕರೆ ಮೊಳಗಿಸುವುದನ್ನು ಯಾವಾಗಲೂ ನಿರೀಕ್ಷಿಸ ಬಹುದು. ಇದು ಕೇವಲ ನಿರೀಕ್ಷೆ ಮಾತ್ರ ಅಲ್ಲ, ಪ್ರಾಯೋಗಿಕವಾಗಿಯೂ ಯಾವಾಗಲೂ ಹೀಗೆ ಆಗುತ್ತಲೇ ಇರುತ್ತದೆ. ಆದರೆ ಆ ನಂತರದ ಸ್ಥಿತಿ ಏನು? ಸಂಘಟನೆಗೆ ಸಂಬಂಧಿಸಿದ ಉಳಿದ ಎರಡು ತತ್ವಗಳ ಅನುಷ್ಠಾನ ಹೇಗೆ? ಈ ಕುರಿತಾದ ಕರ್ತವ್ಯ ಪ್ರಜ್ಞೆಯನ್ನು ಮತ್ತು 'ಸತ್ಯದೆಡೆಗೆ ಮರಳುವ' ಆರಂಭಿಕ ಕರೆಯನ್ನು ಅಪೇಕ್ಷಿತ ಸಂಘಟನೆಯ ಅಂತಿಮ ಗುರಿಯ ತನಕ ತಲುಪಿಸುವುದು ಹೇಗೆ? ಈ ವಿಷಯಗಳು ಸ್ಪಷ್ಟವಾಗಿಲ್ಲ. ಆದ್ದರಿಂದ ಇವುಗಳಿಗೆ ಸ್ಪಷ್ಟವಾದ ಉತ್ತರ ಕಂಡುಕೊಳ್ಳಬೇಕಾದುದು ಬಹಳ ಆವಶ್ಯಕವಾಗಿದೆ.

ಈ ವಿಷಯದಲ್ಲಿ ಸ್ವಾಭಾವಿಕವಾಗಿ ನಾವು ಕುರ್‌ಆನ್ ಮತ್ತು ಸುನ್ನತ್‌ನಿಂದಲೇ ಮಾರ್ಗದರ್ಶನ ಪಡೆಯಬೇಕಾಗಿದೆ. ಈ ಕುರಿತು ದಾರಿ ತೋರುವ ಪವಿತ್ರ ಕುರ್‌ಆನ್‌ನ ವಾಕ್ಯಗಳು ಮತ್ತು ಪ್ರವಾದಿ ವಚನಗಳ ಪೈಕಿ ಹಲವನ್ನು ಪುಸ್ತಕದ ಮೊದಲ ಭಾಗದಲ್ಲೇ ಪ್ರಸ್ತಾಪಿಸಲಾಗಿದೆ. ಅವುಗಳ ಮೇಲೆ ಈಗ ಮತ್ತೊಮ್ಮೆ ಕಣ್ಣೋಡಿಸಿ ಆಲೋಚಿಸಿರಿ. ಪ್ರತಿಯೊಂದು ಕಾರ್ಯವನ್ನು ಸಾಧ್ಯವಿದ್ದಷ್ಟು ಸಂಘಟಿತವಾಗಿ, ಸಾಮೂಹಿಕವಾಗಿ ಮತ್ತು ಒಬ್ಬ ಇಮಾಮ್ ಅಥವಾ ಅಮೀರ್(ನಾಯಕ)ನ ನೇತೃತ್ವದಲ್ಲಿ ನಿರ್ವಹಿಸುವುದನ್ನು ಕಡ್ಡಾಯಗೊಳಿಸುವ ಅಥವಾ ಅದನ್ನು ಪ್ರೋತ್ಸಾಹಿಸುವ ಧರ್ಮ, ನಮಾಝ್‌ನಂತಹ, ಮೇಲ್ನೋಟಕ್ಕೆ ಏಕಾಂತವನ್ನು ಬಯಸುವಂತೆ ಕಾಣುವ ಆರಾಧನೆಯನ್ನು ಕೂಡಾ ಕಟ್ಟುನಿಟ್ಟಾಗಿ ಸಂಘಟಿತ ವಾಗಿ ಚಾಚೂ ತಪ್ಪದೆ ಒಬ್ಬ ನಾಯಕನ ಅನುಸರಣೆ ಮಾಡುತ್ತಾ ನಿರ್ವಹಿಸಬೇಕೆಂದು

ವಿಧಿಸುವ ಧರ್ಮ ಝಕಾತ್, ಉಪವಾಸ ಮತ್ತು ಹಜ್ಜ್‌ನಂತಹ ಆರಾಧನೆಗಳನ್ನೂ ಸಾಧ್ಯ ವಿದ್ದಷ್ಟು ಸಾಮೂಹಿಕ ಮಟ್ಟದಲ್ಲಿ ಮಾಡಬೇಕೆಂದು ಆದೇಶಿಸುವ ಧರ್ಮ ಮತ್ತು ಕೇವಲ ಕಾಡಿನಲ್ಲಿ ಪ್ರಯಾಣಿಸುವ ಮೂರು ವ್ಯಕ್ತಿಗಳೂ ಕೂಡಾ ತಮ್ಮಲ್ಲೊಬ್ಬನನ್ನು ನಾಯಕನಾಗಿ ನೇಮಿಸಬೇಕೆಂಬುದನ್ನು ಕಡ್ಡಾಯಗೊಳಿಸುವ ಧರ್ಮವು ಸಮುದಾಯವನ್ನು ಸಂಘಟಿಸು ವಂತಹ ಮಹಾನ್ ಕಾರ್ಯವನ್ನು ಒಂದು ಶಿಸ್ತುಬದ್ಧ ನಾಯಕತ್ವವಿಲ್ಲದೆ ನಿರ್ವಹಿಸು ವುದನ್ನು ಮೆಚ್ಚೀತೇ? ಈನಿಟ್ಟಿನಲ್ಲಿ ಯಾವುದೇ ಯೋಜನೆ ರಹಿತ ವಿಧಾನವನ್ನು ಬಳಸುವುದು ಖಂಡಿತವಾಗಿಯೂ ಈ ಧರ್ಮದ ಸ್ವಭಾವಕ್ಕೆ ತಕ್ಕ ವಿಚಾರವಲ್ಲ.

ಖಂಡಿತವಾಗಿಯೂ ಪ್ರವಾದಿ ಮುಹಮ್ಮದ್(ಸ) ಅವರ ಮಕ್ಕಾ ಜೀವನದಲ್ಲಿ 'ನಾಯಕ' 'ಶಿಸ್ತು' 'ಅನುಸರಣೆ' ಮುಂತಾದ ಪದಗಳು ಬಳಕೆಯಲ್ಲಿದ್ದಂತೆ ಕಂಡು ಬಂದರೂ ಆ ಕಾಲದಲ್ಲಿ ಅವುಗಳ ಅರ್ಥಗಳೂ ಅಸ್ತಿತ್ವದಲ್ಲಿರಲಿಲ್ಲ ಎಂದು ನಂಬಿದರೆ ಅದು ಮೂರ್ಖತನವೆನಿಸೀತು. ಯಾವ ಪಾವನ ವ್ಯಕ್ತಿಯನ್ನು ಆತನ ಸಂಗಾತಿಗಳು ತಮ್ಮ ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುತ್ತಿದ್ದರೋ ಮತ್ತು ಆತನಿಗಾಗಿ ತಮ್ಮ ಸರ್ವಸ್ವವನ್ನೂ ಅರ್ಪಿಸಿ ಬಿಡಲು ಹಾಗೂ ಆತನ ಒಂದೊಂದು ಸೂಚನೆಯನ್ನೂ ಜಗತ್ತಿನ ದೊಡ್ಡ ದೊಡ್ಡ ಆಡಳಿತಗಾರರ ಕಟ್ಟಪ್ಪಣೆಗಳಿಗಿಂತ ಹೆಚ್ಚು ಗೌರವಾರ್ಹವೆಂದು ಭಾವಿಸುತ್ತಿದ್ದರೋ ಅಂತಹ ಒಬ್ಬ ವ್ಯಕ್ತಿಗೆ ತನ್ನ ಬಗ್ಗೆ ನಾಯಕ, ನೇತಾರ ಇತ್ಯಾದಿ ಕಾನೂನಿನ ಶಬ್ದಗಳನ್ನು ಬಳಸಬೇಕಾದ ಅಥವಾ ಅನುಸರಣೆಯ ಮುಚ್ಚಳಿಕೆ ಬರೆಸಿಕೊಳ್ಳಬೇಕಾದ ಅಗತ್ಯವೇ ಇರಲಿಲ್ಲ. ಆದರೂ ಅಲ್ಲಿ ನಾಯಕತ್ವ, ಅನುಸರಣೆ, ಶಿಸ್ತು ಮತ್ತು ಸಂಘಟನೆ ಅತ್ಯುತ್ತಮ ಸ್ವರೂಪದಲ್ಲಿ ಅಸ್ತಿತ್ವದಲ್ಲಿತ್ತು. ಪವಿತ್ರ ಕುರ್‌ಆನ್‌ನಲ್ಲಿ ಇರುವ ಎಲ್ಲ ವಿಷಯಗಳಲ್ಲಿ ಪರಸ್ಪರರ ಜೊತೆ ಸಮಾಲೋಚನೆ ನಡೆಸುವವರು ಎಂದು ಸತ್ಯವಿಶ್ವಾಸಿಗಳನ್ನು ವರ್ಣಿಸುವ ವಾಕ್ಯವು ಮಕ್ಕಾದಲ್ಲೇ ಅವತೀರ್ಣಗೊಂಡಿತ್ತು ಎಂಬ ಅಂಶವು ಇಲ್ಲಿ ಬಹಳ ಗಮನಾರ್ಹ.

ಮಕ್ಕಾ ಜೀವನ ಕಾಲದಲ್ಲಿ ಶಿಸ್ತು, ಸಂಘಟನೆ, ಅನುಸರಣೆ ಮುಂತಾದ ಪದಗಳು ಬಳಕೆಯಲ್ಲಿ ಇರಲಿಲ್ಲವಾದರೂ ಅಲ್ಲಿ ಬಹಳ ಜೀವಂತ ಸುಶಕ್ತ ಹಾಗೂ ಅರ್ಥಪೂರ್ಣವಾದ ಶಿಸ್ತು ಮತ್ತು ಸಂಘಟನೆ ಅಸ್ತಿತ್ವದಲ್ಲಿ ಇತ್ತು ಎಂಬುದಕ್ಕೆ ಪವಿತ್ರ ಕುರ್‌ಆನ್‌ನ ಪ್ರಸ್ತುತ ವಾಕ್ಯವೇ ಸ್ಪಷ್ಟ ಪುರಾವೆ ಆಗಿದೆ. ಅಂದು ಸಮುದಾಯದಲ್ಲಿ ಎಲ್ಲ ಪ್ರಾಮುಖ್ಯ ವಿಷಯಗಳ ಬಗ್ಗೆ ಪರಸ್ಪರ ಸಮಾಲೋಚನೆ, ವಿಚಾರ ವಿನಿಮಯ ನಡೆಸಿದ ಬಳಿಕವೇ ತೀರ್ಮಾನಗಳನ್ನು ಕೈಗೊಳ್ಳುವ ಸಂಪ್ರದಾಯ ಅಸ್ತಿತ್ವದಲ್ಲಿತ್ತು. ಪ್ರವಾದಿವರ್ಯರ ಪೂರ್ವಾನುಮತಿ ಇಲ್ಲದೆ ಯಾವುದೇ ಕಾರ್ಯ ನಡೆಯುತ್ತಿರಲಿಲ್ಲ ಎಂಬುದೂ ಈ ವಾಕ್ಯದಿಂದ ಸ್ಪಷ್ಟವಾಗುತ್ತದೆ.

ಇಲ್ಲಿ ತಾತ್ವಿಕ ವಾಸ್ತವಿಕತೆಯೊಂದನ್ನು ಮೊದಲು ಅರ್ಥ ಮಾಡಿಕೊಳ್ಳಬೇಕಾಗಿದೆ. ಸತ್ಯ ಧರ್ಮವನ್ನು ಸ್ವೀಕರಿಸುವ ಜನರಲ್ಲಿ ಮಕ್ಕಾದ ಅಂದಿನ ಸತ್ಯವಿಶ್ವಾಸಿಗಳಲ್ಲಿ ಇದ್ದಂತಹ ಗುಣ ವೈಶಿಷ್ಟ್ಯಗಳು ಇರುವ ತನಕ ಹಾಗೂ ಅವರ ನಾಯಕ ಮತ್ತು ಮಾರ್ಗದರ್ಶಿ ವ್ಯಕ್ತಿಗಳಲ್ಲಿ ಅಂದಿನ ಮಕ್ಕಾದವರ ನಾಯಕನಲ್ಲಿ ಇದ್ದಂತಹ ಅದ್ವಿತೀಯ ವೈಶಿಷ್ಟ್ಯಗಳು ಇರುವ ತನಕ ಯಾರಿಗೂ 'ಸಂಘಟನೆ' 'ನಾಯಕತ್ವ' 'ಅನುಸರಣೆ' 'ಶಿಸ್ತು' ಮುಂತಾದ ಪದಗಳನ್ನು ಬಳಸುವ ಅಗತ್ಯವೇ ಇರುವುದಿಲ್ಲ, ಮಾತ್ರವಲ್ಲ ಅವುಗಳನ್ನು ಬಳಸಿದರೆ ಒಂದೆಡೆ ನಾಯಕನ ಸ್ಥಾನದಲ್ಲಿರುವ ಆ ಅತ್ಯಂತ ಶ್ರೇಷ್ಠ ವ್ಯಕ್ತಿಯ ಘನತೆಗೆ ಮತ್ತು ಇನ್ನೊಂದೆಡೆ ಅವನ ಅತ್ಯಂತ ಪ್ರಾಮಾಣಿಕ ಅನುಯಾಯಿಗಳ ಪ್ರೇಮ ಮತ್ತು ಗೌರವದ ಪವಿತ್ರ ಭಾವನೆಗಳಿಗೆ ಅಪಚಾರ ಬಗೆದಂತಾದೀತು. ಎರಡೂ ಕಡೆ ಅಥವಾ ಈ ಪೈಕಿ ಒಂದು ಕಡೆ ಇಂತಹ ಅಪೇಕ್ಷಿತ ವೈಶಿಷ್ಟ್ಯಗಳು ಇಲ್ಲದಿರುವಲ್ಲಿ ಮಾತ್ರ ಪ್ರಸ್ತುತ ಪದಗಳನ್ನು ಬಳಸಬೇಕಾದ ಅಗತ್ಯ ಉಂಟಾಗುತ್ತದೆ. ಆದ್ದರಿಂದಲೇ ಪವಿತ್ರ ಕುರ್‌ಆನ್ ಮಕ್ಕಾದಲ್ಲಿ 'ಅಲ್ಲಾಹನನ್ನು ಭದ್ರವಾಗಿ ಅವಲಂಬಿಸಿರಿ' ಎಂದು ಮಾತ್ರ ಹೇಳಿ ತೃಪ್ತವಾಯಿತು. ಆದರೆ ಮದೀನಾದಲ್ಲಿ ಅದು 'ಅಲ್ಲಾಹನ ಪಾಶವನ್ನು ಭದ್ರವಾಗಿ ಅವಲಂಬಿಸಿರಿ' ಮತ್ತು 'ವಿಚ್ಛಿದ್ರರಾಗದಿರಿ' ಎಂದು ವಿವರವಾಗಿ ಸ್ಪಷ್ಟೀಕರಿಸಬೇಕಾಯಿತು.[1] ಇದೇ ರೀತಿ ಮಕ್ಕಾ ಜೀವನದಲ್ಲಿ ಶಿಸ್ತು ಅನುಸರಣೆ ಮುಂತಾದ ಪದಗಳ ಪ್ರಯೋಗವೇ ಆಗಿರಲಿಲ್ಲ, ಆದರೆ ಮದೀನಾಪರ್ವ ಆರಂಭವಾಗುತ್ತಿದ್ದಂತೆ 'ಪ್ರವಾದಿಯನ್ನು ಅನುಸರಿಸಿರಿ' ಎಂಬ ಶಬ್ದಗಳ ಪ್ರಯೋಗ ಆರಂಭಿಸಲಾಯಿತು. ಮಕ್ಕಾ ಮತ್ತು ಮದೀನಾದ ಅನುಯಾಯಿಗಳ ಗುಣಮಟ್ಟದಲ್ಲಿನ ವ್ಯತ್ಯಾಸವೇ ಈ ಬದಲಾವಣೆಗೆ ಕಾರಣ ಎನ್ನಬಹುದು. ಮಕ್ಕಾದಂತೆ ಮದೀನಾದಲ್ಲಿ ಒಂದು ಅಪವಾದವೂ ಇಲ್ಲದೆ ಪ್ರತಿಯೊಬ್ಬರೂ ಶಿಸ್ತು. ಸಂಯಮ, ಪ್ರಾಮಾಣಿಕತೆ ಮತ್ತು ಅನುಸರಣೆಯ ಸಾಕಾರ ಮೂರ್ತಿಗಳು ಎಂದು ಹೇಳಬಹುದಾದ ಪರಿಸ್ಥಿತಿ ಇರಲಿಲ್ಲ, ಅಲ್ಲಿ ಕೆಲವು ಅರೆ ವಿಶ್ವಾಸದ ಮತ್ತು ಕೆಲವು ಕಪಟ ವಿಶ್ವಾಸದ ಜನರು ಕೂಡಾ ಮುಸ್ಲಿಮರ ಮಧ್ಯೆ ನುಸುಳಿಕೊಂಡಿದ್ದರು. ಅವರ ಕಾಪಟ್ಯ ಮತ್ತು ವಿಶ್ವಾಸ ದೌರ್ಬಲ್ಯಗಳು ಅವರಿಂದ ಅನೇಕ ಬಗೆಯ ಅಪರಾಧಗಳನ್ನೂ ಆಜ್ಞೋಲ್ಲಂಘನೆಗಳನ್ನೂ ಮಾಡಿಸುತ್ತಿತ್ತು. ಆದ್ದರಿಂದ ಸತ್ಯವಿಶ್ವಾಸಿಗಳನ್ನು ಅಧಿಕೃತವಾಗಿ ಒಂದು ಸಂಘಟಿತ ಪಡೆಯಾಗಿ ಕಟ್ಟುವುದು ಮತ್ತು ಸ್ಪಷ್ಟವಾದ ಶಬ್ದಗಳಲ್ಲಿ ಅಲ್ಲಾಹನನ್ನು ಅವನ ಪ್ರವಾದಿಗಳನ್ನು, ಹೊಣೆಗಾರ ನಾಯಕರನ್ನು ಅನುಸರಿಸಿರಿ ಎಂದು ಆದೇಶಿಸುವುದು ಅನಿವಾರ್ಯವಾಯಿತು.

ಇದು ಮುಸ್ಲಿಮರ ನಾಯಕ ಮತ್ತು ಆತನ ಅನುಯಾಯಿಗಳು ಎಲ್ಲರೂ ಅತ್ಯುನ್ನತ ಮಟ್ಟದ ಆದರ್ಶ ಚಾರಿತ್ರ್ಯ ಮತ್ತು ಮಾದರೀ ಗುಣವಿಶೇಷತೆಗಳುಳ್ಳವರಾಗಿದ್ದ ಮತ್ತು ಅವರ

1. 'ಅಲ್ಲಾಹನನ್ನು ಭದ್ರವಾಗಿ ಅವಲಂಬಿಸಿರಿ' ಎಂಬ ಪದವು ಹಜ್ಜ್ ಅಧ್ಯಾಯದ್ದಾಗಿದ್ದು ಅದು ಮಕ್ಕಾದಲ್ಲಿ ಅವತೀರ್ಣಗೊಂಡಿತ್ತು. 'ಅಲ್ಲಾಹನ ಪಾಶವನ್ನು ಭದ್ರವಾಗಿ ಅವಲಂಬಿಸಿರಿ ಮತ್ತು ವಿಚ್ಛಿದ್ರರಾಗದಿರಿ' ಎಂಬ ಈ ವಾಕ್ಯವು 'ಆಲಿ ಇಮ್ರಾನ್' ಅಧ್ಯಾಯದ್ದಾಗಿದ್ದು ಇದು ಮದೀನಕ್ಕೆ ಅವತೀರ್ಣಗೊಂಡಿತ್ತು.

ಮಧ್ಯೆ ದುರ್ಬಲ ಗುಣಗಳುಳ್ಳ ಕೆಲವು ಮಂದಿ ಮಾತ್ರ ನುಸುಳಿಕೊಂಡಿದ್ದ ಪರಿಸ್ಥಿತಿಯ ಚಿತ್ರಣವಾಯಿತು. ಇನ್ನು ಇದಕ್ಕೆ ತದ್ವಿರುದ್ಧವಾದ ಪರಿಸ್ಥಿತಿಗಳ ವಿಷಯ, ಇಸ್ಲಾಮೀ ಇತಿಹಾಸವು ಉದ್ದಕ್ಕೂ ಅಂತಹ ಸನ್ನಿವೇಶಗಳ ಚಿತ್ರಣದಿಂದ ತುಂಬಿದೆ. ಯಾವುದಾದರೂ ಕಾರಣಕ್ಕಾಗಿ ಮುಸ್ಲಿಮರು ಕೆಲವು ದಿನಗಳ ಮಟ್ಟಿಗಾದರೂ ಪ್ರವಾದಿ ಮುಹಮ್ಮದ್(ಸ) ಅವರ ಸಾನ್ನಿಧ್ಯದಿಂದ ದೂರವಾಗಿರುವುದಾದರೆ ಆಗಲೂ ಅವರು ಒಬ್ಬ ನಾಯಕನನ್ನು ನೇಮಿಸದೇ ಅಥವಾ ಆರಿಸದೇ ಇರುತ್ತಿರಲಿಲ್ಲ. ಮದೀನಾ ಜೀವನದಲ್ಲಿ ನಿತ್ಯವೂ ಯಾವುದಾದರೂ ಕಾರಣಕ್ಕಾಗಿ ವಿವಿಧೆಡೆಗಳಿಗೆ ಸೇನಾತುಕಡಿಗಳನ್ನು, ನಿಯೋಗಗಳನ್ನು ಕಳಿಸಬೇಕಾಗುತ್ತಿತ್ತು. ಆಗಲೂ ಯಾವುದೇ ತುಕಡಿಯಾಗಲೀ, ನಿಯೋಗವಾಗಲೀ, ನಾಯಕನಿಲ್ಲದೆ ಹೊರಡುತ್ತಿರಲಿಲ್ಲ. ಮಕ್ಕಾದಲ್ಲಿ ಇಂತಹ ಸನ್ನಿವೇಶಗಳು ತಲೆದೋರಲಿಲ್ಲವಾದರೂ ಅಕಸ್ಮಾತ್ ತಲೆದೋರಿದಾಗ ಇದೇ ನಿಲುವನ್ನು ಅನುಸರಿಸಲಾಯಿತು. ಕೆಲವು ಮುಸ್ಲಿಮರು ಅಬಿಸೀನಿಯಾಗೆ 'ಹಿಜ್ರತ್' (ವಲಸೆ) ಹೊರಟಾಗ ಅವರೆಲ್ಲರೂ ಪ್ರತ್ಯಪ್ರತ್ಯೇಕವಾಗಿ ಹೊರಡಲಿಲ್ಲ, ಅವರು ಸಂಘಟಿತ ಗುಂಪುಗಳಾಗಿ ಮತ್ತು ನಿಯುಕ್ತ ವ್ಯಕ್ತಿಗಳ ನಾಯಕತ್ವದಲ್ಲಿ ಹಿಜ್ರತ್ ಮಾಡಿದ್ದರು. ಉದಾಹರಣೆಗೆ ಹತ್ತು 'ಮುಹಾಜಿರ್'ಗಳ ಮೊದಲ ಗುಂಪು ಹಝ್ರತ್ ಉಸ್ಮಾನ್ ಬಿನ್ ಮಝ್‌ಊನ್(ರ) ಅವರ ನೇತೃತ್ವದಲ್ಲಿ ಹಿಜ್ರತ್ ಮಾಡಿತು. (ಸೀರತ್ ಇಬ್ನು ಹಶಾಮ್ ಭಾಗ- 1) ಈ ಎಲ್ಲಾ ವಾಸ್ತವಿಕತೆಗಳನ್ನು ಗಮನಿಸಿದ ಬಳಿಕ ಯಾರಿಗೂ ಪ್ರವಾದಿಯವರಿಗೆ(ಸ) ಮಕ್ಕಾ ಜೀವನದಲ್ಲಿ ಯಾವುದೇ ಶಿಸ್ತಾಗಲೀ, ಸಂಘಟನೆಯಾಗಲೀ ಇರಲಿಲ್ಲ ಎಂದು ವಾದಿಸಲು ಸಾಧ್ಯವಾಗದು.

ಈ ವರೆಗಿನ ಚರ್ಚೆಯಲ್ಲಿ ಸಂಘಟನೆಯ ವಿಧಾನದ ಬಗ್ಗೆ ಧರ್ಮದ ಬೇಡಿಕೆಗಳು ಮತ್ತು ಶರೀಅತ್‌ನ ದೃಷ್ಟಿಕೋನ ಸ್ಪಷ್ಟವಾಯಿತು. ಸಮುದಾಯದ ಸುಧಾರಣೆ ಮತ್ತು ಪುನರ್‍ರೂಪೀಕರಣದ ಕಾರ್ಯವನ್ನು ಕೂಡಾ ಸಂಘಟಿತವಾಗಿ ಒಂದು ನಾಯಕತ್ವ ಮತ್ತು ಶಿಸ್ತಿಗೆ ಅಧೀನವಾಗಿ ಮಾಡಬೇಕೆಂದೇ ಪ್ರವಾದಿ ಮುಹಮ್ಮದ್(ಸ) ಅವರ ಆದರ್ಶ ಹಾಗೂ ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ನ ಒಟ್ಟು ಆದೇಶಗಳ ಇಂಗಿತವಾಗಿದೆ. ಶರೀಅತ್‌ನ ಹೊರತಾಗಿ ಬುದ್ಧಿ ಮತ್ತು ತರ್ಕದ ದೃಷ್ಟಿಯಿಂದಲೂ ಅದುವೇ ಅಪೇಕ್ಷಣೀಯವೆಂದು ತೋರುತ್ತದೆ. ಇತಿಹಾಸದಲ್ಲೆಲ್ಲೂ ಸಾಮೂಹಿಕ ಮತ್ತು ಸಂಘಟಿತ ಶ್ರಮ ನಡೆಸದೆ ಯಾರಾದರೂ ಸಾಮಾಜಿಕ ಕ್ರಾಂತಿಯನ್ನು ಉಂಟು ಮಾಡಿರುವುದು ಕಾಣ ಸಿಗುವುದಿಲ್ಲ. ಹಾಗೆ ಕ್ರಾಂತಿಯುಂಟು ಮಾಡಲು ಈ ವರೆಗೆ ಅಸಾಧ್ಯವಾಗಿರುವುದು ಮಾತ್ರವಲ್ಲ, ಜಗತ್ತಿನ ನಿಯಮಗಳನ್ನು ನೋಡಿದರೆ ಮುಂದೆಯೂ ಅದು ಅಸಾಧ್ಯವೆಂದೇ ದಿಟವಾಗಿ ಹೇಳಬಹುದು. ಆದುದರಿಂದ ಒಂದು ಸಂಘಟಿತ ಶಿಸ್ತು ವ್ಯವಸ್ಥೆಯಿಲ್ಲದೆ ಸಮುದಾಯದ ಸಂಘಟನೆಗೆ ಪ್ರಯತ್ನಿಸುವುದು ವ್ಯರ್ಥ. ವೈಯಕ್ತಿಕ ಸುಧಾರಣೆ ಮತ್ತು ತರಬೇತಿಯ ಪ್ರಯತ್ನಗಳಿಂದ ಹೆಚ್ಚೆಂದರೆ ಮುಸ್ಲಿಮರ ಈ ದೊಡ್ಡ ಜನ ಜಂಗುಳಿಯಲ್ಲಿ ಸಂಘಟಿತ ಸಾಮೂಹಿಕ ವ್ಯವಸ್ಥೆಯನ್ನು ಅಪೇಕ್ಷಿಸುವ ಬೆರಳೆಣಿಕೆಯ ಕೆಲವು ವ್ಯಕ್ತಿಗಳನ್ನು ಸೃಷ್ಟಿಸಬಹುದು. ಬಹುಕಾಲ ಶ್ರಮಿಸಿದರೆ ಅಂಥವರ ಸಂಖ್ಯೆ 'ಕೆಲವು'

ಅನ್ನು ದಾಟಿ 'ಹಲವು' ಆಗಬಹುದು. ಆದರೆ ಈ ವ್ಯಕ್ತಿಗಳೆಲ್ಲಾ ಅಪೇಕ್ಷಿತ ಸಾಮೂಹಿಕತೆಯ ಗುರಿಯನ್ನು ಸಾಧಿಸಲಿಕ್ಕಾಗಿ ಪರಸ್ಪರ ಬಲವಾಗಿ ಬೆಸೆದು ಒಂದು ನೇತೃತ್ವದಡಿಯಲ್ಲಿ ಸಂಘಟಿತ ಹೋರಾಟ ನಡೆಸುವ ತನಕ ಧರ್ಮವು ಅಪೇಕ್ಷಿಸುವಂಥ ಮತ್ತು 'ಅದಿಲ್ಲದಿದ್ದರೆ ಧರ್ಮವೇ ಇಲ್ಲ' ಎಂದು ಹಝ್ರತ್ ಉಮರ್(ರ) ಹೇಳಿದಂತಹ ಸಾಮೂಹಿಕ ವ್ಯವಸ್ಥೆ ಸ್ಥಾಪನೆಯಾಗಲು ಎಂದೆಂದಿಗೂ ಸಾಧ್ಯವಿಲ್ಲ. ಸಾಮೂಹಿಕ ವ್ಯವಸ್ಥೆ ಸ್ಥಾಪನೆಯಾಗಬೇಕೆಂದು ಅಪೇಕ್ಷಿಸುವ ಪ್ರಾಮಾಣಿಕ ವ್ಯಕ್ತಿಗಳು ಪ್ರಾಯೋಗಿಕವಾಗಿ ಸ್ವತಃ ಸಂಘಟಿತರಲ್ಲವೆಂದಾದರೆ ಅಂಥವರು ಅಪೇಕ್ಷಿತ ವ್ಯವಸ್ಥೆಯನ್ನು ಸ್ಥಾಪಿಸಬಲ್ಲರೆಂದು ನಂಬುವುದು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಕೆಲವು ಇಟ್ಟಿಗೆಗಳನ್ನು ನೋಡಿ ಅವು ಒಂದು ಸುಭದ್ರ ಕೋಟೆಯ ಕೆಲಸ ನಿರ್ವಹಿಸಬಲ್ಲವು ಎಂದು ನಂಬುವಂತಹ ಮೂರ್ಖತನವೆನಿಸೀತು. ಅತ್ಯಂತ ವಿಚಿತ್ರ ಸಂಗತಿ ಏನೆಂದರೆ ಮುಸಲ್ಮಾನರು ಬೇರೆ ಹಲವು ಕಾರ್ಯಗಳನ್ನು ಸಂಘಟಿತವಾಗಿ ಶಿಸ್ತುಬದ್ಧವಾಗಿ ಒಂದು ನಾಯಕತ್ವದ ಅಧೀನವಾಗಿ ನಿರ್ವಹಿಸುತ್ತಾರೆ ಮತ್ತು ಅದು ಧರ್ಮದ ಬೇಡಿಕೆ ಎಂದು ಭಾವಿಸುತ್ತಾರೆ. ಆದರೆ ಒಂದು ಸ್ವತಂತ್ರ ಸಮುದಾಯವೆಂಬ ನೆಲೆಯಲ್ಲಿ ಸಾಮೂಹಿಕವಾಗಿ ಪ್ರಬಲವಾದ ಒಂದು ಸಂಘಟನೆಯಲ್ಲಿ ಕೂಡುವ ಮತ್ತು ಆ ನಿಟ್ಟಿನಲ್ಲಿ ಶ್ರಮಿಸುವ ಬಗ್ಗೆ ನಿಶ್ಚಿಂತರಾಗಿದ್ದಾರೆ. ಈ ರೀತಿ ಶಿಸ್ತು ಮತ್ತು ಸಂಘಟನೆಯನ್ನು ಕಟ್ಟುವ ಹಾದಿಯಲ್ಲೇ ಅಶಿಸ್ತು ಮತ್ತು ವಿಚ್ಛಿದ್ರತೆ ವ್ಯಕ್ತವಾದರೆ ಈ ಪ್ರಯತ್ನ ಯಶಸ್ವಿಯಾಗಲು ಹೇಗೆ ಸಾಧ್ಯ?

ಸಂಪೂರ್ಣ ಸಮುದಾಯವನ್ನು ಮತ್ತೆ ಸಂಘಟಿಸುವ ಕನಸು ನನಸಾಗಬೇಕಿದ್ದರೆ, ಆ ಕನಸು ಹೊತ್ತವರೆಲ್ಲರೂ ಆ ನಿಟ್ಟಿನಲ್ಲಿ ಅತೀ ಹೆಚ್ಚು ಸೇವೆ ಸಲ್ಲಿಸಬಲ್ಲ ಒಬ್ಬ ವ್ಯಕ್ತಿಯನ್ನು ತಮ್ಮ ಸಂಘಟನೆಯ ನಾಯಕನಾಗಿ ನೇಮಿಸಬೇಕು. ಆ ಬಳಿಕ ಒಂದು ಸಮರ್ಥ ಸಮಾಲೋಚನಾ ವ್ಯವಸ್ಥೆ(ಶೂರಾ)ಯನ್ನು ಸ್ಥಾಪಿಸಬೇಕು. ಈ ರೀತಿ ಸುಸಜ್ಜಿತರಾಗಿ ತಮ್ಮ ಗುರಿಯೆಡೆಗೆ ಪ್ರಯಾಣ ಆರಂಭಿಸಬೇಕು.

ಈ ರೀತಿಯಲ್ಲಿ ಕಟ್ಟಲ್ಪಡುವ ಸಂಘಟನೆಯು ಪ್ರಸ್ತುತ 'ಅಲ್ ಜಮಾಅತ್' ಆಗಲಾರದು. ಹಾಗೆಯೇ ಅದು ಸಾಮುದಾಯಿಕ ಸಂಘಟನೆಯ ಪರ್ಯಾಯವೂ ಆಗಲಾರದು. ನಿಜವಾಗಿ ಅದು ಅಪೇಕ್ಷಿತ ವ್ಯವಸ್ಥೆಯನ್ನು ಸ್ಥಾಪಿಸಲಿಕ್ಕಿರುವ ಒಂದು ಮಾಧ್ಯಮ ಮಾತ್ರ. ಪವಿತ್ರ ಕುರ್‌ಆನ್ ಪ್ರವಾದಿಚರ್ಯೆ ಮತ್ತು 'ಖಿಲಫಾಉರ್ರಾಶಿದೀನ್'ಗಳ ಚರ್ಯೆಯೇ ಅದರ ಮಾರ್ಗದರ್ಶಿಯಾಗಿರುವುದು. ತನ್ನ ಅಪರಿಚಿತತೆಯಿಂದಲೇ ಅದು ಗುರುತಿಸಲ್ಪಡುವುದು. ಸತ್ಯಧರ್ಮದ ಯಾವೆಲ್ಲ ಅಂಗಗಳನ್ನು ಊನಗೊಳಿಸಲಾಗಿದೆಯೋ ಅವುಗಳನ್ನು ಮತ್ತೆ ಸರಿಪಡಿಸಲು ಅದು ಸರ್ವ ಪ್ರಯತ್ನವನ್ನೂ ಮಾಡುವುದು.

# ಏಕಾಂತತೆ

## ಏಕಾಂತತೆಯ ವಿಧಿ

ಈಮಾನ್ ಮತ್ತು ಇಸ್ಲಾಮ್‌ನ ಮಟ್ಟಿಗೆ ಸಂಘಟನೆ ಮತ್ತು ಸಾಮೂಹಿಕತೆ ಎಷ್ಟು ಅವಶ್ಯಕ ಮತ್ತು ಎಷ್ಟು ಅನಿವಾರ್ಯ ಎಂಬುದನ್ನು ಈ ಹಿಂದಿನ ಅಧ್ಯಾಯಗಳಲ್ಲಿ ವಿವರವಾಗಿ ತಿಳಿಸಲಾಯಿತು. ಆದರೆ ಇನ್ನೊಂದೆಡೆ ಸಮಾಜ ಮತ್ತು ಸಂಘಟನೆಯಿಂದ ಸಂಪೂರ್ಣ ದೂರವಾಗಿ ತೀರಾ ಏಕಾಂತದಲ್ಲಿ ಸಾಗಿಸುವ ಬದುಕು ಕೂಡಾ ಇಸ್ಲಾಮೇತರ ಬದುಕಲ್ಲ ಎಂದು ಸೂಚಿಸುವ ಕೆಲವು ಸೂಚನೆಗಳು ಪವಿತ್ರ ಕುರ್‌ಆನ್‌ನಲ್ಲೂ ಕೆಲವು ಹದೀಸ್‌ಗಳಲ್ಲೂ ಕಂಡು ಬರುತ್ತವೆ.

ಉದಾ: ಪವಿತ್ರ ಕುರ್‌ಆನ್‌ನ ಅಲ್‌ಕಹ್ಫ್ (18) ಅಧ್ಯಾಯದಲ್ಲಿ 'ಅಸ್‌ಹಾಬುಲ್ ಕಹ್ಫ್'ನ ಪ್ರಸ್ತಾಪ ಇದೆ. ಅಧ್ಯಾಯದ ಎರಡನೇ ರುಕೂಅ್‌ನಲ್ಲಿ ಕೆಲವು ವ್ಯಕ್ತಿಗಳು ಜನವಾಸದಿಂದ ಬಹಳ ದೂರವಿರುವ ಸುರಕ್ಷಿತ ಗುಹೆಯೊಂದರಲ್ಲಿ ಕುಳಿತು ಅಲ್ಲಾಹನ ಸ್ಮರಣೆಯಲ್ಲಿ ಮಗ್ನರಾದ ಬಗ್ಗೆ ಪ್ರಸ್ತಾಪಿಸಲಾಗಿದೆ. ಅಲ್ಲಿ ಇರುವ ಚಿತ್ರಣದಿಂದ ಆ ವ್ಯಕ್ತಿಗಳು ಸಾಮೂಹಿಕ ಜೀವನವನ್ನು ತೊರೆದು ಅದಕ್ಕೆ ತೀರಾ ತದ್ವಿರುದ್ಧವಾದ ಬದುಕು ಸಾಗಿಸಿದ್ದರೆಂದು ತಿಳಿಯುತ್ತದೆ. ಅವರ ಈ ವರ್ತನೆಯ ಬಗ್ಗೆ ಪವಿತ್ರ ಕುರ್‌ಆನ್ ಯಾವುದೇ ಅಸಮಾಧಾನವಾಗಲಿ ಅತೃಪ್ತಿಯಾಗಲಿ ವ್ಯಕ್ತಪಡಿಸಿಲ್ಲ. ಮಾತ್ರವಲ್ಲ ಅದು ಅವರನ್ನು ಮಾದರಿ ವ್ಯಕ್ತಿಗಳೆಂದು ಹೊಗಳಿರುವುದನ್ನು ಗುರುತಿಸಬಹುದು.

''ಅವರು ತಮ್ಮ ದೇವನ ಮೇಲೆ ವಿಶ್ವಾಸವಿಟ್ಟ ಕೆಲವು ತರುಣರಾಗಿದ್ದರು. ನಾವು ಅವರಿಗೆ ಹೆಚ್ಚಿನ ಮಾರ್ಗದರ್ಶನವನ್ನು ಕೊಟ್ಟೆವು.'' (ಸೂರಃ ಅಲ್‌ಕಹ್ಫ್- 13)

ಹಾಗೆಯೇ ಈ ಪ್ರವಾದಿ ವಚನಗಳನ್ನು ನೋಡಿರಿ :

1. ಪ್ರವಾದಿವರ್ಯರೇ(ಸ)! ಯಾವ ವ್ಯಕ್ತಿ ಅತ್ಯುತ್ತಮನು ಎಂದು ಒಬ್ಬ ವ್ಯಕ್ತಿ ಕೇಳಿದನು. ಅದಕ್ಕುತ್ತರವಾಗಿ ಹೀಗೆ ಹೇಳಲಾಯಿತು; ತನ್ನ ಜೀವ ಮತ್ತು ಸಂಪತ್ತನ್ನು ತೊಡಗಿಸಿ ಅಲ್ಲಾಹನ ಮಾರ್ಗದಲ್ಲಿ ಹೋರಾಡುವವನೇ ಅತ್ಯುತ್ತಮನು. ಆ ಬಳಿಕ ಅತ್ಯುತ್ತಮನು ಯಾರು ಎಂದು ಆ ವ್ಯಕ್ತಿ ಪ್ರಶ್ನಿಸಿದಾಗ ಹೀಗೆ ಹೇಳಲಾಯಿತು; ಆ ಬಳಿಕ ಯಾವುದಾದರೂ ಬೆಟ್ಟದ ಒಂದು ಮೂಲೆಯಲ್ಲಿ ಕುಳಿತು ತನ್ನ ದೇವನನ್ನು ಆರಾಧಿಸುತ್ತಾ ಜನರನ್ನು ತನ್ನ ಕೇಡಿನಿಂದ

ದೂರವಿಟ್ಟಿರುವ ವ್ಯಕ್ತಿ. (ಮುಸ್ಲಿಮ್)

ಹಝ್ರುತ್ ಇಬ್ನು ಅಬ್ಬಾಸ್(ರ)ರ ವರದಿಯಲ್ಲಿ 'ಜನರ ಕೆಡುಕಿನಿಂದ ತನ್ನನ್ನು ದೂರವಿಟ್ಟ ವ್ಯಕ್ತಿ' ಎಂದು ಹೇಳಲಾಗಿದೆ. (ಫತ್‌ಹುಲ್ ಬಾರಿ)

2. ಇನ್ನೊಂದು ಹದೀಸ್‌ನಲ್ಲಿ ಪ್ರವಾದಿ ಮುಹಮ್ಮದ್(ಸ)ರವರು ಹೀಗೆ ಹೇಳಿರುವರು; ಜನರ ಮೇಲೆ ಎಂಥಹ ಕಾಲ ಬರಲಿದೆ.ಆಗ ಒಬ್ಬ ಮುಸಲ್ಮಾನನ ಮಟ್ಟಿಗೆ ಅವನ ಕುರಿಗಳೇ ಅತ್ಯುತ್ತಮ ಸಂಪತ್ತುಗಳಾಗುವವು. ಅವುಗಳನ್ನು ಕರೆದುಕೊಂಡು ಅವನು ಬೆಟ್ಟದ ತುದಿಗಳಲ್ಲಿ ಮತ್ತು ನೀರು ಸಿಗುವ ಸ್ಥಳಗಳಲ್ಲಿ ಅಲೆದಾಡುವನು. ತನ್ನ ಧರ್ಮವನ್ನು ಸಂರಕ್ಷಿಸುತ್ತಾ ಪ್ರಕ್ಷೋಭೆಗಳಿಂದ ದೂರ ಓಡುತ್ತಿರುವನು. (ಬುಖಾರಿ)

ಈ ಹದೀಸ್‌ಗಳಿಂದ ತಿಳಿಯುವಂತೆ ಒಂದು ವೇಳೆ ಒಬ್ಬ ಸತ್ಯವಿಶ್ವಾಸಿ ಸಾಮೂಹಿಕ ಜೀವನವನ್ನು ತೊರೆದು ಏಕಾಂತದಲ್ಲಿ ಅಲ್ಲಾಹನ ಸ್ಮರಣೆಯಲ್ಲಿ ನಿರತನಾದರೆ ಅದು ಕೂಡಾ ಶ್ಲಾಘನೀಯವೇ ಹೊರತು ಖಂಡನೀಯವಲ್ಲ.

## ಪಲಾಯನದ ಅನುಮತಿ ಶರ್ತಬದ್ಧ

ಈ ರೀತಿ ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಏಕಾಂತದ ಜೀವನವನ್ನು ಇಸ್ಲಾಮೀ ಜೀವನವೆಂದು ಸಮರ್ಥಿಸಲಾಗಿದೆ ಎಂದಂತಾಯಿತು. ಆದರೆ ಇದು ಯಾವ ಅರ್ಥದಲ್ಲಿ ಇಸ್ಲಾಮೀ ಜೀವನ? ಇದು ನಿಶ್ಶರ್ತವಾಗಿ ಇಸ್ಲಾಮೀ ಜೀವನವೇ? ಎಲ್ಲಾ ಪರಿಸ್ಥಿತಿಯಲ್ಲೂ ಇಂಥ ಏಕಾಂತದ ಜೀವನವನ್ನು ಸಾಮೂಹಿಕ ಜೀವನದಂತೆ ಶ್ಲಾಘನೀಯವೆಂದು ಪರಿಗಣಿಸಬಹುದೇ? ಈ ಪ್ರಶ್ನೆಗಳಿಗೆ ಉತ್ತರ ಪಡೆಯಲು ನಾವು ಈ ಕೆಳಗಿನ ಮೂರು ತಾತ್ವಿಕ ವಿಷಯಗಳ ಬಗ್ಗೆ ಚಿಂತನೆ ನಡೆಸಬೇಕಾದುದು ಅಗತ್ಯ.

1. ಸಾಮೂಹಿಕವಾಗಿಯೇ ಬದುಕಬೇಕೆಂದು ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಮುಸ್ಲಿಮರಿಗೆ ಕೊಡಲಾಗಿರುವ ಕಟ್ಟುನಿಟ್ಟಿನ ಆದೇಶಗಳ ಮರ್ಮವೇನು?

2. ಮನುಷ್ಯನ ಸೃಷ್ಟಿಯ ಉದ್ದೇಶ ಮತ್ತು ಮುಸ್ಲಿಮ್ ಸಮುದಾಯದ ಜೀವನೋದ್ದೇಶಗಳಿಗೆ ಹೋಲಿಸಿದರೆ ಏಕಾಂತದ ಬದುಕನ್ನು ಯಾವ ದೃಷ್ಟಿಯಿಂದ ನೋಡಬೇಕು?

3. ಏಕಾಂತದ ಬದುಕನ್ನು ಸಮರ್ಥಿಸುವ ಪವಿತ್ರ ಕುರ್‌ಆನ್‌ನ ಕೆಲವು ವಾಕ್ಯಗಳು ಮತ್ತು ಕೆಲವು ಹದೀಸ್‌ಗಳನ್ನು ನಿಶ್ಶರ್ತವಾಗಿ ಎಲ್ಲ ಪರಿಸ್ಥಿತಿಗಳಿಗೆ ಅನ್ವಯಗೊಳಿಸಬಹುದೇ? ಅಥವಾ ಅವುಗಳು ಕೇವಲ ಯಾವುದಾದರೂ ವಿಶೇಷ ಸನ್ನಿವೇಶಕ್ಕೆ ಮಾತ್ರ ಅನ್ವಯಿಸುತ್ತವೆಯೇ?

ಮೊದಲನೆಯ ಅಂಶಕ್ಕೆ ಸಂಬಂಧಿಸಿದಂತೆ ಸಾಕಷ್ಟು ವಿಷಯಗಳನ್ನು ಈ ಹಿಂದಿನ ಅಧ್ಯಾಯಗಳಲ್ಲಿ ವಿವರವಾಗಿ ತಿಳಿಸಲಾಗಿದೆ. ಸಾಮೂಹಿಕ ಜೀವನವು ಇಸ್ಲಾಮಿನ ದೃಷ್ಟಿಯಲ್ಲಿ ಕೇವಲ ಒಂದು ಆಯ್ಕೆಯ ವಿಷಯವಾಗಿರದೆ, ಇಸ್ಲಾಮ್ ಮೂಲತಃ ಕಡ್ಡಾಯವಾದ ಸಾಮೂಹಿಕ ಜೀವನವನ್ನೇ ಆಗ್ರಹಿಸುತ್ತದೆಂಬುದು ಅವುಗಳಿಂದ ವ್ಯಕ್ತವಾಗುತ್ತದೆ. ಇಸ್ಲಾಮ್

ತನ್ನ ಅನುಯಾಯಿಗಳಿಗೆ ಕೇವಲ 'ಕಡ್ಡಾಯವಾಗಿ ಸಾಮೂಹಿಕ ಜೀವನ ಸಾಗಿಸಿರಿ' ಎಂದು ಮಾತ್ರ ಆದೇಶಿಸದೆ 'ವಿಚ್ಛಿದ್ರತೆ ಮತ್ತು ಪ್ರತ್ಯೇಕತೆಯಿಂದ ದೂರವಿರಿ' ಎಂದು ಕೂಡ ಆಜ್ಞಾಪಿಸಿದೆ. ಅಲ್ಲದೆ 'ತನ್ನ ಹಿಂಡಿನಿಂದ ಬೇರ್ಪಟ್ಟು ದೂರ ಉಳಿಯುವ ಕುರಿಯನ್ನು ತೋಳವು ನುಂಗುತ್ತದೆ' ಎಂಬ ಎಚ್ಚರಿಕೆಯನ್ನು ಕೊಟ್ಟಿದೆ. ಸಮೂಹದೊಂದಿಗೆ, ಅದರ ಅಂಗವಾಗಿ ಬದುಕಬೇಕೆಂಬ ಶರೀಅತ್‌ನ ಆದೇಶವು ಒಂದು ಐಚ್ಛಿಕ ವಿಷಯವಾಗಿರದೆ ಅದರ ಪಾಲನೆ ಕಡ್ಡಾಯವಾಗಿದೆಯೆಂಬುದನ್ನೂ ಇದು ಸೂಚಿಸುತ್ತದೆ.

ಇನ್ನು ಎರಡನೆಯ ಅಂಶದ ಬಗ್ಗೆ ಹೇಳುವುದಾದರೆ ಏಕಾಂತದ ಬದುಕು ಮೂಲತಃ ಮನುಷ್ಯನ ಸೃಷ್ಟಿಯ ಹಿಂದಿನ ಉದ್ದೇಶ ಮತ್ತು ಮುಸ್ಲಿಮ್ ಸಮುದಾಯದ ಅಂಗೀಕೃತ ಜೀವನೋದ್ದೇಶಕ್ಕೆ ತೀರಾ ವಿರುದ್ಧವಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ಅಲ್ಲಾಹನ ಪ್ರಾತಿನಿಧ್ಯ ಮತ್ತು ದಾಸ್ಯಾನುಸರಣೆಯು ಮನುಷ್ಯನ ಅಸ್ತಿತ್ವದ ಉದ್ದೇಶವೆಂದು ತಿಳಿಸಲಾಗಿದೆ. ಇತ್ತ ಏಕಾಂತದ ಬದುಕು ಕೂಡ ಸಾಮೂಹಿಕ ಬದುಕಿನಂತೆಯೇ ಶುದ್ಧ ಇಸ್ಲಾಮೀ ಬದುಕೆಂದು ಅಂಗೀಕರಿಸಿರೆ ಪ್ರತಿಯೊಬ್ಬ ಮುಸ್ಲಿಮನೂ ಅಂಥ ಬದುಕು ಸಾಗಿಸಬಹುದೆಂದು ಅನುಮತಿಸ ಬೇಕಾಗುತ್ತದೆ. ಮಾತ್ರವಲ್ಲ ಏಕಾಂತದ ಬದುಕನ್ನು ಪ್ರೋತ್ಸಾಹಿಸಲಿಕ್ಕೂ ಅವಕಾಶ ಹುಟ್ಟಿಕೊಳ್ಳುತ್ತದೆ. ಹೀಗೆ ಆದಾಗ ಮುಸ್ಲಿಮರೆಲ್ಲರೂ ಸಮಾಜದಿಂದ ಬೇರ್ಪಟ್ಟು ಏಕಾಂತದ ಬದುಕನ್ನು ಸಾಗಿಸುತ್ತಾ ಮೂಲೆಗುಂಪಾಗುವಂತಹ ಒಂದು ವಿಚಿತ್ರ ಸನ್ನಿವೇಶ ನಿರ್ಮಾಣವಾದೀತು. ಅದನ್ನು ವಿರೋಧಿಸುವುದು ಕೂಡ ಅಸಾಧ್ಯವಾದೀತು. ಆದರೆ ಇಂತಹ ಸನ್ನಿವೇಶವು ಅದೆಷ್ಟೇ ಧರ್ಮಬದ್ಧವೆಂದರೂ ಅದು ಮನುಷ್ಯ ಸೃಷ್ಟಿಯ ಮೂಲ ಉದ್ದೇಶಕ್ಕೆ ತೀರಾ ವಿರುದ್ಧವಾಗಿರುತ್ತವೆಯೆಂಬುದು ಮಾತ್ರ ನಿಜ. ಏಕೆಂದರೆ ಇಂತಹ ಸನ್ನಿವೇಶದಲ್ಲಿ ಭೂಮಿಯಲ್ಲಿ ಮನುಷ್ಯನು ತಾನು 'ಅಲ್ಲಾಹನ ಪ್ರತಿನಿಧಿ'ಯೆಂಬ ನೆಲೆಯಲ್ಲಿ ತನ್ನ ಕರ್ತವ್ಯವನ್ನು ನಿರ್ವಹಿಸುವುದಕ್ಕೆ ಅವಕಾಶವೇ ಇರುವುದಿಲ್ಲ, ಹಾಗೆಯೇ ಅಪೇಕ್ಷಿತ ಸ್ವರೂಪದ ದಾಸ್ಯಾನು ಸರಣೆ ಮಾಡುವುದಕ್ಕೂ ಮನುಷ್ಯನಿಗೆ ಅವಕಾಶವಿರುವುದಿಲ್ಲ. ಮುಸ್ಲಿಮ್ ಸಮುದಾಯದ ಎಲ್ಲ ವ್ಯಕ್ತಿಗಳು ಪ್ರತ್ಯ-ಪ್ರತ್ಯೇಕವಾಗಿ ಮೂಲೆ ಸೇರಿಕೊಂಡಾಗ ಧರ್ಮ ಸಂಸ್ಥಾಪನೆ, ಒಳಿತನ್ನು ಆದೇಶಿಸುವುದು, ಕೆಡುಕಿನ ಉಚ್ಚಾಟನೆ, ಸತ್ಯಸಾಕ್ಷ್ಯ ಮುಂತಾದ ಮೂಲಭೂತ ಕರ್ತವ್ಯಗಳ ಈಡೇರಿಕೆಗೂ ಆಸ್ಪದವಿರುವುದಿಲ್ಲ. ಸಮಾಜವೇ ಇಲ್ಲದಿದ್ದಲ್ಲಿ ಒಳಿತನ್ನು ಆದೇಶಿಸುವುದಾದರೂ ಎಲ್ಲಿ? ಕೆಡುಕನ್ನು ಉಚ್ಚಾಟಿಸುವುದಾದರೂ ಎಲ್ಲಿಂದ? ಸತ್ಯದ ಸಾಕ್ಷ್ಯ ನುಡಿಯುವುದಾದರೂ ಯಾರೊಡನೆ? ಧರ್ಮವನ್ನು ಸ್ಥಾಪಿಸುವುದಾದರೂ ಎಲ್ಲಿ?

ಈಗ, ಸಮಾಜದಿಂದ ಪಲಾಯನವನ್ನು ಅನುಮತಿಸುವ ಪ್ರಸ್ತುತ ಹದೀಸ್‌ಗಳು ಮತ್ತು ಈ ಕುರಿತು ಪವಿತ್ರ ಕುರ್‌ಆನ್‌ನ ಕೆಲವು ಸೂಚನೆಗಳನ್ನು ವಿವರವಾಗಿ ಪರಿಶೀಲಿಸೋಣ. ಯಾವುದಾಧರೂ ಬೆಟ್ಟದ ಒಂದು ಮೂಲೆಯಲ್ಲಿ ಕುಳಿತು ತನ್ನ ದೇವನನ್ನು ಆರಾಧಿಸುತ್ತಾ

ಇರುವ ವ್ಯಕ್ತಿಯನ್ನು ಉನ್ನತ ಸತ್ಯವಿಶ್ವಾಸಿಯೆಂದು ಮೊದಲ ಹದೀಸ್‌ನಲ್ಲಿ ಬಣ್ಣಿಸಲಾಗಿದೆ. ಈ ವಚನದಲ್ಲಿ, ಈ ಮಾತಿನ ಜೊತೆಗೆ ಎರಡು ಪ್ರಾಮುಖ್ಯತೆ ಅಂಶಗಳಿರುವುದು ಗಮನಾರ್ಹ; ಮೊದಲನೆಯದಾಗಿ ಪ್ರವಾದಿ ಮುಹಮ್ಮದ್(ಸ) ಅವರು ಈ ವಚನದಲ್ಲಿ ಅಲ್ಲಾಹನ ಮಾರ್ಗದಲ್ಲಿ ತನ್ನ ಧನ ಮತ್ತು ಜೀವವನ್ನು ತೊಡಗಿಸಿ ಹೋರಾಡುವ ವ್ಯಕ್ತಿಯನ್ನೂ, ಯಾವುದಾದರೂ ಬೆಟ್ಟದ ತಪ್ಪಲಲ್ಲಿ ಆಶ್ರಯ ಪಡೆದುಕೊಂಡಿರುವ ವ್ಯಕ್ತಿಯನ್ನೂ ಸಮಾನರೆಂದು ಬಣ್ಣಿಸಿಲ್ಲ. 'ಯಾವ ವ್ಯಕ್ತಿ ಅತ್ಯುತ್ತಮನು?' ಎಂದು ಯಾರೋ ಪ್ರಶ್ನಿಸಿದಾಗ ಪ್ರವಾದಿ ಮುಹಮ್ಮದ್(ಸ) 'ತನ್ನ ಜೀವ ಮತ್ತು ಸಂಪತ್ತನ್ನು ತೊಡಗಿಸಿ ಅಲ್ಲಾಹನ ಮಾರ್ಗದಲ್ಲಿ ಹೋರಾಡುವವನೇ ಅತ್ಯುತ್ತಮನು' ಎಂದಷ್ಟೇ ಹೇಳಿ ಸುಮ್ಮನಾಗಿದ್ದರು. ಪ್ರಶ್ನಿಸುವ ವ್ಯಕ್ತಿ ಮತ್ತೆ ಕೆದಕಿ 'ಆ ಬಳಿಕ ಅತ್ಯುತ್ತಮನು ಯಾರು?' ಎಂದು ಪ್ರಶ್ನಿಸಿದಾಗ ಪ್ರಸ್ತುತ ಎರಡನೇ ಬಗೆಯ ವ್ಯಕ್ತಿಯ ಬಗ್ಗೆ ಹೇಳಿದರು. ಅಲ್ಲದೇ ಸ್ವತಃ ಪ್ರವಾದಿವರ್ಯರೇ(ಸ) 'ಸುಮ್ಮ' (ಆ ಬಳಿಕ) ಎಂಬ ಶಬ್ದವನ್ನು ಪ್ರಯೋಗಿ ಸುವ ಮೂಲಕ ಅವರಿಬ್ಬರ ನಡುವಣ ಅಂತರವನ್ನು ಸ್ಪಷ್ಟಪಡಿಸಿರುವರು. ಎರಡನೆಯದಾಗಿ ಸ್ವತಃ ಈ ಹದೀಸ್‌ನಿಂದಲೇ ತಿಳಿಯುವಂತೆ, ಬಹಳ ವಿಶೇಷ ಪರಿಸ್ಥಿತಿಯಲ್ಲಿ ಮತ್ತು ಇತರರನ್ನು ತನ್ನ ಕೆಡುಕಿನಿಂದಲೂ, ತನ್ನನ್ನು ಇತರರ ಕೆಡುಕಿನಿಂದಲೂ ರಕ್ಷಿಸುವ ಉದ್ದೇಶವಿದ್ದಾಗ ಮಾತ್ರ ಈ ರೀತಿ ಸಮಾಜದಿಂದ ಪಲಾಯನ ಮಾಡುವುದು ಸಮ್ಮತವೆನಿಸುತ್ತದೆ.

ಸಮಾಜದಿಂದ ಪಲಾಯನವನ್ನು ಸಮರ್ಥಿಸುವಂತೆ ಕಾಣುವ ಇನ್ನೊಂದು ಹದೀಸ್ ನಲ್ಲೂ 2 ಗಮನಾರ್ಹ ಅಂಶಗಳಿವೆ. ಮೊದಲನೆಯದಾಗಿ 'ಜನರ ಮೇಲೆ ಒಂದು ಕಾಲ ಬರಲಿದೆ...' ಎಂಬ ಪೀಠಿಕೆಯು, ತೀರಾ ಅಸಾಮಾನ್ಯವಾದ ಒಂದು ವಿಷಮ ಪರಿಸ್ಥಿತಿಯ ಬಗ್ಗೆ ಹೇಳಿರುವ ಮಾತೆಂಬುದನ್ನು ಸ್ಪಷ್ಟಪಡಿಸುತ್ತದೆ. ಎರಡನೆಯದಾಗಿ ಅಂಥ ವಿಷಮ ಪರಿಸ್ಥಿತಿ ಬಂದಾಗಲೂ, ಸಜ್ಜನ ಮುಸ್ಲಿಮರು ಬೆಟ್ಟಗಾಡುಗಳನ್ನರಸಿ ಹೋಗುವ ಉದ್ದೇಶ ಕೇವಲ ತಮ್ಮ ಧರ್ಮದ ಸಂರಕ್ಷಣೆ ಮತ್ತು ಪ್ರಕ್ಷೋಭೆಗಳಿಂದ ಮುಕ್ತಿ ಪಡೆಯುವುದು ಮಾತ್ರವಾಗಿರುತ್ತದೆ.

ಅತ್ತ ಅಸ್‌ಹಾಬುಲ್ ಕಹ್ಫ್ ಅಥವಾ ಗುಹೆಯ ಜನರ ಬಗ್ಗೆ ಪವಿತ್ರ ಕುರ್‌ಆನ್‌ನಲ್ಲಿ ರುವ ಕೆಲವು ವಾಕ್ಯಗಳಿಂದ, ಪವಿತ್ರ ಕುರ್‌ಆನ್ ಏಕಾಂತದ ಬದುಕನ್ನು ಸಮರ್ಥಿಸುತ್ತದೆಂಬ ಅಭಿಪ್ರಾಯ ಮೂಡುತ್ತದೆ. ಆದರೆ ಅಲ್ಲೂ ಕೆಲವು ಅಂಶಗಳು ಬಹಳ ಗಮನಾರ್ಹವಾಗಿವೆ. ಮೊದಲನೆಯದಾಗಿ ಇವರು ಕೇವಲ ಕೆಲವೇ ಮಂದಿಯಿದ್ದು ಅವರ ಸಮಾಜದ ಉಳಿದವರೆಲ್ಲರೂ ಬಹುದೇವಾರಾಧಕರಾಗಿದ್ದರು. ಎರಡನೆಯದಾಗಿ ಸ್ವತಃ ಪವಿತ್ರ ಕುರ್‌ಆನ್‌ನ ಪ್ರಕಾರ ಈ ಬೆರಳೆಣಿಕೆಯಷ್ಟು ಮಂದಿ ತಮ್ಮ ಸಮಾಜದ ಮುಂದೆ ತಮ್ಮ ವಿಶ್ವಾಸವನ್ನು ಘೋಷಿಸಿದ್ದರು. ಜನರನ್ನು ಬಹಿರಂಗವಾಗಿ ಏಕದೇವ ವಿಶ್ವಾಸದೆಡೆಗೆ ಆಹ್ವಾನಿಸಿದ್ದರು. ಮಾತ್ರವಲ್ಲದೆ ಚರ್ಚೆ, ವಾದ ಮತ್ತಿತರ ವಿವಿಧ ವಿಧಾನಗಳಿಂದ ತಮ್ಮ ನಂಬಿಕೆಯ ಗರಿಷ್ಠ ಪ್ರಚಾರ ಮಾಡಿದ್ದರು. ಮೂರನೆಯದಾಗಿ, ಗುಹೆಯನ್ನು ಅವರು ತಮ್ಮ ವಾಸಸ್ಥಾನವಾಗಿ ಮಾಡಿರಲಿಲ್ಲ, ಅದು ಕೇವಲ ಅವರ ತಾತ್ಕಾಲಿಕ ಆಶ್ರಯಧಾಮವಾಗಿತ್ತು. ಅಲ್ಲದೆ, ಸಮಾಜವು ಅವರ ಅಸ್ತಿತ್ವವನ್ನೇ ಸಹಿಸಲು ನಿರಾಕರಿಸಿ, ಜೀವ ಅಥವಾ ಧರ್ಮ ಎರಡರಲ್ಲೊಂದನ್ನು ಬಲಿಕೊಡಲೇಬೇಕೆಂಬ ಪರಿಸ್ಥಿತಿ

ನಿರ್ಮಿಸಿದಾಗ ಮಾತ್ರ ಅವರು ಗುಹೆಯ ಮೊರೆ ಹೊಕ್ಕಿದ್ದರು.

ಪವಿತ್ರ ಕುರ್‌ಆನ್‌ನ ವಾಕ್ಯಗಳು ಮತ್ತು ಕೆಲವು ಹದೀಸ್‌ಗಳ ಪ್ರಸ್ತುತ ವಿವರಣೆಯಿಂದ ವ್ಯಕ್ತವಾಗಿ ತಿಳಿಯುವಂತೆ, ಅವುಗಳಲ್ಲಿ ಏಕಾಂತದ ಜೀವನಕ್ಕೆ ಕೊಟ್ಟಿರುವ ಅನುಮತಿಯು ಅನಿಯಂತ್ರಿತವಾಗಿರದೆ ಶರ್ತಬದ್ಧವಾಗಿದೆ. ಕೆಲವು ವಿಶೇಷ ಸನ್ನಿವೇಶಗಳಲ್ಲಿ ಮಾತ್ರ ಈ ಅನುಮತಿಯನ್ನು ಬಳಸಿಕೊಳ್ಳಬಹುದು. ಅಂಥ ಒಂದು ದೊಡ್ಡ ಧಾರ್ಮಿಕ ಅಗತ್ಯ ಅಥವಾ ಧಾರ್ಮಿಕ ಅನಿವಾರ್ಯತೆ ಉಂಟಾದಾಗ ಮಾತ್ರ ಒಬ್ಬ ಮುಸಲ್ಮಾನನು ಈ ಅನುಮತಿಯನ್ನು ಬಳಸಿಕೊಳ್ಳುವ ಬಗ್ಗೆ ಆಲೋಚಿಸಬಹುದು.

ಏಕಾಂತದ ಬದುಕನ್ನು ಎಷ್ಟು ಮಟ್ಟಿಗೆ ಇಸ್ಲಾಮೀ ಜೀವನವೆಂದು ಪರಿಗಣಿಸಬಹುದೆಂಬ ಬಗ್ಗೆ ನಾವು ಈಗಾಗಲೇ ಹಲವು ಕೋನಗಳಿಂದ ಆಲೋಚಿಸಿದ್ದಾಯಿತು. ಇದರಿಂದ ತಿಳಿಯುವಂತೆ, ಸಮಾಜದಿಂದ ಬೇರ್ಪಟ್ಟು ಸಾಗಿಸುವ ಏಕಾಂತದ ಬದುಕು ಮತ್ತು ಸಂಘಟಿತ ಸಾಮೂಹಿಕ ಬದುಕು ಇವೆರಡನ್ನೂ ಸಮಾನ ರೀತಿಯ ಇಸ್ಲಾಮೀ ಜೀವನವೆಂದು ಕರೆಯಲು ಸಾಧ್ಯವೇ ಇಲ್ಲ, ತದ್ವಿರುದ್ಧವಾಗಿ ಸಂಘಟಿತ ಸಾಮೂಹಿಕ ಜೀವನವೇ ನಿಜವಾದ ಇಸ್ಲಾಮೀ ಜೀವನವಾಗಿದ್ದು, ಅದುವೇ ಅಪೇಕ್ಷಣೀಯವಾಗಿದೆ. ಅತ್ತ ಏಕಾಂತದ ಬದುಕು ಸಾಮಾನ್ಯ ಸ್ಥಿತಿಯಲ್ಲೂ ಅವಲಂಬಿಸಬಹುದಾದಷ್ಟು ಅಪ್ಪಟವಾದ ಇಸ್ಲಾಮೀ ಜೀವನವಲ್ಲ, ಕೇವಲ ಅತ್ಯಂತ ವಿಷಮ ಹಾಗೂ ಅನಿವಾರ್ಯ ಪರಿಸ್ಥಿತಿಯಲ್ಲಿ ಮಾತ್ರ ಅದು ಒಂದು ಸೀಮಿತ ಇಸ್ಲಾಮೀ ಜೀವನವೆನಿಸಿಕೊಳ್ಳಬಹುದು. ಇಲ್ಲಿ ವಿಷಮ ಪರಿಸ್ಥಿತಿ ಎಂದರೆ ತೀವ್ರ ಅಶಾಂತಿ ಮತ್ತು ಪ್ರಕ್ಷೋಭೆಯ ಸ್ಥಿತಿ ಎಂದು ಅರ್ಥ. ಹಾಗೆಯೇ, ಅನಿವಾರ್ಯ ಪರಿಸ್ಥಿತಿಯೆಂದರೆ, ವ್ಯಕ್ತಿಗೆ ತನ್ನ ಧರ್ಮ ಮತ್ತು ವಿಶ್ವಾಸವನ್ನು ರಕ್ಷಿಸಿಕೊಳ್ಳಲು ಅಸಾಧ್ಯವಾದ ಪರಿಸ್ಥಿತಿ ಎಂದು ಅರ್ಥ. ಅಂದರೆ, ಒಬ್ಬ ಮುಸಲ್ಮಾನನಿಗೆ ತನ್ನ ಧರ್ಮ ಮತ್ತು ವಿಶ್ವಾಸದ ರಕ್ಷಣೆ, ಪಾಲನೆ ಮತ್ತು ಪೋಷಣೆಗೆ ಸಹಕಾರಿಯಾಗಬೇಕಾದ ಸಾಮಾಜಿಕ ಜೀವನವು ತನ್ನ ಆ ಸ್ವರೂಪವನ್ನೇ ಕಳೆದುಕೊಂಡು ಈ ಅಪೇಕ್ಷಿತ ಪಾತ್ರ ನಿರ್ವಹಿಸಲಾಗದೆ, ತದ್ವಿರುದ್ಧವಾಗಿ ಧರ್ಮ ಮತ್ತು ವಿಶ್ವಾಸಕ್ಕೆ ಪ್ರತಿಕೂಲವಾಗಿ ಪರಿಣಮಿಸಿದಾಗ, ವ್ಯಕ್ತಿ ಈ ಸಾಮಾಜಿಕ ಬದುಕಿಗೆ ವಿದಾಯ ಹೇಳಲು ನಿರ್ಬಂಧಿತನಾಗುತ್ತಾನೆ. ತೀರಾ ಒಲ್ಲದ ಮನಸ್ಸಿನಿಂದ ಅವನು ಏಕಾಂತದ ಬದುಕಿನ ಮೊರೆ ಹೋಗುತ್ತಾನೆ. ತನ್ನ ಸೃಷ್ಟಿಯ ಹಿಂದಿನ ಉದ್ದೇಶದ ಈಡೇರಿಕೆಗೆ ಮತ್ತು ಮುಸ್ಲಿಮ್ ಸಮುದಾಯದವನೆಂಬ ನೆಲೆಯಲ್ಲಿ ತನ್ನ ಅಸ್ತಿತ್ವದ ಉದ್ದೇಶವನ್ನು ಈಡೇರಿಸಲು ತೀರಾ ಅವಕಾಶವಿಲ್ಲದ ಹಾಗೂ ಅಲ್ಲಾಹನ ದಾಸ್ಯಾನುಸರಣೆ ಕೇವಲ ಆಂಶಿಕವಾಗಿ ಮಾತ್ರ ಸಾಧ್ಯವಿರುವ ಈ ಬದುಕನ್ನು ಅವನು ಅವಲಂಬಿಸುವುದು ಬೇರೆ ದಾರಿ ಇಲ್ಲದಾಗ ಮಾತ್ರ.

ಒಟ್ಟಿನಲ್ಲಿ ಸಂಘಟಿತ ಸಾಮಾಜಿಕ ಜೀವನವೇ ಈಮಾನ್ ಮತ್ತು ಇಸ್ಲಾಮ್‌ನ ನೈಜ ನೆಲೆಯಾಗಿದ್ದು ಅಲ್ಲಿ ಮಾತ್ರ ಅವು ಯಥಾರ್ಥದಲ್ಲಿ ಬೆಳೆಯಲು ಮತ್ತು ಫಲ ಕೊಡಲು ಸಾಧ್ಯ. ಈ 'ನೈಜ ನೆಲೆ'ಯು ಒಬ್ಬನನ್ನು ಬದುಕಲು ಬಿಡುವಾಗ ಅನ್ಯ ಮಾರ್ಗವೇ ಇಲ್ಲದೆ ಅವನು ಏಕಾಂತದ ಪರಕೀಯ ನೆಲೆಯಲ್ಲಿ ಆಶ್ರಯ ಪಡೆಯಲು ಮತ್ತು ಒಲ್ಲದ ಮನಸ್ಸಿನಿಂದ ಅಲ್ಲಿ

ಬದುಕು ಸಾಗಿಸಲು ನಿರ್ಬಂಧಿತನಾಗುತ್ತಾನೆ.

ಸಮಾಜದಿಂದ ಬೇರ್ಪಟ್ಟು ಮೂಲೆ ಗುಂಪಾಗಿ ಸಾಗಿಸುವ ಬದುಕು ಕೇವಲ 'ತಾತ್ಕಾಲಿಕ ಇಸ್ಲಾಮೀ ಬದುಕು' ಮಾತ್ರವಾಗಿರದೆ, ಸಾಮಾಜಿಕ ಬದುಕಿಗೆ ಹೋಲಿಸಿದರೆ ಅದು ದ್ವಿತೀಯ ದರ್ಜೆಯ ಬದುಕಾಗಿರುತ್ತದೆ. ಒಬ್ಬ ವ್ಯಕ್ತಿ ತೀರಾ ಅನಿವಾರ್ಯ ಪರಿಸ್ಥಿತಿಯಿಂದ ಹಾಗೂ ತನ್ನ ಧರ್ಮ ಮತ್ತು ವಿಶ್ವಾಸದ ಹಿತದೃಷ್ಟಿಯಿಂದಲೇ ಈ ಬದುಕನ್ನು ಅವಲಂಬಿಸಿದ್ದು, ಅದರಲ್ಲಿ ಅವನ ಯಾವುದೇ ದೌರ್ಬಲ್ಯಕ್ಕೆ ಕಿಂಚಿತ್ತೂ ಪಾತ್ರವಿಲ್ಲದಿದ್ದರೂ, ಈ ಬದುಕನ್ನು ನೈಜ ಇಸ್ಲಾಮೀ ಬದುಕಿಗೆ ಸಮಾನವೆಂದು ಪರಿಗಣಿಸುವಂತಿಲ್ಲ. ಜನರಿಂದ ದೂರವಿದ್ದು ಯಾವುದೋ ಮೂಲೆಯಲ್ಲಿ ದೇವಾರಾಧನೆ ಮಾಡುವ ವ್ಯಕ್ತಿ ಸಮಾಜದ ಮಧ್ಯೆ ಇದ್ದು ಈ ಕರ್ತವ್ಯ ನೆರವೇರಿಸುತ್ತಿರುವ ವ್ಯಕ್ತಿಗೆ ಸಮಾನವೆನಿಸಿಕೊಳ್ಳಲಾರನು. ಈ ವ್ಯತ್ಯಾಸಕ್ಕೆ ಕಾರಣವೇನೆಂಬುದು ಬಹಳ ವ್ಯಕ್ತವಿದೆ. ಮೊದಲನೆಯ ವ್ಯಕ್ತಿಯ 'ದೇವಾರಾಧನೆ'ಯು ಕೇವಲ ನಮಾಝ್, ಉಪವಾಸದಂತಹ ಕೆಲವು ವೈಯಕ್ತಿಕ ಆರಾಧನೆಗಳಿಗೆ ಸೀಮಿತವಾಗಿರುತ್ತದೆ. ಆದರೆ ಎರಡನೇ ವ್ಯಕ್ತಿಯ 'ದೇವಾರಾಧನೆ'ಯು ಪ್ರಸ್ತುತ ವೈಯಕ್ತಿಕ ಕರ್ಮಗಳಿಂದ ಆರಂಭವಾಗಿ ಸಂಪತ್ತು ಮತ್ತು ಪ್ರಾಣವನ್ನು ಪಣಕ್ಕೊಡ್ಡಿ ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ಮಾಡುವಂತಹ ಆರಾಧನೆಯು ಕೊನೆಯ ಗಡಿಗಳ ವರೆಗೂ ವಿಸ್ತೃತವಾಗಿರುತ್ತದೆ. ಆದ್ದರಿಂದ ಸಹಜವಾಗಿಯೇ ಮೊದಲನೆಯವನ ದರ್ಜೆಯು ಎರಡನೆಯವನಿಗಿಂತ ಬಹಳ ಕಡಿಮೆಯದಾಗಿರುವುದು.

ಇದು ಕೇವಲ ತರ್ಕದ ತೀರ್ಮಾನವಲ್ಲ, ಪ್ರವಾದಿ ಮುಹಮ್ಮದ್(ಸ) ಅವರ ಪ್ರಸ್ತುತ ವಚನಗಳಲ್ಲೂ ಅದಕ್ಕೆ ಪುರಾವೆಗಳನ್ನು ಕಾಣಬಹುದು. 'ಅತ್ಯಂತ ಶ್ರೇಷ್ಠ ಮನುಷ್ಯ ಯಾರು?' ಎಂದು ಯಾರೋ ಕೇಳಿದಾಗ ಪ್ರವಾದಿವರ್ಯರು(ಸ) 'ಅಲ್ಲಾಹನ ಮಾರ್ಗದಲ್ಲಿ ತನ್ನ ಪ್ರಾಣ ಮತ್ತು ಸಂಪತ್ತನ್ನು ತೊಡಗಿಸಿ ಹೋರಾಡುವ ಸತ್ಯವಿಶ್ವಾಸಿ ಹಾಗೂ ಯಾವುದಾದರೂ ಬೆಟ್ಟದಲ್ಲಿ ಅವಿತುಕೊಂಡು ಅಲ್ಲಾಹನ ಆರಾಧನೆ ಮಾಡುವ ಸತ್ಯವಿಶ್ವಾಸಿ' ಎಂದು ಇಬ್ಬರನ್ನೂ ಒಟ್ಟೊಟ್ಟಿಗೆ ಪ್ರಸ್ತಾಪಿಸಲಿಲ್ಲ. ಅವರು ಕೇವಲ ಮೊದಲನೆಯ ಪ್ರಕಾರದ ಸತ್ಯವಿಶ್ವಾಸಿಯನ್ನು ಮಾತ್ರ ಪ್ರಸ್ತಾಪಿಸಿ ಸುಮ್ಮನಾದರು. ಇಂಥ ಸತ್ಯವಿಶ್ವಾಸಿ ಮಾತ್ರ ನಿಜವಾಗಿ 'ಅತ್ಯಂತ ಶ್ರೇಷ್ಠ' ಪದವಿಗೆ ಅರ್ಹ, ಉಳಿದವರು ಯಾರೂ ಅರ್ಹರಲ್ಲ ಎಂಬುದನ್ನೇ ಇದು ಸೂಚಿಸುತ್ತದೆ. 'ಅನಂತರ ಯಾರು?' ಎಂದು ಪ್ರಶ್ನಿಸಿದಾಗ 'ಅನಂತರ, ಯಾವುದಾದರೂ ಬೆಟ್ಟದಲ್ಲಿ ಅವಿತಿದ್ದು ಅಲ್ಲಿ ಅಲ್ಲಾಹನನ್ನು ಆರಾಧಿಸುವ ಸತ್ಯವಿಶ್ವಾಸಿ' ಎಂದು ಪ್ರವಾದಿ(ಸ) ಉತ್ತರಿಸಿದರು. ಇಲ್ಲಿ ಪ್ರಶ್ನಿಸುವವನು 'ಅನಂತರ ಎಂಬ ಪದವನ್ನು ಬಳಸಿರುವುದು ಹಾಗೂ ಸ್ವತಃ ಪ್ರವಾದಿವರ್ಯರು(ಸ) ಕೂಡಾ ಆ ಪದದಿಂದಲೇ ತಮ್ಮ ಉತ್ತರವನ್ನು ಆರಂಭಿಸಿರುವುದು ಗಮನಾರ್ಹವಾಗಿದೆ. ಏಕಾಂತದ ಬದುಕಿಗೆ, ಸಾಮಾಜಿಕ ಜೀವನದೆದುರು ಕೆಳಗಿನ ಸ್ಥಾನವನ್ನು ಮಾತ್ರ ಕೊಡಬಹುದು, ಸಮಾನ ಸ್ಥಾನ ಕೊಡುವಂತಿಲ್ಲ ಎಂಬುದನ್ನು ಇದು ಸ್ಪಷ್ಟವಾಗಿ ಸೂಚಿಸುತ್ತದೆ. ಶರೀಅತ್‌ನ ಭಾಷೆಯಲ್ಲಿ ಹೇಳುವುದಾದರೆ ಏಕಾಂತದ ಬದುಕು 'ರುಖ್ಸತ್'(ಅನುಮತಿ)ನ ಮಾರ್ಗ ಮಾತ್ರವಾಗಿದೆ.

ಅದು 'ಅಝೀಮತ್' (ಅಪೇಕ್ಷಣೀಯ, ಸಾಹಸದ)ನ ಮಾರ್ಗ ಅಲ್ಲ. ಆದ್ದರಿಂದಲೇ ಇಮಾಮ್ ಅಬೂದಾವೂದ್(ರ) ಅವರು ಏಕಾಂತರ ಬದುಕಿಗೆ ಸಂಬಂಧಿಸಿದ ಹದೀಸ್‌ಗಳ ಅಧ್ಯಾಯಕ್ಕೆ ಕೊಟ್ಟ ಶೀರ್ಷಿಕೆಯೇ 'ಪ್ರಕ್ಷೋಭೆಯ ಸಮಯದಲ್ಲಿ ಏಕಾಂತತೆಗೆ ಇರುವ ಅನುಮತಿ' ಎಂಬುದಾಗಿದೆ.

ಪ್ರಸ್ತುತ ಕಾರಣಗಳಿಂದಾಗಿಯೇ ಈ ಜೀವನವು ಒಂದು ರೀತಿಯ 'ಇಸ್ಲಾಮೀ' ಜೀವನವೇ ಆಗಿದ್ದರೂ, ಯಾವ ಪ್ರವಾದಿಯೂ ಈ ಮಾರ್ಗವನ್ನು ಅವಲಂಬಿಸಿರುವ ಉದಾಹರಣೆಯಿಲ್ಲ. ಸಾವಿರಾರು ಪ್ರವಾದಿಗಳ ಪೈಕಿ ಯಾವುದೇ ಪ್ರವಾದಿಯೂ ಈ ಮಾರ್ಗವನ್ನು ಅವಲಂಬಿಸಲಿಲ್ಲ. ನಿಜವಾಗಿ ಅವರಿಗೆ ನಾವು ಊಹಿಸಲೂ ಸಾಧ್ಯವಿಲ್ಲದಂಥ ಕಷ್ಟಕಾರ್ಪಣ್ಯಗಳು ಎದುರಾಗಿದ್ದುವು. ಆದರೂ ಅವರು ಪ್ರವಾದಿಗಳಾಗಿದ್ದುದರಿಂದ, ಜನವಾಸದ ಸ್ಥಳಗಳಿಂದ ದೂರ ಓಡುವ ಈ ಮಾರ್ಗವನ್ನು– ಈ ಪಲಾಯನದ ಮಾರ್ಗವನ್ನು ಅನುಸರಿಸಲಿಲ್ಲ. ಏಕೆಂದರೆ ಜನವಾಸದ ಸ್ಥಳಗಳಿಂದ ದೂರ ಹೋಗಿ ಬಿಟ್ಟರೆ ಮತ್ತೆ ಅವರು ಪ್ರವಾದಿತ್ವಕ್ಕೆ ಸಂಬಂಧಿಸಿದ ಕರ್ತವ್ಯಗಳನ್ನು ಈಡೇರಿಸುವುದೇ ಅಸಾಧ್ಯವಾಗಿತ್ತು. ಅಲ್ಲದೆ ಅವರಿಗೆ ಹಾಗೆ ಮಾಡುವ ಅಗತ್ಯವೂ ಇರಲಿಲ್ಲ. ಏಕೆಂದರೆ ಪ್ರವಾದಿಗಳ ಮಟ್ಟಿಗೆ ಅವರು ತಮ್ಮ 'ಕೇಡಿನಿಂದ' ಜನರನ್ನು ರಕ್ಷಿಸುವ ಅಥವಾ ಜನರ ಕೇಡುಗಳಿಂದ ತಮ್ಮನ್ನು ಸುರಕ್ಷಿತವಾಗಿಡುವ ಪ್ರಶ್ನೆಯೇ ಉದ್ಭಸುವುದಿಲ್ಲ. ಇನ್ನು ಉಳಿಯುವುದು ಪ್ರಾಣ ರಕ್ಷಣೆಯ ಪ್ರಶ್ನೆ. ಆ ಮಹಾನುಭಾವರು ತಮ್ಮ ಪ್ರಾಣವನ್ನು ತಮ್ಮದೆಂದು ಪರಿಗಣಿಸಿದ್ದರಲ್ಲವೇ ಅದರ ರಕ್ಷಣೆಗಾಗಿ ಅಕ್ರಮಗಳಿಂದ ದೂರ ಓಡುವ ಅಗತ್ಯ ಉಂಟಾಗುವುದು?

## ವಿಶೇಷ ಸನ್ನಿವೇಶಗಳು

ಈಗ ನಾವು ಶರೀಅತ್‌ನಲ್ಲಿ 'ಪಲಾಯನ' ಮಾರ್ಗವನ್ನು ಅನುಸರಿಸಲು ಅನುಮತಿಸಲಾಗಿರುವ ಆ ವಿಶೇಷ ಸನ್ನಿವೇಶಗಳು ಯಾವುವು ಎಂಬುದನ್ನು ನೋಡೋಣ. ಈ ಪ್ರಶ್ನೆಗೆ ತಾತ್ವಿಕವಾಗಿಯೇ ಉತ್ತರಿಸಬೇಕೆಂದರೆ, ಈಗಾಗಲೇ ಸ್ಪಷ್ಟವಾಗಿ ಹೇಳಿರುವಂತೆ ಸಮಾಜವು ಸಂಪೂರ್ಣವಾಗಿ ಅಶಾಂತಿ, ಪ್ರಕ್ಷೋಭೆ ಮತ್ತು ಗೊಂದಲಕ್ಕೆ ತುತ್ತಾಗಿರುವಾಗ ಆ ಪರಿಸ್ಥಿತಿಯಲ್ಲಿ ಆ ಗೊಂದಲಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಮತ್ತು ತನ್ನ ಧರ್ಮ ಹಾಗೂ ವಿಶ್ವಾಸವನ್ನು ಉಳಿಸಿಕೊಳ್ಳಲು ಪಲಾಯನವಲ್ಲದೆ ಬೇರಾವ ಮಾರ್ಗವೂ ಇಲ್ಲದಂಥ ವ್ಯಕ್ತಿಗೆ ಮಾತ್ರ ಈ ಅನುಮತಿ ಇದೆ. ಎರಡನೇ ಹದೀಸ್‌ನಲ್ಲಿರುವ 'ತನ್ನ ಧರ್ಮವನ್ನು ಸಂರಕ್ಷಿಸುತ್ತಾ ಪ್ರಕ್ಷೋಭೆಯಿಂದ ದೂರ ಓಡುತ್ತಿರುವವನು' ಎಂಬ ವಾಕ್ಯವು ಇದನ್ನೇ ಸೂಚಿಸುತ್ತದೆ. ಅದೇ ರೀತಿ ಮೊದಲ ಹದೀಸ್‌ನಲ್ಲಿ ಕಂಡುಬರುವ 'ಯಾವುದಾದರೂ ಬೆಟ್ಟದ ಒಂದು ಮೂಲೆಯಲ್ಲಿ ನೆಲಿತ' ವ್ಯಕ್ತಿಯ ಚಿತ್ರಣದ ಬಗ್ಗೆ ಹದೀಸ್ ವಿದ್ವಾಂಸರು, ಅದು ಕೇವಲ ಪ್ರಕ್ಷೋಭೆಯ ಕಾಲಕ್ಕೆ ಅನ್ವಯಿಸುವ ಅನುಮತಿ ಎಂದು ಸ್ಪಷ್ಟೀಕರಿಸಿರುವರು. (ಫತ್‌ಹುಲ್‌ಬಾರಿ, ಭಾಗ– 6) ಅದೇ ಹದೀಸ್‌ನಲ್ಲಿ ಮುಂದುವರಿದು 'ಜನರನ್ನು ತನ್ನ ಕೇಡಿನಿಂದ ದೂರವಿಟ್ಟಿರುವ ವ್ಯಕ್ತಿ' ಎಂದು

ವಿವರಿಸಲಾಗಿದ್ದು ಇದು ಕೂಡಾ ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ಆದರೆ ಪ್ರಾಯಶಃ ಈ ವಿಷಯದಲ್ಲಿ ಕೇವಲ ತಾತ್ವಿಕ ಉತ್ತರವು ಪರ್ಯಾಪ್ತವಾಗಲಾರದು, ಪ್ರಸ್ತುತ ಹದೀಸ್‌ಗಳಲ್ಲಿ ಇರುವ ಪ್ರಕ್ಷೋಭೆ, ಅಶಾಂತಿ ಇತ್ಯಾದಿ ಪದಗಳ ಅರ್ಥವೇನು ಮತ್ತು ಶರೀಅತ್‌ನಲ್ಲಿ, ಆ ಪ್ರಾಮುಖ್ಯ, ನಿರ್ಣಾಯಕ ಪದಗಳಿಗೆ ಕೊಡಲಾಗಿರುವ ನಿಶ್ಚಿತ ವ್ಯಾಖ್ಯಾನವೇನು ಎಂಬುದನ್ನೂ ಅರಿತುಕೊಳ್ಳುವುದು ಅಗತ್ಯ. ಪ್ರಸ್ತುತ ಪದಗಳು ಕೇವಲ ಸಾಮಾನ್ಯ ಪ್ರಕ್ಷೋಭೆ ಮತ್ತು ಅಶಾಂತಿಯನ್ನು ಸೂಚಿಸುವುದಿಲ್ಲವೆಂಬುದು ವ್ಯಕ್ತ. ಏಕೆಂದರೆ ಜಗತ್ತು ತನ್ನ ಇತಿಹಾಸದಲ್ಲಿ ಎಂದೂ ಅಂತಹ ಸಾಮಾನ್ಯ ಅಶಾಂತಿಗಳಿಂದ, ಕೆಡುಕುಗಳಿಂದ ಮುಕ್ತವಾಗಿರಲಿಲ್ಲ, ಎಷ್ಟೆಂದರೆ ಸ್ವತಃ ಪ್ರವಾದಿಯವರ ಕಾಲ ಅಥವಾ ಆನಂತರದ 'ಖುಲಫಾವು ರ್‍ರಾಶಿದೀನ್'ಗಳ ಕಾಲವು ಪೂರ್ತಿಯಾಗಿ ಎಲ್ಲ ಅಶಾಂತಿಗಳಿಂದ ಮುಕ್ತವಾಗಿತ್ತು ಎನ್ನುವಂತಿಲ್ಲ, ಏಕೆಂದರೆ ಅಂದು ಕನಿಷ್ಠ ಪಕ್ಷ ಕಾಪಟ್ಯದ ಸಮಸ್ಯೆಯಂತೂ ಇದ್ದೇ ಇತ್ತು. ಜೊತೆಗೆ, ಪರಸ್ಪರ ಭಿನ್ನಾಭಿಪ್ರಾಯಗಳಿಂದಾಗಿ ರಕ್ತರಂಜಿತ ಕಾಲಗಳೂ ತಲೆ ಎತ್ತುತ್ತಿದ್ದುವು.

ಈ ಹಿನ್ನೆಲೆಯಲ್ಲಿ ಸತ್ಯವಿಶ್ವಾಸಿಗೆ ಸಾಮಾಜಿಕ ಬದುಕಿನಿಂದ ಹಾಗೂ ತನ್ನ ಸಾಮಾಜಿಕ ಕರ್ತವ್ಯಗಳಿಂದ ದೂರ ಸರಿದು ಕೇವಲ ತನ್ನದೇ ಚಿಂತೆಯಲ್ಲಿ ಮಗ್ನನಾಗಲು ಅನುಮತಿಸುವ ಪರಿಸ್ಥಿತಿಯು ಸಾಮಾನ್ಯ ತರದ ಅಶಾಂತಿ ಅಥವಾ ಕೆಡುಕಿನ ಪರಿಸ್ಥಿತಿಯಾಗಿರದೆ ತೀರಾ ಅಸಾಮಾನ್ಯವಾದ ಕೆಡುಕು ಮತ್ತು ಪ್ರಕ್ಷೋಭೆಯ ಸನ್ನಿವೇಶ ಮಾತ್ರ ಎಂಬುದನ್ನು ಅಂಗೀಕರಿಸಬೇಕಾಗುತ್ತದೆ. ಆದರೆ ಆ ಪರಿಸ್ಥಿತಿಯು ನಿಶ್ಚಿತವಾಗಿಯೂ ಯಾವ ಪ್ರಮಾಣ ಹಾಗೂ ಯಾವ ಸ್ವರೂಪದಲ್ಲಿ 'ಅಸಾಮಾನ್ಯ' ಆಗಿರಬೇಕು? ಈ ಪ್ರಶ್ನೆಗೆ ಉತ್ತರ ಪಡೆಯಲು ನಾವು ಪ್ರಸ್ತುತ ಹದೀಸ್‌ಗಳಲ್ಲಿರುವ, 'ತನ್ನ ಧರ್ಮವನ್ನು ಸಂರಕ್ಷಿಸುತ್ತಾ ಪ್ರಕ್ಷೋಭೆಗಳಿಂದ ದೂರ ಓಡುವುದು.' 'ಜನರನ್ನು ತನ್ನ ಕೇಡಿನಿಂದ ದೂರವಿಟ್ಟಿರುವುದು' ಮುಂತಾದ ಪದಗಳನ್ನು ಬಹಳ ಸೂಕ್ಷ್ಮವಾಗಿ ಗ್ರಹಿಸಿಕೊಳ್ಳಬೇಕಾಗುತ್ತದೆ. ಈ ಪದಗಳು, ಅಶಾಂತಿ ಅಥವಾ ಪ್ರಕ್ಷೋಭೆಯ ಸ್ಥಿತಿ ಅಂದರೇನು ಎಂಬುದನ್ನು ಸರಿಯಾಗಿ ವ್ಯಾಖ್ಯಾನಿಸುತ್ತವೆ. ಇವುಗಳ ಪ್ರಕಾರ, ಒಬ್ಬ ಮುಸಲ್ಮಾನನು ಗರಿಷ್ಠ ಮಟ್ಟದಲ್ಲಿ ಪ್ರಯತ್ನಿಸಿದರೂ, ತನ್ನ ಧರ್ಮ ಮತ್ತು ವಿಶ್ವಾಸವನ್ನು ರಕ್ಷಿಸಿಕೊಳ್ಳಲಾಗದಂಥ, ಕೆಡುಕು ಮತ್ತು ಮಿಥ್ಯಶಕ್ತಿ ಹಾಗೂ ಪ್ರಭಾವವು ದಿನೇ ದಿನೇ ತೀವ್ರವಾಗಿ ಹೆಚ್ಚುತ್ತಿದ್ದು ಅವನಿಗೆ ತನ್ನ ಭವಿಷ್ಯ ತೀರಾ ಕರಾಳವಾಗಿ ಕಾಣಿಸುವಂಥ ಹಾಗೂ ಇತರರ ಕೆಡುಕುಗಳು ತನ್ನ ಮನಸ್ಸಿನ ಮೇಲೂ ಪ್ರಭಾವ ಬೀರುತ್ತಿದ್ದು ನಾಳೆ ಇತರರಂತೆ ತಾನೂ ಕರ್ಮ ಮಾಲಿನ್ಯಕ್ಕೆ ತುತ್ತಾಗಿ ಆ ಬಳಿಕ ಸ್ವತಃ ತಾನೇ ಆ ಕೆಡುಕು ಹಾಗೂ ಮಾಲಿನ್ಯಗಳ ಸಂರಕ್ಷಕ, ಪ್ರಚಾರಕ ಮತ್ತು ವಾಹಕನಾಗಿ ಮಾರ್ಪಡುವ ಕರಾಳ ಸಾಧ್ಯತೆ ಇದೆ ಎಂದು ಅವನಿಗೆ ಬಲವಾಗಿ ಅನಿಸ ತೊಡಗುವಂಥ ಸಂದರ್ಭವೇ ಆ ನಿರ್ದಿಷ್ಟ, ಅಸಾಮಾನ್ಯ ಪ್ರಕ್ಷೋಭೆಯ ಸಂದರ್ಭ.

ಒಂದು ವೇಳೆ ಪರಿಸ್ಥಿತಿಯು ಇಷ್ಟು ಕೆಟ್ಟಿಲ್ಲ ಹಾಗೂ ಪರಿಸ್ಥಿತಿಯು ವ್ಯಕ್ತಿಯ ಧರ್ಮ

ಮತ್ತು ವಿಶ್ವಾಸದ ಪಾಲಿಗೆ ಇಷ್ಟು ಮಾರಕವಾಗಿ ಪರಿಣಮಿಸಿಲ್ಲ ಎಂದಾದರೆ ಅಂಥ ಸನ್ನಿವೇಶದಲ್ಲಿ ಪಲಾಯನದ ಮಾರ್ಗ ಅನುಸರಿಸುವುದು ಸರಿಯಲ್ಲ. ಇಂಥ ಸನ್ನಿವೇಶದಲ್ಲಿ ಒಬ್ಬ ಸತ್ಯವಿಶ್ವಾಸಿಗೆ, ಸಾಮಾಜಿಕ ಬದುಕಿನಿಂದ ಸಂಬಂಧ ಕಡಿದುಕೊಂಡು ತನ್ನ ಸಾಮಾಜಿಕ ಕರ್ತವ್ಯಗಳನ್ನು ಕಡೆಗಣಿಸಿ, ಕೇವಲ ತನ್ನ ಬಗ್ಗೆ ಮಾತ್ರ ಚಿಂತಿಸುತ್ತಾ ಸಮುದಾಯವನ್ನು ಅದರ ಪಾಡಿಗೆ ಬಿಟ್ಟು, ಸಮುದಾಯವು ತನ್ನ ಸಂಘಟನೆಯನ್ನು ಕಳಕೊಂಡು, ಅದರಲ್ಲಿರುವ ಒಳಿತಿನ ಅಲ್ಪಸ್ವಲ್ಪ ಅಂಶಗಳೂ ಬತ್ತಿಹೋಗಿ ಅದು ತನ್ನ ಉದ್ದೇಶದಿಂದ ದೂರ ಸರಿಯಲು ಅಥವಾ ಬಿಟ್ಟು ಬಿಡಲು ಅನುಮತಿ ಇಲ್ಲ. ಆದರೆ ಸಮಾಜದಲ್ಲಿ ಸಂಘಟಿತ ಸಾಮೂಹಿಕ ವ್ಯವಸ್ಥೆಯು ಸಕ್ರಿಯವಾಗಿ ಅಸ್ತಿತ್ವದಲ್ಲಿದ್ದು ಸಮಾಜದಲ್ಲಿ ಒಳಿತಿನ ಆಡಳಿತ ಇರುವ ಪರಿಸ್ಥಿತಿಯಲ್ಲಿ ಮಾತ್ರ 'ಪಲಾಯನ'ದ ಅನುಮತಿಯನ್ನು ಬಳಸಿಕೊಳ್ಳಬಹುದು. ಇಂಥ ಪರಿಸ್ಥಿತಿಯಲ್ಲಿ ಕೆಲವು ಮಂದಿ ತಮ್ಮ ಅಭಿರುಚಿಯಂತೆ ಸಮಾಜದಿಂದ ಸಂಬಂಧ ಕಡಿದುಕೊಂಡು ನಿರ್ಜನ ಪ್ರದೇಶಗಳಲ್ಲಿ ಬದುಕತೊಡಗಿದರೆ ಆಗ ಸಮುದಾಯವು ಇನ್ನೂ ತನ್ನ ಕರ್ತವ್ಯದಲ್ಲಿ ನಿರತವಾಗಿದೆ ಮತ್ತು ಸಮಾಜದ ಬಹುಸಂಖ್ಯೆಯು ಅದರ ಸೇವೆ ಮತ್ತು ಸಂರಕ್ಷಣೆ ನಡೆಸುತ್ತಿದೆ. ಆದ್ದರಿಂದ ಈ ಕೆಲವು ವ್ಯಕ್ತಿಗಳು ತಮ್ಮ ಸಾಮರ್ಥ್ಯ, ಸೇವೆಗಳನ್ನೆಲ್ಲಾ ಕೇವಲ ತಮಗೇ ಸೀಮಿತಗೊಳಿಸಿಟ್ಟಿರುವುದು ಕಳವಳದಾಯಕವಲ್ಲ ಎಂದು ಸಮಾಧಾನ ಪಡಬಹುದು. ಆದರೆ ಅಲ್ಲೂ ಈ ಜನರು ಹೆಚ್ಚು ಒಳಿತಿನ ಕ್ಷೇತ್ರ ಬಿಟ್ಟು ಕಡಿಮೆ ಒಳಿತಿನ ಕ್ಷೇತ್ರವನ್ನು ಆಯ್ದುಕೊಂಡಿದ್ದಾರೆಂಬುದನ್ನು ಹೇಳಲೇಬೇಕಾಗುತ್ತದೆ.

ಇದಕ್ಕೆ ತದ್ವಿರುದ್ಧವಾಗಿ ಸಮುದಾಯವು ಕ್ರಮೇಣ ತನ್ನ ಐಕ್ಯ ಮತ್ತು ಸಂಘಟನೆಯನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದು, ಮುಸ್ಲಿಮ್ ಸಮಾಜವು ಸಂಘಟಿತ ಅಲ್ ಜಮಾಅತ್ ಆಗಿರುವ ಬದಲು ಕ್ರಮೇಣ ಒಂದು ಜನಜಂಗುಳಿಯ ರೂಪ ತಾಳುತ್ತಿದ್ದು, ಸಮಾಜವು ಇಸ್ಲಾಮಿನ ಗುರಿಯೆಡೆಗೆ ಸಾಗುವ ಬದಲು ಬೇರೆ ದಿಕ್ಕಿಗೆ ಚಲಿಸುತ್ತಿದ್ದು, ಒಟ್ಟಿನಲ್ಲಿ ಸರಿಯಾದ ಸುಭದ್ರ ಸಾಮಾಜಿಕ ವ್ಯವಸ್ಥೆಯು ಅಸ್ತಿತ್ವದಲ್ಲಿಲ್ಲದ ಮತ್ತು ಅತ್ತ ವೈಯಕ್ತಿಕವಾಗಿ ಒಬ್ಬನ ಧರ್ಮಕ್ಕೂ ಅಸ್ತಿತ್ವ ಕಳಕೊಳ್ಳುವ ಬೆದರಿಕೆ ಇಲ್ಲದಿರುವ ಸ್ಥಿತಿಯಲ್ಲಿ ಒಬ್ಬ ವ್ಯಕ್ತಿ ಸಮಾಜವನ್ನು ನರಳಲು ಬಿಟ್ಟು ಏಕಾಂತದ ಬದುಕಿಗೆ ಶರಣಾಗುವುದು ಖಂಡಿತವಾಗಿಯೂ ಇಸ್ಲಾಮೀ ಜೀವನಕ್ರಮಕ್ಕೆ ಭೂಷಣವಾದ ಹೆಜ್ಜೆಯಲ್ಲ.

## ಪ್ರಾಯೋಗಿಕ ರೂಪಗಳು

ಕೊನೆಯದಾಗಿ, ಶರೀಅತ್‌ನಲ್ಲಿ ಅನುಮತಿಸಲಾಗಿರುವ 'ಇಅ್‌ತಿಝಾಲ್' ಅಥವಾ ಸಾಮೂಹಿಕತೆಯಿಂದ ಬೇರ್ಪಡುವ ನಿಲುವಿಗೆ ಇರುವ ಮಿತಿಗಳೇನು ಎಂಬುದನ್ನು ನೋಡೋಣ. ಈ ಪ್ರಶ್ನೆಗೆ ಯಾವುದಾದರೂ ಒಂದು ನಿರ್ದಿಷ್ಟ ಉತ್ತರ ಮಾತ್ರ ಕೊಡುವುದು ಸರಿಯಲ್ಲ. ಏಕೆಂದರೆ, ಈ ಅನುಮತಿಯು ಸಂಪೂರ್ಣವಾಗಿ ಪರಿಸ್ಥಿತಿಗಳನ್ನು ಅವಲಂಬಿಸಿದೆ. ಎಲ್ಲರಿಗೂ

ಎಲ್ಲ ಕಾಲಗಳಿಗೂ ಸಮಾನವಾಗಿರುವುದಿಲ್ಲ. ಯಾವುದೇ ವ್ಯಕ್ತಿ ತನ್ನ ಕಾಲ ಮತ್ತು ಪರಿಸರ ವಿದ್ಯಮಾನ ಗಳು ತನ್ನ ಧರ್ಮ ಮತ್ತು ವಿಶ್ವಾಸದ ಪಾಲಿಗೆ ಎಷ್ಟು ಪ್ರತಿಕೂಲ ಹಾಗೂ ಅಪಾಯಕಾ ಯಾಗಿದೆ ಎಂಬುದರ ಆಧಾರದಲ್ಲೇ 'ಇಅ್‌ತಿಝಾಲ್' ಅಥವಾ ಸಮಾಜದಿಂದಗಲಿ ಏಕಾಂತದ ಬದುಕುವ ಸ್ವರೂಪ ಹೇಗಿರಬೇಕೆಂಬುದನ್ನು ನಿರ್ಧರಿಸಬೇಕು ಎಂದಷ್ಟೇ ಹೇಳಬಹುದು.

ಪರಿಸ್ಥಿತಿಯು ದುರದೃಷ್ಟವಶಾತ್, ಸಂಪೂರ್ಣ ಹದಗೆಟ್ಟಿದ್ದು, ಧರ್ಮದ ಮೂಲಭೂ ತತ್ವಾದರ್ಶಗಳನ್ನು ಕೂಡಾ ಪಾಲಿಸುವುದು ಕಷ್ಟವಾದಾಗ ಧರ್ಮದ ಅತ್ಯಂತ ಪ್ರಾಮುಖ ಬೋಧನೆಗಳ ಅಭಿವ್ಯಕ್ತಿ ಮತ್ತು ಪ್ರಕಟನೆ ಕೂಡಾ ಅಸಾಧ್ಯವಾದಾಗ ಅಂಥ ಸ್ಥಿತಿಯಲ್ಲಿ ಮಾತ್ರ 'ಏಕಾಂತ'ದ ಅಂತಿಮ ಸ್ವರೂಪವನ್ನು ಅಂಗೀಕರಿಸಿ ಅದಕ್ಕೆ ಶರಣಾಗಬಹುದು. 'ಅಸ್‌ಹಾಬುಲ ಕಹ್ಫ್' (ಗುಹಾ ವಾಸಿಗಳು)ನ ಚರಿತ್ರೆಯಲ್ಲಿ ಇದೇ ಮಾದರಿಯನ್ನು ನಾವು ಕಾಣುತ್ತೇವೆ. ತಮ ಪ್ರದೇಶದಲ್ಲಿ ಸತ್ಯವನ್ನು ಹೇಳುವ ಅನುಮತಿಯೇ ನಿರಾಕರಿಸಲ್ಪಟ್ಟಾಗ ಮತ್ತು ತಾವು ಸತ್ಯದೆಡೆ ಜನರನ್ನು ಕರೆಯಲು ಒಂದು ಶಬ್ದ ಉಸುರಿದರೂ ತಮ್ಮ ಮೇಲೆ ಕಲ್ಲಿನ ಮಳೆಗರೆಯಲಾಗು ವುದು ಎಂದು ಮನವರಿಕೆಯಾದಾಗ ಮಾತ್ರವೇ ಅವರು ಸಂಪೂರ್ಣ ಏಕಾಂತದ, ಗುಹೆಯ ಜೀವನಕ್ಕೆ ಶರಣಾದರು.

ಪರಿಸ್ಥಿತಿ ಇಷ್ಟು ಅಪಾಯಕಾರಿ ಮಟ್ಟಕ್ಕೆ ತಲುಪಿಲ್ಲವೆಂದಾದರೆ ಆಗ ಅನುಸರಿಸು ಏಕಾಂತದ ಸ್ವರೂಪವು ತೀರಾ ಭಿನ್ನವಾಗಿರುವುದು. ಅದು ಸಹಜವಾಗಿಯೇ ಇದಕ್ಕಿಂತ ಸರ ಸ್ವರೂಪದ್ದಾಗಿರುವುದು. ಅಂದರೆ ಮಾನವ ಸಮಾಜವನ್ನು ಸಂಪೂರ್ಣ ತೊರೆಯುವ ಕೇವ ಸಮಾಜದ ಸಾಂಘಿಕ ವ್ಯವಹಾರಗಳನ್ನು ಮಾತ್ರ ತೊರೆದು, ಪ್ರಕ್ಷೋಭೆಯ ರೂವಾರಿಗಳನ ಅವರ ಪಾಡಿಗೆ ಬಿಟ್ಟು, ಅವರು ಉರಿಸಿದ ಕೆಡುಕಿನ ಬೆಂಕಿಯನ್ನು ನಂದಿಸಲು ಕೈ ಮತ್ತ ನಾಲಿಗೆಯನ್ನು ಬಳಸಿ ಶ್ರಮಿಸುವ ಬದಲು ಕೇವಲ ಮನಸ್ಸಿನಲ್ಲಿ ಆ ಬಗ್ಗೆ ಅಸಮಾಧಾನ ಮಾತ್ರ ವ್ಯಕ್ತಪಡಿಸಿ ಸುಮ್ಮನಿರಬಹುದು. ಕೇವಲ ತನ್ನ ಜೀವನದ ಅನಿವಾರ್ಯ ಅಗತ್ಯಗಳಿಗಾ ಯಾವುದಾದರೂ ಧರ್ಮಸಮ್ಮತ ವೃತ್ತಿ ಅಥವಾ ಉದ್ಯೋಗವನ್ನು ಅವಲಂಬಿಸಿ, ನಮಾಝ್ ಉಪವಾಸ, ಝಕಾತ್, ಹಜ್ಜ್ ಮುಂತಾದ ಕಡ್ಡಾಯ ಕರ್ಮಗಳನ್ನು ಪಾಲಿಸುತ್ತಾ, ತ ಸಹಜೀವಿಗಳ ಬಗ್ಗೆ ತನ್ನ ಮೇಲಿರುವ ಕರ್ತವ್ಯಗಳನ್ನು ಈಡೇರಿಸುತ್ತಾ ತನ್ನ ಪರಲೋ ಮೋಕ್ಷದ ಬಗ್ಗೆ ಚಿಂತಿಸುತ್ತಾ ಬದುಕಬಹುದು.

ಸಾಮಾನ್ಯ ಅಂದಾಜಿನಂತೆ ಒಂದು ಅತ್ಯಂತ ಕೆಟ್ಟ ಮುಸ್ಲಿಮ್ ಸಮಾಜದಲ್ಲಿ ಪರಿಸ್ಥಿತಿಯು ಹೆಚ್ಚೆಂದರೆ ಇಷ್ಟು ಮಾತ್ರ ಕೆಡಬಹುದು. ಇದಕ್ಕಿಂತ ಹೆಚ್ಚು ಕೆಡಲಾರದು. ಏಕೆಂದರೆ ಏಕಾಂ ಅಥವಾ ಪಲಾಯನದ ಅನುಮತಿ ಕೊಡುವ ಹದೀಸ್‌ಗಳಲ್ಲೂ ನಮಾಝ್‌ನ ಸಂಸ್ಥಾಪ ಮತ್ತು ಅಲ್ಲಾಹನ ಆರಾಧನೆಯ ಜೊತೆ ಝಕಾತ್ ಪಾವತಿ ಮಾಡಬೇಕೆಂಬ ಆದೇಶವೂ ಇದೆ ಇತರ ಸಹಜೀವಿಗಳ ಜೊತೆ ಏನಾದರೂ ಸಂಬಂಧವಿದ್ದರೆ ಮಾತ್ರ ಝಕಾತ್ ಪಾವತಿಸಲು ಸಾಧ್ಯವಾಗುತ್ತದೆ. ಗುಹೆಗಳಲ್ಲೋ, ಕಾಡುಗಳಲ್ಲೋ, ವಾಸಿಸುವವರು ಝಕಾತ್ ಕೊಡು

ಪ್ರಶ್ನೆಯೇ ಉದ್ಭವಿಸುವುದಿಲ್ಲ.

## ಎಚ್ಚರಿಕೆಯಿಂದ ತೀರ್ಮಾನಿಸಬೇಕು:

ಕೊನೆಯದಾಗಿ ಒಂದು ಪ್ರಾಮುಖ್ಯ ಸಂಗತಿಯನ್ನು ನೆನಪಿಸಬೇಕಾದುದು ಬಹಳ ಆವಶ್ಯಕವಾಗಿದೆ. ಅದೇನೆಂದರೆ ಸಮಾಜದ ಪರಿಸ್ಥಿತಿಯು ಎಷ್ಟು ಅಪಾಯಕಾರಿ ಮಟ್ಟಕ್ಕೆ ಇಳಿದಿದೆ ಮತ್ತು ಈ ಪರಿಸ್ಥಿತಿಯಲ್ಲಿ ತಮ್ಮ ನಿಲುವೇನಾಗಿರಬೇಕು ಎಂಬುದನ್ನು ತೀರ್ಮಾನಿಸುವಾಗ ಗರಿಷ್ಠ ಎಚ್ಚರಿಕೆ ವಹಿಸಬೇಕಾಗುತ್ತದೆ. ಏಕೆಂದರೆ, ಮನುಷ್ಯ ಪ್ರಕೃತಿಯಲ್ಲಿರುವ ಎರಡು ವಿಶೇಷತೆಗಳು, ಈ ವಿಷಯದಲ್ಲಿ ಸರಿಯಾದ ತೀರ್ಮಾನ ಕೈಗೊಳ್ಳುವ ನಿಟ್ಟಿನಲ್ಲಿ ಅಡ್ಡಿಯಾಗಬಹುದು.

ಮನುಷ್ಯ ಪ್ರಕೃತಿಯಲ್ಲಿ ಎರಡು ಬಗೆಯ ಒಲವುಗಳಿವೆ. ಒಂದು ಏಕಾಂತದ ಒಲವು, ಇನ್ನೊಂದು ಆರಾಮ-ಪ್ರಿಯತೆ. ಕೆಲವರು ಈ ಪೈಕಿ ಯಾವುದಾದರೊಂದು ವೈಯಕ್ತಿಕ ಒಲವಿಗೆ ಮಣಿದು ಅದರ ಪ್ರಭಾವದಿಂದಲೇ, ಸಮಾಜದ ಪರಿಸ್ಥಿತಿ ಎಷ್ಟು ಅಪಾಯಕಾರಿಯಾಗಿದೆ ಯೆಂಬುದರ ಬಗ್ಗೆ ಬಹಳ ಉತ್ಪ್ರೇಕ್ಷಿತ ತೀರ್ಮಾನಗಳನ್ನು ಮಾಡಿ ಬಿಡುವ ಸಾಧ್ಯತೆ ಇದೆ. ಅಂಥ ವ್ಯಕ್ತಿಗಳು ಅನಗತ್ಯವಾಗಿ, ಸಾಮಾನ್ಯ ಪರಿಸ್ಥಿತಿಯನ್ನೂ ತೀರಾ ಅಪಾಯಕಾರಿ ಸ್ಥಿತಿಯೆಂದು ಪರಿಗಣಿಸಿ, ಏಕಾಂತದ ಕುರಿತು ಇರುವ ಹದೀಸ್‌ಗಳನ್ನೆಲ್ಲಾ ಆಧಾರವಾಗಿ ಬಳಸಿಕೊಂಡು, ಸಾಮಾಜಿಕ ಮತ್ತು ಸಂಘಟಿತ ಜೀವನದಿಂದ ಪರಾರಿಯಾಗುವ ಅಥವಾ ಅಪೇಕ್ಷಿತ ಸಂಘಟನೆ ಅಸ್ತಿತ್ವದಲ್ಲಿಲ್ಲದೆಡೆ, ಅದನ್ನು ಸ್ಥಾಪಿಸುವ ಹೊಣೆಯಿಂದ ತಾವು ಮುಕ್ತರೆಂದು ಭಾವಿಸುವ ಸಾಧ್ಯತೆಯೂ ಇರುತ್ತದೆ. ಆದರೆ ಹೀಗೆ ಮಾಡಿದರೆ ಅದರ ಕುರಿತು ತೀರ್ಮಾನವು ಅವರ ವೈಯಕ್ತಿಕ ಒಲವಿಗೆ ಮಣಿದು ಮಾಡಿದ ತೀರ್ಮಾನವೆನಿಸೀತೇ ಹೊರತು ಅದನ್ನು ಯಾವ ರೀತಿಯಲ್ಲೂ ಪ್ರವಾದಿ ವಚನಗಳ ಅನುಸರಣೆಯೆಂದು ಪರಿಗಣಿಸಲು ಸಾಧ್ಯವಿಲ್ಲ.

ಒಬ್ಬ ನೈಜ ಸತ್ಯವಿಶ್ವಾಸಿಯು ಈ ವಿಷಯದಲ್ಲಿ ಯಾವುದೇ ತೀರ್ಮಾನ ಕೈಗೊಳ್ಳುವಾಗ ಗರಿಷ್ಠ ಎಚ್ಚರಿಕೆ ವಹಿಸಬೇಕು. ಅವನು ಸಾಧ್ಯವಿದ್ದಷ್ಟು ಗರಿಷ್ಠ ಮಟ್ಟದಲ್ಲಿ ಸಂಘಟಿತ ಬದುಕಿಗೆ ಅಂಟಿಕೊಂಡಿರಲು ಮತ್ತು ಸಾಮುದಾಯಿಕ ಸಂಘಟನೆಯ ಉಳಿವು ಮತ್ತು ಅಭಿವೃದ್ಧಿಗಾಗಿ ತನ್ನಿಂದಾದ ಸೇವೆ ಸಲ್ಲಿಸಲು ಪ್ರಯತ್ನಿಸುತ್ತಿರಬೇಕು. ತನ್ನ ಧರ್ಮ ಮತ್ತು ವಿಶ್ವಾಸಕ್ಕೆ ಅಂಥ ನೈಜ, ಅತ್ಯಂತ ಭೀಕರ ಅಪಾಯ ಎದುರಾಗುವ ತನಕವೂ ಅವನು ಸಂಘಟನೆಯಿಂದ ಬೇರ್ಪಡುವ ಕುರಿತು ಆಲೋಚಿಸಬಾರದು. ಒಂದು ವೇಳೆ ಅನಿವಾರ್ಯವಾಗಿ ಅಂಥ ಪರಿಸ್ಥಿತಿ ಬಂದು ಬಿಟ್ಟರೂ ಸಮಾಜದಿಂದ ತಾನು ಬೇರ್ಪಡುವ ಬಗ್ಗೆ ಅವನು ಸಂತುಷ್ಟನಾಗಿರಬಾರದು. ಏಕೆಂದರೆ, ಧರ್ಮದ ಬಗ್ಗೆ ಇಸ್ಲಾಮ್ ಪ್ರತಿಪಾದಿಸುವ ಕಲ್ಪನೆಯನ್ನು ನೋಡಿದರೆ ಈ ಪ್ರವೃತ್ತಿ ಖಂಡಿತ ಶ್ಲಾಘನೀಯವೆನ್ನುವಂತಿಲ್ಲ. ಸಂಘಟಿತ ಬದುಕನ್ನು ತೊರೆಯುವುದೆಂದರೆ ಬೆಳೆದ ಉಗುರನ್ನು ಕತ್ತರಿಸುವಂತಹ ಸರಳ ಕ್ರಿಯೆಯಲ್ಲ. ಇದು ಉಗುರನ್ನು ಮಾಂಸ ಸಹಿತ ಕಿತ್ತು ತೆಗೆಯುವಂತಹ ಕ್ರಿಯೆ. ಈ ಕ್ರಿಯೆ ಬಹಳ ಹಿಂಸಾತ್ಮಕ. ಯಾರೂ ತಮ್ಮ ಇಚ್ಛೆಯಿಂದ ಇದನ್ನು ಮಾಡಿಸಿಕೊಳ್ಳಲು ಸಿದ್ಧರಾಗುವುದಿಲ್ಲ.